ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಟಿ. ಸಿದ್ದಲಿಂಗಯ್ಯ





ಪ್ರಕಟಣೆ :
ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು - 560 001

ಪ್ರತಿಭಾವಂತ ಸಂಸದೀಯ ಪಟುಗಳ
ಬದುಕು ಬರಹ ಮಾಲಿಕೆ

ಟಿ. ಸಿದ್ದಲಿಂಗಯ್ಯ

# Eminent Parlimentarian Series

# T. SIDDALINGAIAH



ಮೊದಲ ಮುದ್ರಣ:
ಜನವರಿ, 2000 - 1,500 ಪ್ರತಿಗಳು

ಮುಖಪುಟ ವಿನ್ಯಾಸ:
ಸರ್ಕಾರಿ ಮುದ್ರಣಾಲಯ
ಬೆಂಗಳೂರು.




ಪ್ರಕಟಣೆ:
ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001.

# ಪೀಠಿಕೆ

ದೇಶದ ಸ್ವಾತಂತ್ರ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದು ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಡಾ: ರಾಂಮನೋಹರ ಲೋಹಿಯಾ ಮತ್ತು ಶೇಖ್ ಮಹಮದ್ ಅಬ್ದುಲ್ ಮತ್ತು ಕೃಷ್ಣಮೆನನ್ ಮೊದಲಾದ ಗಣ್ಯರ ಬಗ್ಗೆ ಆಂಗ್ಲ ಭಾಷೆಯಲ್ಲಿ ಪ್ರಕಟವಾಗಿದ್ದ ಕಿರುಹೊತ್ತಿಗೆಗಳನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇನೆ.

ಹಾಗಿದ್ದಲ್ಲಿ ಸಂಸದೀಯ ಪಟುಗಳಾದ ಅನೇಕ ಮಹನೀಯರ ಕುರಿತ ಕಿರುಹೊತ್ತಿಗೆಗಳನ್ನು ಸಿದ್ದಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯ ಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪನವರ ಹಾಗೂ ಇನ್ನಿತರೆ ಸಂಸದೀಯ ಪಟುಗಳ ಬಗೆಗಿನ ಪ್ರತಿಗಳನ್ನು ಹೊರತರಲಾಗಿದೆ.

ಈಗ ಶ್ರೀ ಟಿ. ಸಿದ್ದಲಿಂಗಯ್ಯನವರ ಬಗ್ಗೆ ಶ್ರೀ ಜಿ. ದಕ್ಷಿಣಾಮೂರ್ತಿಯವರು ರಚಿಸಿರುವ ಪುಸ್ತಕದ ಪ್ರತಿಯನ್ನು ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಈ ಲೇಖಕರಿಗೆ ಹಾಗೂ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಾಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇನೆ.

ಡಿ.ಬಿ.ಕಲ್ಮಣಕರ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಎಂ.ವಿ. ವೆಂಕಟಪ್ಪ,
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಮೊದಲ ಮಾತು

ಮೈಸೂರು ಕಾಂಗ್ರೆಸ್‌ನ ಸಂಸ್ಥಾಪಕರೂ, ಪ್ರಥಮ ಅಧ್ಯಕ್ಷರೂ ಆಗಿ ಈ ನಾಡಿನಲ್ಲಿ ಮಹಾತ್ಮ ಗಾಂಧೀಜಿಯವರ ಅಹಿಂಸಾ ಸತ್ಯಾಗ್ರಹದ ರೂವಾರಿಯಾಗಿ, ಭಾರತ ಸೇವಾದಳದ ಹಿಂದಿನ ಪ್ರೇರಕಶಕ್ತಿಯಾಗಿ, ಮೈಸೂರು ಕಾಂಗ್ರೆಸ್ ಅಧಿವೇಶನ ಹಾಗೂ ಧ್ವಜ ಸತ್ಯಾಗ್ರಹದ ನೇತಾರನಾಗಿ, ಆಗ ಹೊರನಾಡೆನಿಸಿದ ಧಾರವಾಡ ಹಾಗೂ ಜಮಖಂಡಿ ಪ್ರಾಂತ್ಯಗಳ ಕಾಂಗ್ರೆಸ್ ಸಮಿತಿಗಳಲ್ಲೂ ಉಪಾಧ್ಯಕ್ಷನಾಗಿ, ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆ ಹಾಗೂ ವಿಧಿವಿಧಾಯಕ ಪರಿಷತ್ತುಗಳಲ್ಲಿ, ಜನ ಪ್ರತಿನಿಧಿಯಾಗಿ ಭಾರತ ದೇಶದ ಸ್ವಾತಂತ್ರ್ಯದ ಹರಿಕಾರನಾಗಿ, ಸ್ವಾತಂತ್ರ್ಯಾನಂತರದಲ್ಲಿ ರಾಜ್ಯದ ಪ್ರಜಾಸರ್ಕಾರದಲ್ಲಿ ಶಾಸಕನಾಗಿ, ಸಚಿವನಾಗಿ, ಬಾರತ ಸಂವಿಧಾನ ಸಭೆಯಲ್ಲೂ ಸಂಸತ್ತಿನ ರಾಜ್ಯ ಸಭೆಯಲ್ಲೂ ಸದಸ್ಯನಾಗಿ ಸುಮಾರು 4 ದಶಕಗಳ ಕಾಲ ನಿರಂತರ ಸೇವೆ ಸಲ್ಲಿಸಿದ ಮಹಾನ್ ಶಕ್ತಿ ಶ್ರೀ ಟಿ. ಸಿದ್ದಲಿಂಗಯ್ಯ.

ಈ ನಾಡಿನ ಜನತೆಗೆ ಸಿದ್ದಲಿಂಗಯ್ಯನವರ ಕೊಡುಗೆಯನ್ನು ನೆನಪಿಸುವ ಘನ ಸ್ಮಾರಕ 'ಸಿದ್ದಲಿಂಗಯ್ಯ ಸನ್ಮಾನ ಸಮಿತಿ'ಯ ಸಂಕಲ್ಪ ಮತ್ತು ಕಾರ್ಯನಿಷ್ಠೆಯ ಫಲವಾಗಿ ಶಿವಪುರದಲ್ಲಿ 'ವೀರ ಸೌಧ' ಎನಿಸಿ ನೆಲೆನಿಂತಿದೆ. ಬೆಂಗಳೂರು ಮಹಾನಗರಪಾಲಿಕೆ ಕಬ್ಬನ್ ಪಾರ್ಕ್‌ನ ಪೂರ್ವದ ಬಾಗಿಲಿನ ಮುಂದಿರುವ ವೃತ್ತಕ್ಕೆ ಇವರ ಹೆಸರನ್ನಿಟ್ಟು ಗೌರವಿಸಿದೆ. ಸಿದ್ದಲಿಂಗಯ್ಯನವರ ಹುಟ್ಟೂರಾದ ದೊಡ್ಡಬಳ್ಳಾಪುರದ ಪುರಸಭೆ ಸಹ ಪಟ್ಟಣದ ಬಸ್ ನಿಲ್ದಾಣದ ಬದಿಯ ವೃತ್ತಕ್ಕೆ ಶ್ರೀಯುತರ ಹೆಸರನ್ನಿಟ್ಟು ಸ್ಮರಿಸಿದೆ.

1975ರಲ್ಲಿ ಶ್ರೀ ಕೆಂಗಲ್ ಹನುಮಂತಯ್ಯನವರ ನೇತೃತ್ವದಲ್ಲಿ ಸ್ಥಾಪನೆಗೊಂಡ 'ಸಿದ್ದಲಿಂಗಯ್ಯ ಸನ್ಮಾನ ಸಮಿತಿ' ಟಿ. ಸಿದ್ದಲಿಂಗಯ್ಯನವರ 80ನೇ ಹುಟ್ಟುಹಬ್ಬದ ನೆನಪಿಗಾಗಿ ಹೊರತಂದ ಸ್ಮರಣ ಸಂಚಿಕೆ ಸಿದ್ದಲಿಂಗಯ್ಯನವರ ಅನೇಕಾನೇಕ ಸಹವಂದಿಗರು ಬಿಡಿಸಿದ ಶ್ರೀಯತರ ಬದುಕಿನ ಹಲವು ಮುಖಗಳ ಪ್ರಾಮಾಣಿಕ ಚಿತ್ರಣಗಳನ್ನು ಹೊತ್ತ ಜೀವಂತ ಸ್ಮಾರಕವಾಗಿ ಮೂಡಿ ಬಂದಿದೆ.

ಇವೆಲ್ಲಕ್ಕೂ ಮಿಗಿಲಾಗಿ, ಜನಜಾಗೃತಿಯನ್ನುಂಟುಮಾಡಿ ಅತ್ಯಮೂಲ್ಯವಾದ ಸ್ವಾತಂತ್ರ್ಯವನ್ನು ಪ್ರಜಾಕೋಟಿಗೆ ಕೊಡಮಾಡಿ ತನ್ನ ಬದುಕನ್ನು ಸಾರ್ಥಕಗೊಳಿಸಿಕೊಂಡ ಸಾಧನೆಯನ್ನು ದಿನನಿತ್ಯ ನೆನೆದು ಕೊಂಡಾಡುವ ಅಖಂಡ ಕರ್ನಾಟಕದ ಲಕ್ಷೋಪಲಕ್ಷ ಜನಮನಗಳು ಟಿ. ಸಿದ್ದಲಿಂಗಯ್ಯನವರ ವಿರಾಟ್ ವ್ಯಕ್ತಿತ್ವದ ನಿತ್ಯ ಸತ್ಯ ಸ್ಮಾರಕಗಳಾಗಿ ನಿಂತಿವೆ.

ಸಿದ್ದಲಿಂಗಯ್ಯನವರ ಒಡನಾಡಿದ ಯಾರೇ ವ್ಯಕ್ತಿಯನ್ನು ಕೇಳಿ, ಅವರಿಂದ ತತ್‌ಕ್ಷಣವೇ ಭಾವ ತುಂಬಿ ಬರುವ ಮಾತುಗಳು - 'ಉದಾತ್ತ ಜೀವಿ', 'ಪ್ರಾಮಾಣಿಕರು', 'ಸರಳ ಹೃದಯಿ', 'ಸ್ನೇಹಮಯಿ', 'ನಿಸ್ವಾರ್ಥಿ', 'ನಿರ್ಮೋಹಿ', 'ನಿರ್ಲಿಪ್ತ', 'ಸ್ಥಿತಪ್ರಜ್ಞ', 'ನಿಷ್ಕಾಮಯೋಗಿ', 'ಅಜಾತ ಶತೃ' - ಸಿದ್ದಲಿಂಗಯ್ಯನವರ ಬಗ್ಗೆ ಸಾಮಾನ್ಯವಾಗಿ ಕೇಳಿಬರುವ ಈ ಗುಣಗಾನ ಕೇವಲ ಉಪಚಾರದ ಹೊಗಳಿಕೆಯಲ್ಲ ಜನಮನದ ಹೃದಯದಾಳದಿಂದ ಹೊಮ್ಮಿ ಬರುವ

ಪ್ರಾಮಾಣಿಕ ನಿಷ್ಪತ್ತಿಗಳು, ಸಿದ್ದಲಿಂಗಯ್ಯನವರನ್ನು ನೆನಪಿಸಿಕೊಳ್ಳುವಾಗ ಅವರ ರಾಜಕೀಯ ವಿರೋಧಿಗಳೂ ಭಾವಪೂರ್ಣರಾಗಿ ಮೃದುವಾಗಿ ಬಿಡುತ್ತಾರೆ. ಕೆಲವರು ಮಿತ್ರರು ಸಿದ್ದಲಿಂಗಯ್ಯನವರನ್ನು "ಹುಚ್ಚು" ಎಂದು ಹಾಸ್ಯ ಮಾಡಿದುದನ್ನು ಕೇಳಿದ ಡಿ.ವಿ.ಜಿ. ಯವರು ಇಂತಹ "ಹುಚ್ಚ" ನಮ್ಮಲ್ಲಿ ಹೆಚ್ಚು ರಾಜಕಾರಣಿಗಳಾಗಿದ್ದಿದ್ದರೆ ನಮ್ಮನಾಡೇ ಪಾವನವಾಗುತ್ತಿತ್ತೆಂದು ಹಲುಬಿದ್ದಾರೆ. ಇದಿಷ್ಟು ಸಿದ್ದಲಿಂಗಯ್ಯನವರ ಮಹಾನ್ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಷ್ಟೆ.

ಕರ್ನಾಟಕ ರಾಜ್ಯದ ಇತಿಹಾಸದಲ್ಲಿ ನಾಡ ಸೇವೆಗೆ ತೊಡಗಿಸಿಕೊಂಡು ಶಾಸಕರಾಗಿ ಶ್ರಮಿಸಿದ ಸಾರ್ಥಕ ಪುರುಷರನ್ನು ಗುರ್ತಿಸಿ ಮುಂಬರುವ ರಾಜಕೀಯ ಪೀಳಿಗೆಗೆ ದಾರಿದೀಪಗಳಾಗುವಂತೆ ಇಂಥವರ ವ್ಯಕ್ತಿತ್ವಗಳನ್ನು ದಾಖಲಿಸಿ **"ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ"** ಮಾಲಿಕೆಯಲ್ಲಿ ಪ್ರಕಟಗೊಳಿಸುವ ಮಹಾತ್ಕಾರ್ಯವನ್ನು ಕರ್ನಾಟಕ ವಿಧಾನ ಮಂಡಲ ಹಮ್ಮಿಕೊಂಡಿರುವುದು ಶ್ಲಾಘನೀಯ.

ಈ ಮಾಲಿಕೆಯಲ್ಲಿ ಟಿ. ಸಿದ್ದಲಿಂಗಯ್ಯನವರಂಥ ಆದರ್ಶ ಪುರುಷರನ್ನು ಪರಿಚಯಿಸುವ ಅವಕಾಶವನ್ನು ನನಗೆ ಒದಗಿಸಿರುವುದಕ್ಕಾಗಿ ವಿಧಾನ ಮಂಡಲದ ಗ್ರಂಥಾಲಯ ಸಮಿತಿಯ ಅಧ್ಯಕ್ಷರಿಗೂ ಎಲ್ಲ ಸದಸ್ಯರಿಗೂ ನಾನು ಆಭಾರಿಯಾಗಿದ್ದೇನೆ. ಸಿದ್ದಲಿಂಗಯ್ಯನವರ ಘನ ವ್ಯಕ್ತಿತ್ವಕ್ಕೆ ಮತ್ತು ಈ ಪರಿಚಯ ಮಾಲಿಕೆಯ ಪ್ರಕಟಣೆಯನ್ನು ಹಮ್ಮಿಕೊಂಡ ಕರ್ನಾಟಕ ವಿಧಾನ ಮಂಡಲದ ಘನತೆಗೆ ಕುಂದು ಬಾರದ ರೀತಿಯಲ್ಲಿ ಗ್ರಂಥ ರಚನೆ ಮಾಡುವ ಕಾರ್ಯದ ಹಿಂದಿರುವ ಮಹತ್ತರ ಜವಾಬ್ದಾರಿಯನ್ನು ಸದಾ ಗಮನದಲ್ಲಿಟ್ಟುಕೊಂಡು ಆದಷ್ಟು ಎಚ್ಚರದಿಂದ ಈ ಕೃತಿ ರಚನೆಯನ್ನು ಸಾಧಿಸಿ ತಮ್ಮ ಮುಂದಿಟ್ಟಿರುತ್ತೇನೆ. ಇದು ನನ್ನ ಚೊಚ್ಚಲ ಕೃತಿ. ತಿಳಿಯದೆ ಆಗಿರಬಹುದಾದ ತಪ್ಪುಗಳನ್ನು ಓದುಗರು ವಿಶಾಲಹೃದಯರಾಗಿ ಮನ್ನಿಸುವರೆಂದು ನಂಬುತ್ತೇನೆ.

ಶ್ರೀ ಟಿ. ಸಿದ್ದಲಿಂಗಯ್ಯನವರ ಬದುಕು ಸಾಧನೆಗಳ ಬಗೆಗಿನ ಎಲ್ಲಾ ಸಂಗತಿಗಳನ್ನೂ ದಾಖಲಿಸುವುದೊಂದು ದೊಡ್ಡ ಕೆಲಸ. ಬರೆಯುತ್ತಾ ಕುಳಿತರೆ ಪುಟಗಳು ಬೆಳೆಯುತ್ತಲೇ ಹೋಗುತ್ತವೆ. ಸಮಯ ಕಳೆಯುತ್ತಲೇ ಹೋಗುತ್ತದೆ. ಈ ಕೃತಿಯನ್ನು ರಚಿಸುವಲ್ಲಿ ನಾನು ಈ ಬಗೆಯ ಇತಿಮಿತಿಗಳಲ್ಲಿ ಕೆಲಸ ಮಾಡಬೇಕಾಯಿತು. ಸಿದ್ದಲಿಂಗಯ್ಯನವರ ಬದುಕಿನ ಒಂದೊಂದು ಘಟನೆಯೂ ಒಂದೊಂದು ರೀತಿಯಲ್ಲಿ ವಿಶೇಷವೆನಿಸುತ್ತಿದ್ದುದರಿಂದ ಗ್ರಂಥದ ವ್ಯಕ್ತಿ ಪರಿಚಯ ಭಾಗಕ್ಕೆ ಸೂಚಿಸಲಾದ ಮಿತಿಯಲ್ಲಿ ಯಾವುದನ್ನು ಆರಿಸಿಕೊಳ್ಳಬೇಕು ಯಾವುದನ್ನು ಬಿಡಬೇಕು ಎನ್ನುವುದು ಒಂದು ಬಗೆಯಲ್ಲಿ ಗೊಂದಲ ಉಂಟುಮಾಡಿದರೆ ಮತ್ತೊಂದು ಆಯಾಮದಲ್ಲಿ ಶ್ರೀಯುತರ ಶಾಸಕೀಯ ಪಟುತ್ವ ನಿರೂಪಿಸಲು ನೀಡಿದ ಮಿತಿಯಲ್ಲಿ ಸದನ ಕಲಾಪಗಳ ವರದಿಗಳಿಂದ ಪುಟಗಳನ್ನು ತುಂಬುವುದು ಇನ್ನೊಂದು ಬಗೆಯಲ್ಲಿ ಗೊಂದಲಮಯವಾಯಿತು. ಕಾರಣ, ಸಿದ್ದಲಿಂಗಯ್ಯನವರು ಕೇವಲ ಕಾರಣ ಪುರುಷರಂತೆ ಮೈದೋರಿ ಪ್ರಜಾಸ್ವಾತಂತ್ರ್ಯದ ತಮ್ಮ ಸಂಕಲ್ಪ ಸಿದ್ಧಿಯಾಗುತ್ತಲೇ ಕೈಂಕರ್ಯ ತೀರಿತೆಂದು ರಾಜಕೀಯದಿಂದ ದೂರವಾಗ ಬಯಸಿದರು. ಸ್ವಾತಂತ್ರ್ಯಾನಂತರದ ಅವರ ಕಾರ್ಯಾಚರಣೆ ಕೇವಲ ಅನಿವಾರ್ಯಗಳಿಗಷ್ಟೇ

ಸೀಮಿತವಾಯಿತು. ಸ್ವಾತಂತ್ರ್ಯವನ್ನು ಸಾಧಿಸಿಕೊಟ್ಟೆನೆಂಬ ಹಮ್ಮು ಅವರಲ್ಲಿ ಉದ್ಭವಿಸಲಿಲ್ಲ. ಅಧಿಕಾರಸ್ಥಾನಗಳನ್ನು ಬಯಸಿ ಅವುಗಳ ಹಿಂದೆ ಹೋಗಲಿಲ್ಲ. ಕಾಂಗ್ರೆಸ್, ಹಿಂದೆ ಕಂಡುಕೇಳರಿಯದ ವ್ಯಕ್ತಿಗಳು ಸ್ವಾತಂತ್ರ್ಯ ಸಿದ್ಧಿಯಾಗುತ್ತಿದ್ದಂತೆಯೇ ಸಾಧಕರ ಸೋಗು ಹಾಕಿಕೊಂಡು ಅಧಿಕಾರಗಳಿಗಾಗಿ ಪೈಪೋಟಿ ನಡೆಸಿದ್ದು ಸಿದ್ದಲಿಂಗಯ್ಯನವರಿಗೆ ಜಿಗುಪ್ಸೆಯನ್ನುಂಟುಮಾಡಿತು. ಸ್ವಾತಂತ್ರ್ಯಾನಂತರದ ಸಮಯಸಾಧಕ ರಾಜಕೀಯ ಪ್ರವೃತ್ತಿ ಎಳ್ಳಷ್ಟೂ ಹಿಡಿಸದಾಗಿ ಅದರಿಂದ ಆದಷ್ಟು ದೂರ ಉಳಿದರು. ಮುಂದಾಳತ್ವ, ಮಾರ್ಗದರ್ಶನ ಬೇಕೆಂದು ಕೋರಿದ ಕಡೆ ವಾಸ್ತವಿಕ ವಿದ್ಯಮಾನಗಳ ಪ್ರತಿಕೂಲಗಳನ್ನೂ ಲೆಕ್ಕಿಸದೆ ಜೊತೆಗೂಡುತ್ತಿದ್ದರು. ಆದರೆ ತನ್ನ ಆದರ್ಶಕ್ಕೆ ಒಪ್ಪುವ ಸನ್ನಿವೇಶ ಇಲ್ಲವೆಂದಾದ ಕೂಡಲೇ ಅಲ್ಲಿಂದ ಹೊರಗೆ ಬಂದುಬಿಡುತ್ತಿದ್ದರು.

ಸಿದ್ದಲಿಂಗಯ್ಯನವರು ಒಬ್ಬ ರಾಜಕಾರಣಿ ಎನ್ನುವುದಕ್ಕಿಂತಲೂ ಮುತ್ಸದ್ದಿ ಎನ್ನಬಹುದು. ವ್ಯವಸ್ಥೆಯೊಳಗೇ ಉಳಿದು ಅವರ ಹಿರಿಯ ಅನುಭವದಿಂದ ಆಂತರಿಕ ಅಸಮರ್ಪಕತೆಯನ್ನು ಸರಿಪಡಿಸಬಹುದಿತ್ತೆಂಬ ಶಂಕೆ ಏಳುವುದು ಸಹಜ. ಆದರೆ ಅವರು ಮಹಾತ್ಮಾಗಾಂಧಿಯವರು ಹೇಳಿದಂತೆ "chaos is better than British Rule" ಎಂಬ ಮಾತಿನಲ್ಲಿ ನಂಬಿಕೆ ಇಟ್ಟವರು. ಅಲ್ಲದೆ ಯಾರಿಗೇ ಆದರೂ ತಮ್ಮ ಅನುಭವದಿಂದ ಕಲಿತ ಪಾಠಕ್ಕೆ ಶಿಕ್ಷಣದಿಂದ ಕಲಿತ ಪಾಠ ಸಾಟಿಯಾಗಲಾರದೆಂಬ ಸತ್ಯವನ್ನು ಅರಿತಿದ್ದರು.

ಹೀಗಾಗಿ ಗ್ರಂಥದ ಎರಡನೇ ಭಾಗಕ್ಕೆ ವಸ್ತುವೈವಿಧ್ಯದ ಕೊರತೆಯುಂಟಾಯಿತು. ಇದನ್ನು ಸರಿದೂಗಿಸಲು ಅವರ ದಿಟ್ಟತನ ದೃಢನಿಶ್ಚಯಗಳನ್ನು ಪ್ರತಿಬಿಂಬಿಸುವ ಕೆಲವು ಸಂಭಾಷಣೆಗಳನ್ನು, ವರದಿಗಳನ್ನು ಮತ್ತು ಭಾಷಣಗಳನ್ನು ಸೇರಿಸುವ ಮೂಲಕ ಸಮನ್ವಯ ಸಾಧಿಸುವ ಪ್ರಯತ್ನ ಮಾಡಿದ್ದೇನೆ. ಸಿದ್ದಲಿಂಗಯ್ಯನವರು ಶಾಸಕರಾಗಿ ರೂಪುಗೊಂಡಿದುದರ ಹಿಂದೆ ಅವರ ವೈಯಕ್ತಿಕ ಬದುಕಿನ ಅನೇಕ ಪ್ರೇಕರಣೆಗಳಿದ್ದುದರಿಂದ ಈ ಗ್ರಂಥಕ್ಕಾಗಿ ವಿಷಯಗಳನ್ನು ವಿಂಗಡಿಸಿ ವಿಭಾಗ ಮಾಡುವುದು ಸಹ ಕಷ್ಟದ ಕೆಲಸವೇ ಆಯಿತು. ಹೀಗಾಗಿ ಗ್ರಂಥವನ್ನು ವ್ಯಕ್ತಿ ಪರಿಚಯ, ನೀತಿ ಧೋರಣೆಗಳು ಮತ್ತು ಶಾಸಕ ಪಟುತ್ವ ಎಂದು ಮೂರು ಭಾಗಗಳಾಗಿ ವಿಂಗಡಿಸಿ ಒಪ್ಪಿಸಿದ್ದೇನೆ.

ಈ ವಿಶೇಷ ಸನ್ನಿವೇಶದಲ್ಲಿ ಮೂಡಿಬಂದ ಈ ಪರಿಚಯ ಗ್ರಂಥ ಓದುಗರಿಗೆ ಈ ಪ್ರಕಟಣೆ ಮಾಲೆಯ ಇತರ ಕೃತಿಗಳಿಗಿಂತಲೂ ವಿಭಿನ್ನವಾಗಿ ಕಾಣಬಹುದು. ಸಹೃದಯ ಓದುಗರು ಅದನ್ನು ತದ್ರೂಪದಲ್ಲೇ ಸ್ವೀಕರಿಸಿ ಓಲೈಸುವರೆಂದು ನಂಬುತ್ತೇನೆ.

ಬೆಂಗಳೂರು, ಜಿ. ದಕ್ಷಿಣಾಮೂರ್ತಿ

ದಿನಾಂಕ: 25.10.1999

ಟಿ. ಸಿದ್ದಲಿಂಗಯ್ಯ

## ಪರಿವಿಡಿ


| ಭಾಗ - ೧ | ಪುಟ |
|---|---|
| ವ್ಯಕ್ತಿ ಪರಿಚಯ | ೧-೪೨ |
| ಭಾಗ - ೨ | |
| ಸಿದ್ದಲಿಂಗಯ್ಯನವರ ರಾಜಕೀಯ ನೀತಿ, ಧೋರಣೆಗಳು | ೪೩-೭೮ |
| ಭಾಗ - ೩ | |
| ಸಿದ್ದಲಿಂಗಯ್ಯನವರ ಶಾಸಕಪಟುತ್ವ | ೮೧-೧೬೪ |

# ಭಾಗ-1

## ವ್ಯಕ್ತಿ ಪರಿಚಯ

### ಸ್ವಾತಂತ್ರ್ಯದ ಹರಿಕಾರ:

1938ರ ಏಪ್ರಿಲ್ ಹನ್ನೊಂದನೇ ದಿನ. ಮೈಸೂರು ಜಿಲ್ಲೆಯ ಮದ್ದೂರು ಬಳಿ ಇರುವ ಶಿವಪುರದಲ್ಲಿ ಅಂದು ಪ್ರಾತಃಕಾಲ 8.39ರ ವೇಳೆಯನ್ನು ಸಮೀಪಿಸುತ್ತಿದ್ದ ಘಳಿಗೆಗಳ ತವಕವನ್ನು ಕಂಡವರು ಇಡೀ ಕರ್ನಾಟಕ ರಾಜ್ಯದಲ್ಲಿ ಇಂದು ಬೆರಳೆಣಿಕೆಯಷ್ಟು ಜನ ಜೀವಿಸಿದ್ದರೆ ಹೆಚ್ಚು.

8.30ರ ಘಂಟೆಗೆ ಸರಿಯಾಗಿ ಮೈಸೂರು ಸಂಸ್ಥಾನದಲ್ಲಿ ಮೊಟ್ಟ ಮೊದಲಬಾರಿಗೆ ತ್ರಿವರ್ಣ ಧ್ವಜ ಹಾರಲಿತ್ತು. ಸಂಸ್ಥಾನದ ಪ್ರಜಾಕೋಟಿಗೆ ಅದು ತಮ್ಮ ಸ್ವಾತಂತ್ರ್ಯದ ಶುಭೋದಯದ ಸಂಕೇತ. ಅದೇ ಬ್ರಿಟಿಷರ ಕೃಪಾವಲಂಬಿತ ಸ್ಥಳೀಯ ರಾಜಾಧಿಪತ್ಯಕ್ಕೆ ತನ್ನ ಸರ್ವಾಧಿಕಾರದ ಅವಸಾನದ ಮುನ್ಸೂಚನೆ. ಅಂತೆಯೇ ಧ್ವಜಾರೋಹಣವನ್ನು ಭಂಗಗೊಳಿಸಲು ಸರ್ಕಾರ ಸೆಣಸಿ ನಿಂತಿತ್ತು. ತ್ರಿವರ್ಣಧ್ವಜ ಸತ್ಯಾಗ್ರಹದಲ್ಲಿ ತೊಡಗುವುದು ಹರಿಪುರ ಕಾಂಗ್ರೆಸ್ ರಾಷ್ಟ್ರೀಯ ಅಧಿವೇಶನದ ನಿರ್ಣಯಕ್ಕೆ ವಿರುದ್ಧವಾಗಿತ್ತು. ಭಾರತ ಸ್ವಾತಂತ್ರ್ಯ ಚಳುವಳಿಯ ನೇತಾರ ಮಹಾತ್ಮಗಾಂಧೀಜಿಯವರ ಅಭಿಪ್ರಾಯದಲ್ಲಿ ಆಳರಸರ ದಬ್ಬಾಳಿಕೆಯನ್ನು ನಿಭಾಯಿಸುವ ಶಕ್ತಿ ಸಂಸ್ಥಾನಗಳ ಪ್ರಜೆಗಳಿಗಿರಲಿಲ್ಲ. ಅಂಥ ಸಂದರ್ಭದಲ್ಲಿ ರಾಜಾಧಿಕಾರವನ್ನು ಎದುರಿಸಿ ಪ್ರಜಾತಂತ್ರಕ್ಕಾಗಿ ಹೋರಾಡುವ ಶಕ್ತಿ ಮೈಸೂರು ಸಂಸ್ಥಾನದ ಪ್ರಜೆಗಳಿಗಿದೆ ಎಂದು ದಾರ್ಷ್ಟ್ಯದಿಂದ ನುಡಿದು ಗಾಂಧೀಜಿಯವರ ಮನ ಒಲಿಸಿದ ಧೀಮಂತಿಕೆ ಕರ್ನಾಟಕದ ಆ ಒಬ್ಬ ಧೀರ ಕುವರನಲ್ಲಿತ್ತು. ಅಷ್ಟೇ ಅಲ್ಲ; ಸಂಸ್ಥಾನಗಳಲ್ಲಿ ನಡೆಸುವ ಸತ್ಯಾಗ್ರಹಗಳು ರಾಷ್ಟ್ರೀಯ ಕಾಂಗ್ರೆಸ್‌ನ ಹೆಸರಿನಲ್ಲಿ ನಡೆಯಬಾರದೆಂಬ ಗಾಂಧೀಜಿಯವರ ಷರತ್ತಿಗೂ ಆ ಧೀಮಂತನಲ್ಲಿ ಉತ್ತರವಿತ್ತು. ಈತನ ದೃಢನಿಷ್ಠೆಯ ಫಲವಾಗಿ ದೇಶೀಯ ಕಾಂಗ್ರೆಸ್ ಇತಿಹಾಸದಲ್ಲಿ ಮೊಟ್ಟಮೊದಲನೆಯದಾಗಿ ಮೈಸೂರು ಕಾಂಗ್ರೆಸ್ ಸ್ಥಾಪಿತಗೊಂಡಿತು.

ಈ ಮೈಸೂರು ಕಾಂಗ್ರೆಸ್‌ನ ಪ್ರಥಮ ಅಧಿವೇಶನ ತ್ರಿವರ್ಣ ಧ್ವಜಾರೋಹಣದೊಂದಿಗೆ ಅಂದು ಆರಂಭಗೊಳ್ಳಲು ಶಿಂಷಾ ನದೀ ತೀರದ ಮದ್ದೂರು ಬಳಿ ಶಿವಪುರದಲ್ಲಿ ಏರ್ಪಾಟಾಗಿತ್ತು. ಅಧಿವೇಶನದ ಎಂಟು ಎಕರೆಯ ವಿಶಾಲ ಮೈದಾನದ ನಡುವೆ ಆರು ಅಡಿ ಎತ್ತರದ ಸಭಾವೇದಿಕೆ ಮತ್ತದರ ಮೇಲೆ ಒಂದೂವರೆ ಅಡಿ ಎತ್ತರದ ಧ್ವಜ ವೇದಿಕೆ. ಅದರ ಮಧ್ಯೆ ಅರವತ್ತು ಅಡಿ ಎತ್ತರದ ಧ್ವಜ ಸ್ತಂಭ. ಅದಕ್ಕೆ ತ್ರಿವರ್ಣ ಧ್ವಜವನ್ನು ದುಂಡುಗಟ್ಟಿ ಧ್ವಜ ಸೂತ್ರವನ್ನು ಎಳೆದು ಏರಿಸಿದ ಕೂಡಲೇ ಧ್ವಜ ಹಾರಾಡುವಂತೆ ಸಜ್ಜುಗೊಳಿಸಲಾಗಿತ್ತು. ಮಹಿಳೆಯರೂ ಸೇರಿದಂತೆ ಸುಮಾರು ಇನ್ನೂರು ಜನ ಕಾಂಗ್ರೆಸ್ ಸ್ವಯಂಸೇವಕರು ಎಂಥ ಪರಿಸ್ಥಿತಿಯಲ್ಲೂ ಸ್ವಾತಂತ್ರ್ಯ ಧ್ವಜದ ಗೌರವ ರಕ್ಷಣೆ ಮಾಡಲು ದೀಕ್ಷೆ ತೊಟ್ಟವರಾಗಿ, ಶಿಸ್ತಿನಿಂದ ವೇದಿಕೆಯನ್ನು ಸುತ್ತುವರಿದು ನಿಂತಿದ್ದರು. ಇಡೀ ಮೈದಾನವನ್ನು ಪಸರಿಸಿ ಸುಮಾರು ಮೂವತ್ತು ಸಾವಿರಕ್ಕೂ ಮಿಕ್ಕ ಜನಸ್ತೋಮ ಹೆಂಗಸರು ಮಕ್ಕಳಾದಿಯಾಗಿ ಕಿಕ್ಕಿರಿದು ಅಧಿವೇಶನದಲ್ಲಿ ಪಾಲ್ಗೊಳ್ಳಲು ಸಮಾವೇಶಗೊಂಡಿತ್ತು. ಧ್ವಜಾರೋಹಣದ ಘಳಿಗೆ ಸನ್ನಿಹಿತವಾಗುತ್ತಿದ್ದಂತೆ ಮುಂದಿನ ಕ್ಷಣಗಳಲ್ಲಿ ಎಂಥ ಘೋರ ಪರಿಣಾಮ ಕಾದಿದೆಯೋ ಎನ್ನುವ ಆತಂಕ ಏನೇ ಆದರೂ ಎದೆಗೊಟ್ಟು ನಿಲ್ಲುವೆವೆಂಬ ದೃಢ

ಸಂಕಲ್ಪದಲ್ಲಿ ಪರ್ಯವಸಾನಗೊಳ್ಳುತ್ತಿತ್ತು. ಎದುರಾಗಿ, ಧ್ವಜಾರೋಹಣ ನೆರವೇರುವುದನ್ನು ಸರ್ವ ವಿಧಗಳಿಂದ ತಡೆಯಲು ಸಂಸ್ಥಾನದ ಇಡೀ ಪೋಲೀಸ್ ವ್ಯವಸ್ಥೆ ಸಜ್ಜಾಗಿ ನಿಂತಿತ್ತು. ರಸ್ತೆಯುದ್ದಕ್ಕೂ ಸುಮಾರು ಆರುನೂರು ಮಂದಿ ಸಶಸ್ತ್ರ ಪೋಲೀಸರು ಪೋಲೀಸು ಮಹಾನಿರ್ದೇಶಕರಿಂದ ಆಜ್ಞೆ ದೊರೆತ ಕ್ಷಣದಲ್ಲೇ ಚಳುವಳಿಗಾರರತ್ತ ಗುಂಡು ಹಾರಿಸಿ ಚದುರಿಸಲು ಸನ್ನದ್ಧರಾಗಿದ್ದರು. ಜತೆಗೆ ಸಾವಿರಾರು ಜನ ಲಾಠಿ ಹಿಡಿದ ಪೋಲೀಸರು ಎಲ್ಲ ಕ್ರಮಗಳಿಂದ ಚಳುವಳಿಯನ್ನು ಹತ್ತಿಕ್ಕಲು ತಯಾರಾಗಿ ನಿಂತಿದ್ದರು. ಸ್ವಲ್ಪದೂರದಲ್ಲೇ ಪೋಲೀಸ್ ಮಹಾ ನಿರೀಕ್ಷಕರು ಸನ್ನಿವೇಶದ ಬೆಳವಣಿಗೆಯನ್ನು ಕ್ಷಣ ಕ್ಷಣಕ್ಕೂ ಗಮನಿಸುತ್ತಾ ಧ್ವಜ ಹಾರಿಸುವ ಘಳಿಗೆಯಲ್ಲೇ ಗುಂಡು ಹಾರಿಸುವ ನಿರ್ಧಾರ ತಳೆದೇ ನಿಂತಿದ್ದರು. ನೇತಾರರು ಧ್ವಜ ಸ್ಥಂಬವನ್ನು ಮುಟ್ಟಿದೊಡನೆ ಪೋಲೀಸರು ಗುಂಡು ಹಾರಿಸುವರೆಂಬ ಸುದ್ದಿ ಜನಜನಿತವಾಗಿತ್ತು. ಮುಂದಿನ ಆ ಕ್ಷಣಗಳಲ್ಲಿ ಏನಾಗಬಹುದೆಂಬುದನ್ನು ಯಾರೂ ಊಹಿಸಲಾಗದ ಗಂಭೀರ ವಾತಾವರಣ ದ್ವಾಪರದ ಕುರುಕ್ಷೇತ್ರವನ್ನು ನೆನಪಿಗೆ ತರುವಂತಿತ್ತು.

ಕಾಂಗ್ರೆಸ್ ಸೇವಾ ದಳದ ಮಹಾನಿಯಂತ್ರಕರ (G.O.C) ರಕ್ಷಣೆಯಲ್ಲಿ ಆ ಧೀರ ನೇತಾರ ದಿಟ್ಟತನದಿಂದ ವೇದಿಕೆಯನ್ನೇರಿ ಧ್ವಜ ಸ್ಥಂಭದತ್ತ ನಿಧಾನವಾಗಿ ಕ್ರಮಿಸಿ ಬರುತ್ತಿದ್ದರು. ಎಲ್ಲರ ದೃಷ್ಟಿ ವೇದಿಕೆಯ ಮೇಲೇ ನೆಟ್ಟಿದ್ದವು. ಕ್ಷಣಗಳುರುಳಿದಂತೆ ಧ್ವಜಾರೋಹಣವನ್ನು ತಡೆಯಲು ಪೋಲೀಸ್ ಅಧಿಕಾರಿಗಳು ವೇದಿಕೆಯನ್ನು ಹತ್ತಿ ಬರುತ್ತಲೇ ಏನಾಗುತ್ತಿದೆ ಎಂದು ಮನಗಾಣುವಷ್ಟರಲ್ಲೇ ಕ್ಷಣಾರ್ಧದಲ್ಲಿ ಆ ವೀರ ನೇತಾರ ಧ್ವಜ ಸೂತ್ರವನ್ನು ಎಳೆದೇ ಬಿಟ್ಟರು. ಪೋಲೀಸರು ಅವರನ್ನು ತಡೆಯುವಷ್ಟರಲ್ಲೇ GOC ಸೂತ್ರವನ್ನು ಮೇಲೇರಿಸಿ ಧ್ವಜವನ್ನು ಹಾರಿಸಿಯೇ ಬಿಟ್ಟರು. ವಂದೇ ಮಾತರಂ ಗೀತೆ ಗಾಳಿಯಲ್ಲಿ ಸುಶ್ರಾವ್ಯವಾಗಿ ತೇಲಿ ಬಂದಂತೆ ನೆರೆದಿದ್ದವರೆಲ್ಲರೂ ಭಾವಪರವಶರಾಗಿ ನಿಂತು ನಾಡಧ್ವಜಕ್ಕೆ ತಮ್ಮ ಗೌರವ ಸೂಚಿಸಿದರು. ನಾಡಗೀತೆ ಮುಗಿಯುತ್ತಲೇ ಇಡೀ ಜನಸ್ತೋಮ ಅಸಾಧಾರಣ ಶಿಸ್ತು ಸಂಯಮಗಳನ್ನು ಮೆರೆದು ಶಾಂತವಾಗಿ ಕುಳಿತರು. ಮತ್ತೊಂದು ಜಲಿಯನ್ವಾಲಾ ಭಾಗ್‌ನಂಥ ಪ್ರಕರಣ ಜರುಗುವುದು ತಪ್ಪಿತ್ತು.

ಜನರ ಸಂಕಲ್ಪ ಈಡೇರುತ್ತಲೇ ಅತ್ತ ಪೋಲೀಸರು ಧ್ವಜಸೂತ್ರವನ್ನೆಳೆದ ಆ ವೀರ ನೇತಾರನನ್ನು ಬಂಧಿಸಿದರು. ಜನಸ್ತೋಮ ಉದ್ರೇಕಗೊಳ್ಳುತ್ತಿತ್ತು. ಆದರೆ ಆ ವೀರ ತನ್ನ ಕಾರ್ಯ ಸಾಧಿಸಿದ ಸಂತೃಪ್ತಿಯಲ್ಲಿ ಚಳುವಳಿಗಾರರ ಕಡೆ ತಿರುಗಿ ಶಾಂತಿಯಿಂದ ವರ್ತಿಸುವಂತೆ, ಯಾವುದೇ ಸಂದರ್ಭದಲ್ಲೂ ಮಹಾತ್ಮಗಾಂಧೀಜಿಯವರ ಅಹಿಂಸಾ ಮಾರ್ಗವನ್ನು ಬಿಡದೆ ಸತ್ಯಾಗ್ರಹವನ್ನು ಮುಂದುವರಿಸುವಂತೆ ಹುರಿದುಂಬಿಸಿ ಪೋಲೀಸ್ ವಾಹನವನ್ನು ಏರಿ ಸೆರೆಮನೆ ಸೇರಿದರು. ಆ ಧೀರ ನೇತಾರ! ಅವರೇ ಶ್ರೀ ಟಿ. ಸಿದ್ದಲಿಂಗಯ್ಯ - ಇಂದಿನ ಇಡೀ ಕರ್ನಾಟಕದ ಆರು ಕೋಟಿ ಜನತೆಯ ಸ್ವಾತಂತ್ರ್ಯದ ಹರಿಕಾರ.

ನಿಷ್ಕಾಮ ಕರ್ಮಯೋಗಿ:

ಸದಾ 10-20 ಜನರನ್ನು ಹಿಂದಿಟ್ಟುಕೊಂಡು ದೊಡ್ಡ ಬಂಗಲೆ, ನಾಲ್ಕಾರು ಲಕ್ಷುರಿ ಕಾರುಗಳು, ಮನೆ ಮುಂದೊಂದು ಸುಂದರ ತೋಟ, ಪ್ರತಿದಿನವೂ ಇವರ ಭೇಟಿಗಾಗಿ

ಹಾತೊರೆದು ನಿಂತ ಸಾವಿರಾರು ಮಂದಿಯ ಗುಂಪು, ಮನೆಯ ಬಳಿ ಕಾವಲು ಪೋಲೀಸರ ದಂಡು, ಸಾಹೇಬರು ಹೇಳುವುದೇ ಪರಮಾನುಗ್ರಹವೆಂದು ಶಿರಸಾವಹಿಸುವ ಸೌಜನ್ಯ ತೋರುತ್ತಾ ನಿರ್ವಹಿಸುವ ಆಪ್ತ ಸಿಬ್ಬಂದಿ - ಇಂಥ ಮಾನದಂಡಗಳಿಂದ ಸಿದ್ದಲಿಂಗಯ್ಯನವರ ಹಿರಿತನವನ್ನು ಅಳೆಯಬಯಸುವವರಿಗೆ ಭ್ರಮ ನಿರಸನ ಕಟ್ಟಿಟ್ಟದ್ದು.

ಸಿದ್ದಲಿಂಗಯ್ಯನವರ ಚೇತನೋತ್ಕರ್ಷವನ್ನು ಕಂಡರಿಯದ ಪ್ರಥಮ ಭೇಟಿಗರಿಗೆ ಇವರ ವ್ಯಕ್ತಿತ್ವ ಚಿತ್ತಾಕರ್ಷಕವಾಗಿ ಕಾಣಲಾರದು. ಇವರ ವದನದಲ್ಲಿ ಮನ ಸೆಳೆಯುವ ಮೋಹಕತೆಯಿಲ್ಲ. ವೀರಾವೇಶದ ರಜಸ್ಸಿಲ್ಲ, ಆದರೆ ಸುಲಭವಾಗಿ ಉಪೇಕ್ಷಿಸುವಂಥ ವ್ಯಕ್ತಿತ್ವವೂ ಅಲ್ಲ. ನಿರುತ್ಸಾಹದ ತಮೋ ಗುಣವೂ ಅಲ್ಲ. ತಾನು ಹೊರಗೆ ಹೇಗೆ ಕಾಣುತ್ತೇನೆಂಬುದರ ಪರಿವೆಯೂ ಇಲ್ಲದ ಸ್ಥಿತಪ್ರಜ್ಞ. ಸದಾ ನಿರಪೇಕ್ಷ ಮುಖಮುದ್ರೆಯ ಇವರು ಕರ್ಮಣ್ಯೇವಾಧಿಕಾರಸ್ತೆ ಮಾ ಫಲೇಶು ಎಂಬ ಗೀತಾ ಸೂತ್ರವನ್ನೂ ಬದುಕಿನಲ್ಲಿ ಅಳವಡಿಸಿಕೊಂಡ ನಿರ್ಲಿಪ್ತ.

ಸುಮಾರು 25ರ ಹರೆಯಲ್ಲಿ B.A. B.L ವ್ಯಾಸಂಗವನ್ನು ಪೂರೈಸಿ ಬಂದ ಟಿ. ಸಿದ್ದಲಿಂಗಯ್ಯ ಹೀಗಿರಲಿಲ್ಲ. ಆಗ ಅವರು ಯೂರೋಪಿಯನ್ ಪೋಷಾಕು ಧರಿಸಿ ಶೂ, ಟೈ ಮತ್ತು ಹ್ಯಾಟ್ ಗಳಿಂದ ಮೆರೆಯುತ್ತಿದ್ದ ನವನಾಗರೀಕರಾಗಿದ್ದರು. ಈ ಉಡುಪಿನಲ್ಲಿ ಇವರು ಮಹಾತ್ಮ ಗಾಂಧಿಯವರನ್ನು ಭೇಟಿ ಮಾಡಿದ ಮೊದಲ ಸಂದರ್ಭದಲ್ಲಿ ಗಾಂಧೀಜಿ ಇವರನ್ನು ಕಂಡು **ದೇಶೀಯ ಸಂಸ್ಥಾನ ಕಾಂಗ್ರೆಸ್‌ನ ಇಂಗ್ಲೀಷ್ ಅಧ್ಯಕ್ಷ** ಎಂದು ನಗೆಯಾಡಿದ್ದರಂತೆ

ಒಂದುಕಡೆ ಪಾಶ್ಚಾತ್ಯರ ದಬ್ಬಾಳಿಕೆ; ಮತ್ತೊಂದುಕಡೆ ಸ್ಥಳೀಯ ರಾಜರುಗಳ ನಿರ್ಲಕ್ಷಪೂರ್ಣ ರಾಜ್ಯಾಡಳಿತ ಇವುಗಳಿಗೆ ಸಿಕ್ಕು ದುಪ್ಪಟ್ಟು ದಾಸ್ಯಕ್ಕೊಳಗಾಗಿದ್ದ ಅಂದಿನ ಪ್ರಜಾಕೋಟಿಯ ಬಡತನ, ಅಜ್ಞಾನ, ದಾರಿದ್ರ್ಯಗಳು ಸಿದ್ದಲಿಂಗಯ್ಯನವರ ಮನಸ್ಸಿನಲ್ಲಿ ತುಂಬಿಕೊಂಡು ವಿದ್ಯಾರ್ಥಿದೆಸೆಯಿಂದಲೇ ಅವರನ್ನು ಕಾಡಿಸತೊಡಗಿದ್ದುವು. ಮುಂದೆ ವಕೀಲರಾದಾಗಲೂ 'ಬಡವರ್ಗಗಳ ಭವಣೆ ಸದಾ ನನ್ನ ಮನಸ್ಸಿನಲ್ಲಿ ತುಂಬಿಕೊಂಡಿದ್ದು ನನಗೆ ವೃತ್ತಿಯ ಕಡೆ ಗಮನಕೊಡುವುದಾಗಲಿಲ್ಲ' ಎಂದು ತಾವೇ ಹೇಳಿಕೊಂಡಿದ್ದಾರೆ. 'ದುಂಬಿ ಪಿಡಿದಿಹ ಪುಳವು ದುಂಬಿಯನೆ ನೆನೆನೆನೆದು ದುಂಬಿಯೇ ತಾನಾಗುವಂತೆ' ಎಂಬ ನಿಜಗುಣ ಶಿವಯೋಗಿಗಳ ತತ್ವಪೂರ್ಣ ಉಪಮೆಯಂತೆ ರಾಜಕೀಯ ಪ್ರವೇಶ ಮಾಡಿದ ವೇಳೆಗಾಗಲೇ ಸಿದ್ದಲಿಂಗಯ್ಯ ಅಂದಿನ ದೇಶದ ಸಾಮಾಜಿಕ ಸ್ಥಿತಿಗತಿಗಳ ಪ್ರತಿಬಿಂಬವೇ ಆಗಿಬಿಟ್ಟಿದ್ದರು. ಬಿ.ಎ ತರಗತಿಗೆ ಡಾ: ಎಸ್. ರಾಧಾಕೃಷ್ಣನ್ ರವರು ಇವರ ತತ್ವಶಾಸ್ತ್ರ ಪ್ರಾಧ್ಯಾಪಕರಾಗಿದ್ದರು. ಒಮ್ಮೆ ಅವರು ಸಿದ್ದಲಿಂಗಯ್ಯನವರ ಗ್ಲಾನಿ ಪೀಡಿತ ಮನೋಭಾವವನ್ನು ಕಂಡು "ಏನು ಪ್ರಪಂಚದ ದುಃಖವನ್ನೇ ನಿನ್ನ ತಲೆಯಮೇಲೆ ಹೊತ್ತಂತೆ ಚಿಂತಾಕ್ರಾಂತನಾಗಿರುತ್ತೀಯೇ" ಎಂದು ಛೇಡಿಸಿದ್ದರಂತೆ. ಬಹುಶಃ ಆ ದಿನಗಳಲ್ಲಿ ಸಿದ್ದಲಿಂಗಯ್ಯನವರು ತಮ್ಮ ಭಾವನಾ ಸೂಕ್ಷ್ಮದ ತೀವ್ರತೆಯನ್ನೆದುರಿಸುತ್ತಿದ್ದಿರಬಹುದು. "ಡಾ: ರಾಧಾಕೃಷ್ಣನ್ ರವರು ನನಗೆ ಹೇಳಿದ ಸಾಂತ್ವನದ ಮಾತುಗಳು ನನ್ನನ್ನು ಆತ್ಮಹತ್ಯಾ ಪ್ರೇರಣೆಯಿಂದ ಪಾರುಮಾಡಿದುವು" ಎಂದು ಶ್ರೀಯುತರು ತಮ್ಮ ನೆನಪಿನಂಗಳದಿಂದ ಹೇಳಿಕೊಂಡಿರುವುದು ಗಮನಾರ್ಹ. ಸ್ವಭಾವತಃ ನಿರ್ಲಿಪ್ತರಾದ ಇವರು ಬಡವರ್ಗಗಳ ಅಭ್ಯುದಯಕ್ಕಾಗಿ ಶ್ರಮಿಸುವ ಅವಕಾಶ ಒದಗಿ ಬಂದಾಗ ದಿಢೀರನೆ ರಾಜಕೀಯಕ್ಕೆ ಧುಮುಕುವ ಸಂಕಲ್ಪ ಮಾಡಿದ್ದರ ಹಿಂದೆ ಈ ಸಾಮಾಜಿಕ ಕಳಕಳಿಯ ಪ್ರೇರಣೆ

ಇರಲಿಕ್ಕೆ ಸಾಕು. ಅಂತರಾಳವನ್ನು ಹೊಕ್ಕು ನೋಡಿದವರಿಗೆ ಮಾತ್ರ ಇವರ ನೀರವ ಮುಖಮುದ್ರೆಯ ಹಿಂದಿನ ನಿರಹಂಕಾರ, ನಿರಾಡಂಬರ, ನಿರ್ಲಿಪ್ತ ಗುಣವಿಶೇಷಗಳ ಅರಿವಾಗಬಹುದಾಗಿದೆ.

'ರಾಜಕೀಯ ನನಗೆ ಸಲ್ಲ', 'ರಾಜಕೀಯಕ್ಕೆ ನಾನು ದೂರ', ಎಂದೆಲ್ಲಾ ಹೇಳಿ ನುಡಿದ ಈ ವ್ಯಕ್ತಿ ಹಳೆಯ ಮೈಸೂರು ಸಂಸ್ಥಾನವೇ ಅಲ್ಲದೆ ಉತ್ತರದ ಕರ್ನಾಟಕ ಪ್ರಾಂತ್ಯ, ಜಮಖಂಡಿ, ರಾಯದುರ್ಗ ಮೊದಲಾದ ಇತರ ಸಂಸ್ಥಾನಾಧಿಪತ್ಯಗಳಲ್ಲಿ ಸ್ವಾತಂತ್ರ್ಯದ ಕಹಳೆಯನ್ನೂದಿ ಗಾಂಧೀಜಿಯವರ ಸತ್ಯಾಗ್ರಹದ ಹಾದಿಯಲ್ಲಿ ಇಡೀ ರಾಜ್ಯವನ್ನು ಮುನ್ನಡೆಸಿ ಇಲ್ಲಿನ ಪ್ರಜಾಕೋಟಿಗೆ ಜವಾಬ್ದಾರಿಯುತ ಸರ್ಕಾರೀ ವ್ಯವಸ್ಥೆಯನ್ನು ಹಾಗೂ ಪ್ರಜಾತಂತ್ರವನ್ನು ಸಾದಿಸಿ ಕೊಟ್ಟ ಪರಿ 'ಸಂಕಲ್ಪದಲ್ಲಿ ಸರ್ವ ಶಕ್ತಿ ಇದೆ' ಎಂಬುದಕ್ಕೆ ಜ್ವಲಂತ ನಿದರ್ಶನವಾಗಿದೆ.

ಇಂದಿನ ರಾಜಕೀಯ ವಲಯಗಳಲ್ಲಿ ಸಿದ್ದಲಿಂಗಯ್ಯನವರ ಹೆಸರು ಮರೆತಂತಾಗಿದೆ. ಕಾರಣ 'ರಾಜಕೀಯ'ದ ಅರ್ಥ ಈಗ ಅಪಭ್ರಂಶಿತವಾಗಿದೆ. ನೀತಿ ಭ್ರಷ್ಟರಾದರೂ ಅಧಿಕಾರಕ್ಕೆ ಅಂಟಿಕೊಳ್ಳುವ ಪ್ರಚಲಿತ ರಾಜಕೀಯಕ್ಕೂ ಸಿದ್ದಲಿಂಗಯ್ಯನವರ ಲಾಲಸೆರಹಿತ ಲೋಕಹಿತಕಾರಿ ಸುದ್ಧರಾಜಕೀಯಕ್ಕೂ ಅಜಗಜಾಂತರ. ಈ ಭ್ರಷ್ಟತೆ ಕೇವಲ ಇಂದಿನದೇ ಅಲ್ಲ. ಬ್ರಿಟಿಷರಿಂದ ಕಾಂಗ್ರೆಸ್‌ಗೆ ಅಧಿಕಾರ ಹಸ್ತಾಂತರವಾಗುತ್ತಲೇ ಅದು ಹುಟ್ಟಿಕೊಂಡಿತೆಂದು ಹೇಳಿರುವ ಸಿದ್ದಲಿಂಗಯ್ಯನವರು ಕೇವಲ ಅಧಿಕಾರಕ್ಕಾಗಿ ಪೈಪೋಟಿ ನಡೆಸುವ ಪಿಪಾಸುಗಳಿಂದ ದೂರ ಉಳಿದರು. ಅಂಥವರೊಂದಿಗೆ ಪದ್ಮದಳದಂತೆ ಅಂಟಿಯೂ ಅಂಟದವರಾಗಿ ಬೆರೆತು ತಮ್ಮ ಸಂಕಲ್ಪ ಈಡೇರುತ್ತಲೇ ಪ್ರಸ್ತಾವಕ್ಕೆ ತೆರಳಿ ಮರೆಯಾಗಿ ನಿಂತ ಮಹಾತ್ಯಾಗಿ, ನಿಷ್ಕಾಮ ಕರ್ಮಯೋಗಿ; ಅವರೇ - ಟಿ. ಸಿದ್ದಲಿಂಗಯ್ಯ.

## ಜನನ, ಬಾಲ್ಯ, ಕೌಟುಂಬಿಕ ಪರಿಸರ, ವಿದ್ಯಾಭ್ಯಾಸ

ಸಿದ್ದಲಿಂಗಯ್ಯನವರಂತಹ ಮಹಾ ಚೇತನವನ್ನು ನಾಡಿಗಿತ್ತ ಹಿರಿಮೆ ದೊಡ್ಡಬಳ್ಳಾಪುರಕ್ಕೆ ಸಲ್ಲುತ್ತದೆ. ಇದು ಇಂದಿನ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿದ ಒಂದು ಪಟ್ಟಣ ಮತ್ತು ತಾಲ್ಲೂಕು ಕೇಂದ್ರ. ಬೆಂಗಳೂರು ನಗರದಿಂದ ಸುಮಾರು 40 ಕಿಲೋಮೀಟರು ಮತ್ತು ಕರ್ನಾಟಕದ ಸುಪ್ರಸಿದ್ದ ನೈಸರ್ಗಿಕ ಹಾಗೂ ಐತಿಹಾಸಿಕ ಪ್ರವಾಸೀ ತಾಣವಾದ ನಂದೀ ಬೆಟ್ಟದಿಂದ ಕೇವಲ 25 ಕಿಲೋಮೀಟರು ದೂರದಲ್ಲಿದೆ. ಸಿದ್ದಲಿಂಗಯ್ಯನವರು ಮಹಾತ್ಮಗಾಂಧೀಜಿಯವರನ್ನು ಮತ್ತು ಸರ್ದಾರ್ ಪಟೇಲರನ್ನು ಮೊದಲು ಭೆಟ್ಟಿಯಾಗಿ ಮೈಸೂರಿನಲ್ಲಿ ಸ್ವಾತಂತ್ರ್ಯ ಸಂಗ್ರಾಮದ ರೂಪುರೇಷೆಗಳನ್ನು ಸಮಾಲೋಚಿಸಿದ್ದು ಈ ನಂದೀ ಬೆಟ್ಟದಲ್ಲೇ. ಮಹಾತ್ಮಾಗಾಂಧಿಯವರು ಆಗ ವಿಶ್ರಾಂತಿಗಾಗಿ ಇಲ್ಲಿ ತಂಗಿದ್ದುದನ್ನು ನೆನಪಿಸಿಕೊಳ್ಳಬಹುದಾಗಿದೆ. ದೊಡ್ಡಬಳ್ಳಾಪುರ ಒಂದು ಪ್ರಮುಖ ಉದ್ಯಮ ಕೇಂದ್ರ. ರೇಷ್ಮೆ ಇಲ್ಲಿನ ಪ್ರಮುಖ ಉದ್ಯಮ. ಇಲ್ಲಿನ ರೇಷ್ಮೆ ಸೀರೆಗಳು ತಮ್ಮ ನವುರಿಗೆ ದೇಶ ವಿದೇಶಗಳಲ್ಲಿ ವಿಖ್ಯಾತವಾಗಿವೆ. ಈ ಪ್ರದೇಶದ ಮತ್ತೊಂದು ವಿಶೇಷ ಸಂಪನ್ಮೂಲವೆಂದರೆ ಕಟ್ಟಡ ಕಟ್ಟಲು ಬಳಸುವ ಗಟ್ಟಿ ಶಿಲೆ (Granite). ಬೆಂಗಳೂರಿನ ಪ್ರಖ್ಯಾತ ವಿಧಾನ ಸೌಧ ಕಟ್ಟಲು ಈ ಶಿಲೆಯನ್ನು ಬಳಸಲಾಗಿದೆ. ಈ ಎರಡೂ ವಿಶೇಷಗಳನ್ನು ಮೈಗೂಡಿಸಿಕೊಂಡು ಜನ್ಮಿಸಿದರೋ ಎಂಬಂತೆ ಸಿದ್ದಲಿಂಗಯ್ಯನವರು ಸ್ವಭಾವತಃ ರೇಷ್ಮೆಯಷ್ಟೇ

ಮೃದು ಮತ್ತು ಕಲ್ಲಿನಷ್ಟೆ ದೃಢ. ಇವರ ನಿಕಟವರ್ತಿಗಳಲ್ಲಿ ಒಬ್ಬರಾದ ಘಟಪ್ರಭಾದ ಬಿ.ಎನ್. ಗುಪ್ತಾರವರು ಸಿದ್ದಲಿಂಗಯ್ಯನವರನ್ನು ಸ್ಮರಿಸಿಕೊಳ್ಳುವ ಬಗೆ ಹೀಗೆ:

"ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ
ಲೋಕೋತ್ತರಾಣಾಮ್ ಚೇತಾಂಸಿ ಹಿ ವಿಜ್ಞಾತುಮರ್ಹತಿ"

(ವಜ್ರದಂತೆ ಕಠೋರವೂ ಹೂವಿನಂತೆ ಕೋಮಲವೂ ಆದ ಮಹಾಪುರುಷರ ಭಾವನಾಸೂಕ್ಷ್ಮಗಳನ್ನು ಅಳೆವುದಾದರೂ ಹೇಗೆ ?)

ಸಿದ್ದಲಿಂಗಯ್ಯನವರ ಜನ್ಮವಾಗಿದ್ದು 1896ನೇ ಇಸವಿ ಸೆಪ್ಟೆಂಬರ್ 3ನೇ ತಾರೀಖು, ದೊಡ್ಡಬಳ್ಳಾಪುರದ ಹೆಸರಾಂತ ವರ್ತಕ ಕುಟುಂಬದಲ್ಲಿ. ತಂದೆ ತೋಟಪ್ಪ, ತಾಯಿ ಸಿದ್ದಮ್ಮ ಸಂಭಾವಿತ ನಗರ್ತ ಮನೆತನಕ್ಕೆ ಸೇರಿದವರು.

ನಗರ್ತ ಜನಾಂಗ ಒಂದು ಜಾತಿ ಎನ್ನುವುದಕ್ಕಿಂತಲೂ ಒಂದು ಪುಟ್ಟ ಸಮಾಜ ಎಂದರೆ ತಪ್ಪಾಗಲಾರದು. ನಗರ್ತರಲ್ಲಿ ವೈಷ್ಣವರು ಮತ್ತು ಶೈವರೇ ಅಲ್ಲದೆ ಜೈನರೂ ಇದ್ದಾರೆ. ಇವರೆಲ್ಲರಿಗೂ ಒಂದೇ ಕುಲದೈವ - ನಗರೇಶ್ವರ ಸ್ವಾಮಿ. ನಗರೇಶ್ವರ ದೇವಾಲಯಗಳಲ್ಲಿ ವಿಷ್ಣು ವಿಗ್ರಹವೂ ಇರುವುದು ಒಂದು ವಿಶೇಷ. ಇವರ ಕುಲಗುರುಗಳಲ್ಲಿ ಒಬ್ಬರು ಸ್ಮಾರ್ತ ಬ್ರಾಹ್ಮಣರಾದ ಧರ್ಮ ಶಿವಾಚಾರ್ಯರು ಮತ್ತೊಬ್ಬರು ಶೈವ ಮುನಿ ಮಣ್ಣೇಶ್ವರ ಸ್ವಾಮಿ. ಎಲ್ಲ ಉಪಜಾತಿಗಳಿಗೂ ಗೋತ್ರಗಳು ಸಾಮಾನ್ಯವಾದರೂ ಅನೇಕ ಧರ್ಮಗಳನ್ನು ಇವು ವ್ಯಾಪಿಸಿವೆ. ಈ ಜನಾಂಗದ ಏಳು ಉಪಜಾತಿಗಳಲ್ಲಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಶಿವಾಚಾರ ವೈಶ್ಯರೆನಿಸಿಕೊಂಡ ಲಿಂಗಧಾರಿಗಳು ಇಡೀ ಜನಾಂಗದ ಜನಸಂಖ್ಯೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿರುವ ಕಾರಣ ಈ ಉಪಜಾತಿಗೂ ನಗರ್ತ ಎಂಬ ಹೆಸರೇ ಅನ್ವರ್ಥವಾಗಿ ಬಂದಿದೆ. ಇಡೀ ಕರ್ನಾಟಕದಲ್ಲಿ ಇವರ ಜನಸಂಖ್ಯೆ 1931ರ ಜನಗಣತಿ ಅನ್ವಯ ಕೇವಲ 9318 ಎಂದು ಹೇಳಲಾಗಿದೆ. ಇವರಲ್ಲಿ ಶೇಕಡ 90 ಪಾಲು ಬೆಂಗಳೂರು, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ದೇವನಹಳ್ಳಿ, ಆನೇಕಲ್, ಹೊಸಕೋಟೆ, ಶಿಡ್ಲಘಟ್ಟ ತಾಲ್ಲೂಕುಗಳಲ್ಲಿ ನೆಲೆಸಿದ್ದಾರೆ. ಹಿಂದುಳಿದ ಹಾಗೂ ಅಲ್ಪ ಸಂಖ್ಯಾತ ಪಂಗಡವೆನಿಸಿದ ನಗರ್ತಕರು ತಮ್ಮ ಸಾಮಾಜಿಕ ಹಾಗೂ ಧಾರ್ಮಿಕ ಪರಂಪರೆಯಿಂದಾಗಿ ಸಮಾಜದಲ್ಲಿ ಉನ್ನತ ಸ್ಥಾನಮಾನವನ್ನು ಗಳಿಸಿದ್ದಾರೆ. ಬಳ್ಳಿಗಾವೆಯಲ್ಲಿ ದೊರೆತ ಒಂದು ಶಾಸನ ಹೊಗಳುವಂತೆ ನಗರ್ತರು "ಪರರ ಹಿತವನ್ನು ಬಯಸುವವರು, ಆಡಿದ ಮಾತನ್ನು ತಪ್ಪುವುದಿಲ್ಲ, ಜ್ಞಾನಿಗಳು, ಧರ್ಮಪಾಲಕರು, ಸರಸ ಕಲೆಗಳಿಗೆ ಆಶ್ರಯದಾತರು, ಏಕಾಂಗಶೂರರು ಮುಂದಾಲೋಚನೆಯುಳ್ಳವರು, ವಿಷ್ಣು, ಶಿವ, ಬ್ರಹ್ಮ ಜಿನಾದಿ ದೇವತೆಗಳನ್ನು ಆರಾಧಿಸುವವರು, ರಾಜಾಧಿರಾಜರಂತೆ ಬ್ರಾಹ್ಮಣರಿಗೆ ಆಶ್ರಯದಾತರು, ದಾನಿಗಳು, ಚಂದ್ರನಂತೆ ಸತ್ಕಳರು ಭೂಮಿಯಂತೆ ಕ್ಷಮಾವಂತರು ಇವರು ನಾಶವಾಗುವಂತಹ (ಐಹಿಕ) ಲೋಕ ಸಂಪತ್ತನ್ನು ಆರ್ಜಿಸಲು ಇಷ್ಟಪಡದೆ ಶಾಶ್ವತವಾಗಿ ಇಹಪರಗಳಿಗೂ ಆಗುವಂಥ ಸಂಪತ್ತನ್ನು ಸಂಪಾದಿಸಲು ಸದಾ ದುಡಿಯುವಂತಹವರು". ನಗರ್ತರಿಗೆ ಒಂದು ಪೌರಾಣಿಕ ಇತಿಹಾಸವೂ ಇದೆ. ಪೂರ್ವ ಭಾರತದ ಸಪ್ತಮುಖಿ ಪಟ್ಟಣಗಳೆನಿಸಿದ ಅಯೋಧ್ಯ, ಮಥುರಾ, ಕಾಶಿ, ಕಾಂಚಿ, ಅವಂತಿಕಾಪುರ ಮತ್ತು ದ್ವಾರಾವತಿ ನಗರಗಳಲ್ಲಿ ವ್ಯಾಪಾರಕ್ಕಾಗಿ ನೆಲಸಿದವರಾಗಿ ಇವರು ನಗರ್ತರೆನಿಸಿದರು. ರಾಜರುಗಳ ಕಾಲದಲ್ಲಿ ಧರ್ಮಾದಾಯ ದತ್ತಿಗಳು ಇವರ ನ್ಯಾಸದಾರಿಕೆಯಲ್ಲಿ

ಸಂಸ್ಥಾಪಿತವಾಗುತ್ತಿದ್ದವು. ಊರಿನ ನ್ಯಾಯಪಾಲನೆ ಸಹ ಈ ಜನಾಂಗದ ಯಜಮಾನರ ಕಾರ್ಯಕ್ಷೇತ್ರವಾಗಿದ್ದುದಕ್ಕೆ ಉಲ್ಲೇಖಗಳಿವೆ.

ಕರ್ನಾಟಕದ ನಗರ್ತರಲ್ಲಿ ಹಿಂದಿನ ಒಂದೆರಡು ತಲೆಮಾರಿನವರೆಗೂ ವಿದ್ಯಾವಂತರ ಸಂಖ್ಯೆ ಕಡಿಮೆಯಿದ್ದು ಇದೊಂದು ಶೈಕ್ಷಣಿಕವಾಗಿ ಹಿಂದುಳಿದ ಅಲ್ಪ ಸಂಖ್ಯಾತ ಜನಾಂಗವೆನ್ನುವಂತಿತ್ತು. ಸಿದ್ದಲಿಂಗಯ್ಯನವರು ತಮ್ಮ ಜನಾಂಗ ಶೈಕ್ಷಣಿಕವಾಗಿ ಅತಿ ಹಿಂದುಳಿದಿತ್ತು ಎಂದು ಹೇಳಿದ್ದಾರೆ. ಇವರು ಈಗ ಸಮಾಜದ ವಿಶಾಲ ಸ್ತರಗಳಲ್ಲಿ ಸಲಿಲವಾಗಿ ಬೆರೆತು ವಿವಿಧ ಉದ್ಯೋಗ ಮತ್ತು ವೃತ್ತಿಗಳಲ್ಲಿ ತೊಡಗಿ ಅಲ್ಲಿಯೂ ಪ್ರಗತಿ ಸಾಧಿಸಿದ್ದಾರೆ. ಈ ಜನಾಂಗದಲ್ಲಿ ಇಂದು ವೈದ್ಯರು, ಇಂಜಿನಿಯರರು, ವಕೀಲರು, ಉನ್ನತ ಸರ್ಕಾರಿ ಅಧಿಕಾರಿಗಳು, ಉದ್ಯಮಿಗಳು ಮುಂತಾಗಿ ಎಲ್ಲ ವೃತ್ತಿಯವರೂ ಇದ್ದಾರೆ.

ದೊಡ್ಡಬಳ್ಳಾಪುರದಲ್ಲಿ ಟಿ.ಎಸ್. ಕುಟುಂಬವೆಂದೇ ಹೆಸರುವಾಸಿಯಾಗಿರುವ ಸಿದ್ದಲಿಂಗಯ್ಯನವರ ಕುಟುಂಬ ಪೂರ್ವ ಪರಂಪರೆಯ ಒಂದು ದೊಡ್ಡ ಒಟ್ಟು ಕುಟುಂಬ. ತೋಟಪ್ಪ - ಸಿದ್ದಮ್ಮನವರಿಗೆ ಒಟ್ಟು ಏಳು ಜನ ಗಂಡು ಮಕ್ಕಳು - ಕ್ರಮವಾಗಿ ಸಿದ್ದಪ್ಪ, ಸಿದ್ದೇಶಪ್ಪ, ಸಿದ್ದಲಿಂಗಯ್ಯ, ಚಿಕ್ಕಸಿದ್ದಪ್ಪ, ಸಿದ್ದಬಸಪ್ಪ, ಚಿಕ್ಕಸಿದ್ದಬಸಪ್ಪ ಮತ್ತು ಚಿಕ್ಕಸಿದ್ದಲಿಂಗಯ್ಯ ಮತ್ತು ಹೆಣ್ಣು ಮಕ್ಕಳು ಸಿದ್ದಲಿಂಗಮ್ಮ ಹಾಗೂ ಚಿಕ್ಕಸಿದ್ದಲಿಂಗಮ್ಮ. ಈ ಪೈಕಿ ಸಿದ್ದೇಶಪ್ಪ, ಚಿಕ್ಕಸಿದ್ದಪ್ಪ, ಚಿಕ್ಕಸಿದ್ದಬಸಪ್ಪ ಇವರುಗಳು ಕಿರಿವಯಸ್ಸಿನಲ್ಲೆ ತೀರಿಕೊಂಡರು. ಉಳಿದವರಲ್ಲಿ ಸಿದ್ದಲಿಂಗಯ್ಯನವರ ಅಣ್ಣ ಟಿ.ಸಿದ್ದಪ್ಪ ಇಡೀ ಸುತ್ತಿನ ಪ್ರದೇಶದಲ್ಲಿ ದೊಡ್ಡ ಜವಳಿ ವ್ಯಾಪಾರಿಯಾಗಿದ್ದು ದೊಡ್ಡಬಳ್ಳಾಪುರದಲ್ಲಿ ಒಂದು ಹಿರಿಯ ಶಕ್ತಿ ಎನಿಸಿದವರು. ಊರಿಗೆ ಊರೇ ಇವರನ್ನು ಕಂಡರೆ ನಡುಗುತ್ತಿತ್ತು. ಇವರು ಹೊರಟ ಹಾದಿಯಲ್ಲಿ ಯಾರೂ ಇವರ ಮುಂದೆ ಸುಳಿಯುತ್ತಿರಲಿಲ್ಲ. ಮನೆಯಲ್ಲಿ ಸಹ ಇವರ ಕಟ್ಟು ನಿಟ್ಟಿನ ನಿಯಮಗಳನ್ನು ಯಾರೂ ಮೀರುವಂತಿಲ್ಲ. ಹೊರ ಪ್ರಾಂತಗಳಲ್ಲಿ ಹೋಗಿ ವಿದ್ಯಾಭ್ಯಾಸ ಮುಗಿಸಿ ಬಂದಿದ್ದ ಸಿದ್ದಲಿಂಗಯ್ಯನವರು ಅಣ್ಣನ ಈ ದರ್ಪದ ಪ್ರವೃತ್ತಿಯನ್ನು ವಿರೋಧಿಸುತ್ತಿದ್ದರಂತೆ. ಎಲ್ಲರೊಂದಿಗೆ ಬೆರೆಯುವ ಪ್ರಕೃತಿ ಇವರದು. ಇದೇ ವಿಷಯದಲ್ಲಿ ಅಣ್ಣ ತಮ್ಮಂದಿರಲ್ಲಿ ವಾಗ್ವಾದಗಳಾಗುತ್ತಿದ್ದು ಅಣ್ಣ ಪರಿಸ್ಥಿತಿಯ ಚತುರ ನಿರ್ವಹಣೆಯಿಂದ ಸಿದ್ದಲಿಂಗಯ್ಯನವರನ್ನು ವಕೀಲ ವೃತ್ತಿ ಕಲಿಯಲು ಬೆಂಗಳೂರಿಗೆ ಕಳುಹಿಸಿದ ಪ್ರಸಂಗವನ್ನು ಸಿದ್ದಲಿಂಗಯ್ಯನವರ ಕಿರಿಯ ಪುತ್ರ ಟಿ.ಎಸ್.ಶಾಂತಕುಮಾರ್ ಸ್ವಾರಸ್ಯವಾಗಿ ಹೇಳುತ್ತಾರೆ.

ಸಿದ್ದಲಿಂಗಯ್ಯನವರ ಬಾಲ್ಯ ಅಣ್ಣ ಸಿದ್ದಪ್ಪನವರ ಈ ಶಿಸ್ತಿನ ಶಿಕ್ಷಣದಲ್ಲಿ ಕಳೆಯಿತು. ಇವರ ಮೊದಲ ತಮ್ಮ ಟಿ. ಸಿದ್ದಬಸಪ್ಪ ಸ್ನೇಹ ಜೀವಿಯಾದರೂ ನಿಷ್ಠುರವಾದಿ. ಪುರಸಭೆ ಅಧ್ಯಕ್ಷರಾಗಿ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆ ಸದಸ್ಯರೂ ಆಗಿದ್ದರು. ತುಂಬು ಗಾಂಭೀರ್ಯ ಇವರ ಮುಖದಲ್ಲಿ ಎದ್ದು ಕಾಣುತ್ತಿತ್ತು. ಕುಟುಂಬದ ಚಿಲ್ಲರೆ ಅಂಗಡಿ ವ್ಯಾಪಾರ ಇವರ ಜವಾಬುದಾರಿಯಾಗಿತ್ತು. ಕಿರಿಯ ಸಹೋದರ ಟಿ. ಚಿಕ್ಕಸಿದ್ದಲಿಂಗಯ್ಯ (ಟಿ.ಸಿ. ಸಿದ್ದಲಿಂಗಯ್ಯ ಎಂದು ಪರಿಚಿತರಾಗಿದ್ದರು) ಉದಾರಿ, ಪರೋಪಕಾರಿ. ಅಣ್ಣಂದಿರೆಲ್ಲರಿಗೂ ಅನುವಾಗಿ ನಡೆದುಕೊಳ್ಳುತ್ತಾ ಕುಟುಂಬದ ಆಗು ಹೋಗುಗಳನ್ನು ದಿನನಿತ್ಯ ಗಮನಿಸುತ್ತಾ ಅಣ್ಣಂದಿರಿಗೆ ವ್ಯಾಪಾರದಲ್ಲಿ ನೆರವಾಗುತ್ತಾ ಬಂದ ಪ್ರೇಮಮಯಿ, ಸರಳ ಜೀವಿ, ಊರಿನವರಿಗೆ

ಈ ಸಹೋದರರು ವೃತ್ತಿ ಸಂಕೇತಗಳಿಂದಲೇ ಪರಿಚಿತರು. ಸಿದ್ದಲಿಂಗಯ್ಯನವರು ವಕೀಲಿ ಕಛೇರಿ ತೆರೆದವರಾಗಿ "ಆಫೀಸಪ್ಪ", ಸಿದ್ದಬಸಪ್ಪ ಜವಳಿ ಅಂಗಡಿ ಮಾಲೀಕರಾದ್ದರಿಂದ "ಜವಳಂಗಡಿಯಪ್ಪ", ಚಿಕ್ಕಸಿದ್ದಲಿಂಗಯ್ಯ ಚಿಲ್ಲರೆ ಅಂಗಡಿಯ ಮಾಲಿಕರಾಗಿ "ಚಿಲ್ಲರಂಗಡಿಯಪ್ಪ" ಆದರು. ಇಡೀ ಕುಟುಂಬ ವ್ಯಾಪಾರದಲ್ಲಿ ಮುಂದುವರೆದು ಊರಿಗೇ ಶ್ರೀಮಂತ ಕುಟುಂಬವೆಂದು ಖ್ಯಾತಿಗೊಂಡಿತ್ತು.

ಮನೆತನದ ಮಹಿಳೆಯರು ಧರ್ಮನಿಷ್ಠರು, ಸಂಪ್ರದಾಯಶೀಲರು, ದೈವಭಕ್ತಿ, ಪತಿಭಕ್ತಿ ಸಂಪನ್ನರು, ಸೇವಾಪರತೆಯನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡವರು, ತಾಳ್ಮೆ - ಸಂಯಮಗಳನ್ನು ಮೆರೆದವರೂ, ಧೈರ್ಯಶಾಲಿಗಳೂ ಆದುದರಿಂದ ಈ ಕುಟುಂಬಕ್ಕೆ ನೆಲೆಯಾದ ಇವರ ದೊಡ್ಡ ಮನೆ ನಂದಗೋಕುಲದಂತೆ ಶೋಭಿಸುತ್ತಿತ್ತು. ತವರಿಗೆ ಬಂದುಹೋಗುತ್ತಿದ್ದ ಹೆಣ್ಣುಮಕ್ಕಳು ಅವರ ಮಕ್ಕಳು ಮತ್ತು ಮನೆಯಲ್ಲಿ ನಿತ್ಯಾಶ್ರಯ ಪಡೆದ ಹತ್ತಿರದ ಬಂಧುಗಳು ಸೇರಿದಂತೆ ಯಾವುದೇ ಕಾಲಕ್ಕೆ ವೃದ್ಧರು, ಶಿಶುಗಳು, ಮಕ್ಕಳು ಮರಿ ಆದಿಯಾಗಿ 35-40 ಜನರು ಅನ್ಯೋನ್ಯವಾಗಿ ವಾಸಿಸುತ್ತಿದ್ದ ಖ್ಯಾತಿ ಈ ಮನೆತನದ್ದಾಗಿದೆ.

### ಹೊರಗಿನ ಪ್ರಭಾವ

ಟಿ.ಎಸ್. ಕುಟುಂಬದ ಒಂದು ವಿಶೇಷವೆಂದರೆ ಕುಟುಂಬದ ಎಲ್ಲ ಸದಸ್ಯರೂ ಬ್ರಹ್ಮವಿದ್ಯಾ ಸಮಾಜ(Theosophical Soceity)ದ ಶಾಶ್ವತ ಸದಸ್ಯರುಗಳಾಗಿರುವುದು. ಬ್ರಹ್ಮವಿದ್ಯಾ ಸಮಾಜ ವಿಶ್ವದ ಎಲ್ಲ ಧರ್ಮಗಳನ್ನು ಸಮನ್ವಯಗೊಳಿಸುವ ನಿಟ್ಟಿನಲ್ಲಿ ಸ್ಥಾಪಿತವಾದ ಒಂದು ಅಂತರಾಷ್ಟ್ರೀಯ ಸತ್ಯಾನ್ವೇಷಣಾ ಸಂಸ್ಥೆ. ವಿವಿಧ ಧರ್ಮಗ್ರಂಥಗಳಲ್ಲಿ ಅಡಗಿರುವ ವೈಜ್ಞಾನಿಕ ವಿಚಾರಗಳನ್ನು ಸ್ವತಂತ್ರವಾಗಿ ವಿಶ್ಲೇಶಿಸುವುದರ ಮೂಲಕ ಸೃಷ್ಟಿಯ ಹಿಂದಿನ ಪರಮಸತ್ಯವನ್ನು ಅನ್ವೇಶಿಸಿ ಬದುಕಿನ ರಹಸ್ಯವನ್ನು ಭೇದಿಸುವುದು ಈ ಸಂಸ್ಥೆಯ ಉದ್ದೇಶ. ಭಾರತದಲ್ಲಿ ಇದರ ಶಾಖೆ 1905ರಲ್ಲಿ ಮದರಾಸಿನಲ್ಲಿ ಸಂಸ್ಥಾಪಿತವಾಯಿತು. ಕ್ರಮೇಣ ಎಲ್ಲ ರಾಜ್ಯಗಳ ಪ್ರಮುಖ ಪಟ್ಟಣಗಳಲ್ಲಿ Theosphical Lodge ಎಂಬ ಉಪ ಶಾಖೆಗಳು ಏರ್ಪಟ್ಟು ವಿಶ್ವಭ್ರಾತೃತ್ವವನ್ನೂ, 'ಎಲ್ಲ ಧರ್ಮಗಳ ಗುರಿ ಒಂದೇ' ಎನ್ನುವ ಮತ್ತು 'ಇಡೀ ವಿಶ್ವವೆಲ್ಲ ಒಂದೇ ಆತ್ಮ' ಎನ್ನುವ ತತ್ವ ಪ್ರಚಾರದಲ್ಲಿ ನಿರಂತರ ತೊಡಗಿಸಿಕೊಂಡ ವಿಶ್ವವೇದಿಕೆಗಳಾಗಿ ಉಳಿದಿವೆ. ದೊಡ್ಡಬಳ್ಳಾಪುರದಲ್ಲೂ ಇಂತಹ ಲಾಡ್ಜ್ ಒಂದು 1905 ರಲ್ಲಿ ಸ್ಥಾಪನೆಗೊಂಡಿದ್ದು ಟಿ.ಎಸ್. ಕುಟುಂಬದ ಸದಸ್ಯರು ಮೊದಲಿನಿಂದಲೂ ಇದರ ಯಶಸ್ವಿ ನಿರ್ವಹಣೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾ ಬಂದಿರುತ್ತಾರೆ.

ಹಿಂದೂ ಧರ್ಮದ ಒಂದು ಮೂಲ ನಂಬಿಕೆಯಾದ ಪುನರ್ಜನ್ಮದಲ್ಲಿ ನಂಬಿಕೆಯಿದ್ದ ಡಾ: ಅನಿಬೆಸೆಂಟ್ ರವರು ಭಾರತದಲ್ಲಿ ಕಾಲಿಡುವ ಮೊದಲೇ ತಾನು ಹಿಂದಿನ ಜನ್ಮಗಳಲ್ಲಿ ಅನೇಕಬಾರಿ ಭಾರತದಲ್ಲಿ ಹುಟ್ಟಿ ಬಂದಿದ್ದುದಾಗಿ ಘೋಷಿಸಿದ್ದರು. ಇವರು 1893ರಲ್ಲಿ ಭಾರತಕ್ಕೆ ಬಂದು ಅಲ್ಲಿನ ತಾತ್ವಿಕ ಮೌಲ್ಯಗಳನ್ನು ಅಭ್ಯಸಿಸಿ ಪುನಶ್ಚೇತನಗೊಳಿಸಿದರು. ಹುಟ್ಟಿನಲ್ಲಿ ಪರಕೀಯರಾದರೂ ಭಾರತೀಯರ ಉದ್ಧಾರಕ್ಕಾಗಿ ಟೊಂಕ ಕಟ್ಟಿ ನಿಂತು ಇಂಡಿಯಾ ಮತ್ತು ಅಫ್ಘಾನಿಸ್ತಾನಗಳಲ್ಲಿ ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ಧ್ವನಿ ಎತ್ತಿದರು. ಭಾರತವನ್ನು ಬ್ರಿಟಿಷ್ ಕಾಮನ್ ವೆಲ್ತ್ ರಾಷ್ಟ್ರಗಳ ಪಂಕ್ತಿಯಲ್ಲಿಟ್ಟು ತತ್ವದ ಆಧಾರದ ಮೇಲೆ ಇಲ್ಲಿ ಸ್ವಾತಂತ್ರ್ಯವನ್ನು

ಪುನಃ ಸ್ಥಾಪಿಸುವ ಉದ್ದೇಶದಿಂದ 1915ರಲ್ಲಿ ಹೋಂ ರೂಲ್ ಲೀಗ್ ಪ್ರಾರಂಭಿಸಿದರು. ಪರತಂತ್ರದ ವಿರುದ್ಧ ಸತ್ಯಾಗ್ರಹ, ನಾಗರಿಕ ಪ್ರತಿರೋಧ (Civil Disobedience) ಕಾರ್ಯಕ್ರಮಗಳ ಮೂಲಕ ಸ್ವಾತಂತ್ರ್ಯವನ್ನು ಸಾಧಿಸುವ ಕಾಂಗ್ರೆಸ್ ನೀತಿಗಿಂತಲೂ ಜನಸಾಮಾನ್ಯರಲ್ಲಿ ಸ್ವಾತಂತ್ರ ಪ್ರಜ್ಞೆಯನ್ನು ಮೂಡಿಸುವ ಮೂಲಕ ಸ್ವಾತಂತ್ರ್ಯವನ್ನು ಗಳಿಸಿಕೊಡುವುದು ಉತ್ತಮ ಮಾರ್ಗವೆಂದು ಇವರು ನಂಬಿದ್ದರು. ಮಿಂಟೋ-ಮಾರ್ಲೆ ಸುಧಾರಣೆ ಸೂತ್ರಗಳ ರೂಪದಲ್ಲಿ ಸ್ಥಳೀಯರನ್ನೊಳಗೊಂಡ ಜವಾಬ್ದಾರಿಯುತ ಸರ್ಕಾರವನ್ನು ಭಾರತಕ್ಕೆ ಒದಗಿಸುವ ಬ್ರಿಟಿಷ್ ತಂತ್ರವನ್ನು ಡಾ: ಅನಿಬೆಸಂಟ್ ಧಿಕ್ಕರಿಸಿ ಸ್ಥಳೀಯರೇ ಆಳ್ವಿಕೆ ನಡೆಸಿಕೊಳ್ಳುವ ಪೂರ್ಣ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಮೊದಲಿಗೆ ಕಾಂಗ್ರೆಸ್ ಅನಿಬೆಸಂಟರ ಧೋರಣೆಗಳಿಗೆ ವಿರುದ್ಧವಾಗಿದ್ದರೂ ಕ್ರಮೇಣ ಈ ಧೋರಣೆಗಳ ವೈಶಾಲ್ಯವನ್ನೂ ದೂರದೃಷ್ಟಿಯನ್ನೂ ಮನಗಂಡು 1914ರಲ್ಲಿ ರಾಜಕೀಯ ಚಟುವಟಿಕೆಗಳಲ್ಲಿ ಅನಿಬೆಸೆಂಟರು ಸಹಭಾಗಿಯಾಗಲು ಅನುವು ಮಾಡಿಕೊಟ್ಟಿತು. ಕಾಂಗ್ರೆಸ್‌ನ ಅತಿವಾದಿಗಳು (Extremists) ಮತ್ತು ಸುಧಾರಣಾ ವಾದಿ (Moderates)ಗಳಲ್ಲಿದ್ದ ಭಿನ್ನತೆಯನ್ನು ತೊಡೆದು ಸಂಸ್ಥೆಯನ್ನು ಬಲಪಡಿಸಿದ ಇವರ ಸಾಧನೆ 1917ರಲ್ಲಿ ಇವರು ರಾಷ್ಟ್ರೀಯ ಕಾಂಗ್ರೆಸ್‌ನ ಪ್ರಪ್ರಥಮ ಮಹಿಳಾ ಅಧ್ಯಕ್ಷಿಣಿಯಾಗುವಂತೆ ಮಾಡಿತು. ಹೋಂ ರೂಲ್ ಲೀಗ್ ರಾಷ್ಟ್ರೀಯ ಕಾಂಗ್ರೆಸ್‌ನ ಅಂಗ ಸಂಸ್ಥೆಯಾಗಿ ಪರಿಣಮಿಸಿತು.

ಅನಿಬೆಸಂಟರ ನೀತಿ ಧೋರಣೆಗಳು ಅಂದಿನ ಯುವ ಜನಾಂಗವನ್ನು ಬಹಳವಾಗಿ ಆಕರ್ಷಿಸಿದವು. ಈ ರೀತಿ ಪ್ರಭಾವಿತರಾದ ಯುವಕರಲ್ಲಿ ಸಿದ್ದಲಿಂಗಯ್ಯನವರೂ ಒಬ್ಬರು. ಮುಂದೆ 1924ರಲ್ಲಿ ಅನಿಬೆಸಂಟ್ ಬ್ರಹ್ಮವಿದ್ಯಾ ಸಮಾಜದ ಭಾರತ ಅಧ್ಯಾಯದ ಅಧ್ಯಕ್ಷಣಿಯಾಗಿ ಬಂದುದು ಸಿದ್ದಲಿಂಗಯ್ಯನವರನ್ನು ಅನಿಬೆಸಂಟರ ತತ್ವಗಳಿಗೆ ಮತ್ತಷ್ಟು ಹತ್ತಿರವಾಗಿಸಿತು. ಇದರಿಂದ ಸಿದ್ದಲಿಂಗಯ್ಯನವರ ಮನೋವೈಶಾಲ್ಯದ ಜತೆಗೆ ದೃಢ ನಿಶ್ಚಯ ಗುಣವೂ ಬೆಳೆಯುವಂತಾಯಿತು. ಭಾರತದ ಸಾಮಾಜಿಕ - ರಾಜಕೀಯ ಸ್ಥಿತಿಗತಿಗಳ ಬಗೆಗಿನ ಅನಿಬೆಸಂಟ್‌ರವರ ಕಳಕಳಿ ಅವರ ಪ್ರಬುದ್ಧ ವಿಚಾರಧಾರೆ, ಸ್ವರಾಜ್ಯದ ವಿಶಿಷ್ಟ ಕಲ್ಪನೆ ಹಾಗೂ ಕಾರ್ಯಸಾಧನೆಯಲ್ಲಿ ಅವರು ತೋರಿದ ಅಚಲ ಸ್ಥೈರ್ಯ ಮತ್ತು ದೃಢ ನಿಶ್ಚಯ ಗುಣಗಳು ಇವುಗಳಿಂದ ಸಿದ್ದಲಿಂಗಯ್ಯ ವಿಶೇಷವಾಗಿ ಪ್ರಭಾವಿತರಾದರು. ಅನಿಬೆಸಂಟರ ಬದುಕಿನಲ್ಲಿ ಶಿಸ್ತು ಅತಿ ಮುಖ್ಯ ನೀತಿಯಾಗಿದ್ದು ಸಾರ್ವಜನಿಕ ಜೀವನದಲ್ಲೂ ಶಿಸ್ತು ಅತ್ಯವಶ್ಯಕವೆಂದು ಅವರು ಪ್ರತಿಪಾದಿಸುತ್ತಿದ್ದರು. ಅದೇ ಕಾರಣಕ್ಕೆ ಅವರು ಮಹಾತ್ಮಗಾಂಧೀಯವರ ಸತ್ಯಾಗ್ರಹ ಮಾರ್ಗವನ್ನು ಒಪ್ಪುತ್ತಿರಲಿಲ್ಲ. ಅದರಿಂದ ರಾಷ್ಟ್ರೀಯ ಬದುಕು ಶಿಸ್ತುಗೆಡುತ್ತದೆಂಬುದು ಅವರ ಅಭಿಪ್ರಾಯವಾಗಿತ್ತು. ಇದು ಸಿದ್ದಲಿಂಗಯ್ಯನವರು ಮೇಲೆ ವಿಶೇಷ ಪ್ರಭಾವವನ್ನು ಬೀರಿದ್ದಿತು. ಸಿದ್ದಲಿಂಗಯ್ಯನವರು ಬೆಳೆದು ಬಂದ ಪರಿಸರದಲ್ಲಿ ಇದು ಒಂದು ಮಹತ್ವದ ಅಂಶವಾಗಿದೆ. ಶ್ರೀಯತರು ತಮ್ಮನೆನಪುಗಳಲ್ಲಿ 'ನಾನು ಶಿಸ್ತಿನ ಬದುಕಿನಲ್ಲಿ ಭರವಸೆ ಇಟ್ಟವನು' ಎಂದೂ, 'ನಾನು ಗಾಂಧೀ ವಿರೋಧಿಯಾಗಿದ್ದೆ' ಎಂದೂ ಹೇಳಿಕೊಂಡಿರುವುದು ಗಮನಾರ್ಹ. ಈ ಪರಿಸರವೇ ಸಿದ್ದಲಿಂಗಯ್ಯನವರನ್ನೂ ದೀನದಲಿತರ ಉದ್ಧಾರದತ್ತ ಸಾಮಾಜಿಕ ಸುಧಾರಣೆಯತ್ತ ತನ್ಮೂಲಕ ಪ್ರಜಾಸ್ವಾತಂತ್ರ್ಯಕ್ಕಾಗಿ ಹೋರಾಡುವುದರತ್ತ ಪ್ರೇರೇಪಿಸಿರಬಹುದಾಗಿದೆ.

ಬ್ರಹ್ಮವಿದ್ಯಾ ಸಮಾಜದೊಂದಿಗಿನ ಈ ಸಂಬಂಧ ಆಧ್ಯಾತ್ಮಿಕ ಶಿಕ್ಷಣವನ್ನೇ ಅಲ್ಲದೆ ಸಿದ್ದಲಿಂಗಯ್ಯನವರ ಬದುಕಿಗೆ ಅತಿ ಮಹತ್ವದ ತಿರುವನ್ನು ನೀಡಿದೆ. ಮುಂದೆ 1932ರಲ್ಲಿ ಇವರ ಸಮಕಾಲೀನರೂ ಬ್ರಹ್ಮವಿದ್ಯಾ ಸಮಾಜದ ಸದಸ್ಯರೂ ಆಗಿದ್ದ ಶಾಮಪುರದ ರಾಮಚಂದ್ರಯ್ಯನವರು ಸಿದ್ದಲಿಂಗಯ್ಯನವರಿಗೆ ವಿಶ್ವಪರ್ಯಟನೆ ಮಾಡಿ ಬರುವ ಪ್ರಚೋದನೆಯನ್ನೊಡ್ಡಿದರು. ಇವರು ಹಿರಿಯ ಸದಸ್ಯರಾದ ಜಿನರಾಜದಾಸ ರವರಿಂದ ವಿಶ್ವದಾದ್ಯಂತ ಹಲವು ಥಿಯಾಸಫಿ ಮಿತ್ರರಿಗೆ ಪರಿಚಯ ಪತ್ರಗಳನ್ನು ಬರೆಸಿಕೊಂಡು ವಿಶ್ವ ಪರ್ಯಟನ ಹೊರಟೇ ಬಿಟ್ಟರು. ಈ ಪ್ರವಾಸ ಇವರಿಗೆ ಉತ್ತೇಜನಕಾರಿಯಾಗಿ ಪರಿಣಮಿಸಲಿಲ್ಲ. ಸ್ಯಾನ್ ಫ್ರಾನ್ಸಿಸ್ಕೊ ಬಂದರಿನಲ್ಲಿ ಬಂದಿಳಿದಾಗ ಇಮಿಗ್ರೇಷನ್ ನಿಯಮಗಳ ಉಲ್ಲಂಘನೆಗಾಗಿ ಅಮೇರಿಕ ಸಂಯುಕ್ತ ಸಂಸ್ಥಾನದ ಅಧಿಕಾರಿಗಳು ಇವರುಗಳನ್ನು ಬಂಧಿಸಿ ವಿಚಾರಣಾ ಪೂರ್ವಕವಾಗಿ ಕ್ವಾರೆಂಟೈನ್‌ನಲ್ಲಿ ಬಂಧಿಸಿಟ್ಟರು. ಈ ಬಂಧನದ ದಿನಗಳಲ್ಲಿ ಬ್ರಿಟಿಷರ ಆಳ್ವಿಕೆಗೊಳಗಾಗಿದ್ದ ಭಾರತೀಯರ ಬಗ್ಗೆ ಪರಕೀಯರ ಕೀಳುಧೋರಣೆಯ ಅರಿವಾಯಿತು. ಸ್ವಾತಂತ್ರ್ಯದ ಬೆಲೆಯನ್ನು ಮನಗಂಡ ಇವರು ಅಲ್ಲಿಂದಲೇ ಸ್ವಾತಂತ್ರ್ಯದ ರಣಕಳಹೆಯನ್ನೂದಿದ ಯೋಧರಾದರು. ಬ್ರಹ್ಮವಿದ್ಯಾ ಸಮಾಜದ ನಂಟು ಹೀಗೆ ಬಹುಮುಖವಾಗಿ ಸಿದ್ದಲಿಂಗಯ್ಯನವರು ಪ್ರಜಾ ರಾಜ್ಯದ ಹರಿಕಾರನಾಗಲು ನಿಮಿತ್ತವಾಗಿ ಪರಿಣಮಿಸಿತು. 1917ರಲ್ಲಿ ಮದರಾಸಿನ ಅಡಿಯಾರ್‌ನಲ್ಲಿ ಬ್ರಹ್ಮವಿದ್ಯಾ ಸಮಾವೇಶ ಹಾಗೂ ಕಾಂಗ್ರೆಸ್ ರಾಷ್ಟ್ರೀಯ ಸಮಾವೇಶ ಜಂಟಿಯಾಗಿ ಏರ್ಪಟ್ಟಿದ್ದುದು ಒಂದು ವಿಶೇಷ.

ಇನ್ನೊಂದು ಸಂಗತಿ ಇವರ ಕುಟುಂಬದ ಬದುಕಿನ ಒಂದು ಗಮನಾರ್ಹ ವಿಷಯವಾಗಿದೆ. ಅದು ನಂದೀಬೆಟ್ಟದ ಬಳಿ ಇರುವ ಹೆಗ್ಗಡಹಳ್ಳಿಯ ಉದಾಸಿ ಮಠದ ತಪಸ್ವಿ ಬಾಬಾ ರವರೊಂದಿಗೆ ಈ ಕುಟುಂಬಕ್ಕೆ ಏರ್ಪಟಿದ್ದ ಸಂಪರ್ಕ. ತಪಸ್ವಿ ಮಹಾರಾಜ್ ಅಥವಾ ಗುರು ಮಹಾರಾಜ್ ಎಂದು ಜನಕ್ಕೆ ಪರಿಚಿತರಾದ ಈ ತಪಸ್ವಿ ಬಾಬ ಸಿದ್ದಲಿಂಗಯ್ಯನವರ ಧಾರ್ಮಿಕ ಗುರುವೇ ಅಲ್ಲದೆ ರಾಜಕೀಯ ಗುರುವೂ ಆಗಿ ಒದಗಿ ಬಂದರು. ತಪಸ್ವಿ ಬಾಬಾ ವಾಸ್ತವಿಕವಾಗಿ ಪಂಜಾಬಿನ ರಾಜಮನೆತನದಲ್ಲಿ ಜನಿಸಿದ ಅರಸು ಕುಮಾರ. ಇವರು ಆಶ್ರಮ ಜೀವನಕ್ಕೆ ಪೂರ್ವದಲ್ಲಿ ಮೊಗಲರ ವಿರುದ್ಧ ಮತ್ತು ಮುಂದೆ ಸ್ವಾತಂತ್ರ ಸಂಗ್ರಾಮದಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದವರು. ಕೊನೆಗೆ ಇಹ ಸಂಸಾರವನ್ನು ತ್ಯಜಿಸಿ ಉದಾಸಿ ಪಂಥವನ್ನು ಸೇರಿ ಪಂಜಾಬ್‌ನ ಕೋಸಿ ಕಲನ್ ಎಂಬ ಊರಿನಲ್ಲಿ 'ವಿಷ್ಣುಧಾಮ' ಎಂಬ ಆಶ್ರಮವನ್ನು ನೆಲೆಗೊಳಿಸಿದ್ದಾರೆ. ಗುರು ಮಹಾರಾಜ್‌ರವರು 1956ರಲ್ಲಿ ಇಚ್ಛಾ ಮರಣ ಶಕ್ತಿಯನ್ನು ಜಗತ್ತಿಗೆ ತೋರಿಸಿ ತಮ್ಮ 187ನೇ ವಯಸ್ಸಿನಲ್ಲಿ ವಿಷ್ಣು ಸಾಯುಜ್ಯ ಸೇರಿದ ಕಥೆ ಇದೆ. ಇವರು ತಮ್ಮ ದಕ್ಷಿಣ ದೇಶದ ಯಾತ್ರೆಯಲ್ಲಿ ಮೈಸೂರು ರಾಜ್ಯದಲ್ಲಿ ಮತ್ತು ವಿಶೇಷವಾಗಿ ಬೆಂಗಳೂರು ಜಿಲ್ಲೆಯಲ್ಲಿ ಪೂರ್ವಜನ್ಮದಲ್ಲಿ ಇವರ ಶಿಷ್ಯರುಗಳಾಗಿದ್ದ ಕೆಲವರನ್ನು ಗುರ್ತಿಸಿಕೊಂಡರಂತೆ. ಈ ಶಿಷ್ಯವೃಂದವೆಲ್ಲವೂ ಸೇರಿ 1937ರಲ್ಲಿ ಹೆಗ್ಗಡಹಳ್ಳಿಯಲ್ಲಿ ಉದಾಸಿ ಮಠದ ಶಾಖೆಯೊಂದನ್ನು ಆರಂಭಿಸಿದ ಇತಿಹಾಸವಿದ್ದು ಅಲ್ಲಿನ ಮಠಾಧಿಪತಿ ಸ್ವಾಮಿ ಶ್ರೀ ಸಚ್ಚಿದಾನಂದರು ತಪಸ್ವಿ ಬಾಬಾರವರ ಉತ್ತರಾಧಿಕಾರಿ. ಬೆಂಗಳೂರಿನ ಬನ್ನೇರುಘಟ್ಟ ರಸ್ತೆಯಲ್ಲಿರುವ ಶ್ರೀ ಬಾಲಯೋಗಿ ಆಶ್ರಮದ ಬಾಲಶಿವಯೋಗಿಗಳನ್ನು ತಪಸ್ವಿ ಮಹಾರಾಜರು ತಮ್ಮ ಪೂರ್ವ ಜನ್ಮದ ಗುರುವೆಂದು

ಗುರುತಿಸಿಕೊಂಡಿದ್ದರೆಂಬ ಪ್ರತೀತಿಯೂ ಇದೆ. ಗುರು ಮಹಾರಾಜರವರ ಈ ಸಂಪರ್ಕ ಟಿ.ಎಸ್. ಕುಟುಂಬದವರಲ್ಲಿ ಭಾರತೀಯ ಧಾರ್ಮಿಕ ಪರಂಪರೆಯ ಬಗ್ಗೆ ಶ್ರದ್ಧೆ ಮೂಡಿಸಿದುದೆ ಅಲ್ಲದೆ ಸಾಧು-ಸಂತರನ್ನು ಗೌರವದಿಂದಲೂ, ಬಡಬಗ್ಗರನ್ನು ದಯಾಪರತೆಯಿಂದಲೂ ಕಾಣುವ ಸತ್ಸಂಪ್ರದಾಯವನ್ನು ರೂಢಿಸಿತು. ಹೀಗಾಗಿ, ಈ ಮನೆಯಲ್ಲಿ ದಿನನಿತ್ಯ ಬಡಬಗ್ಗರಿಗೆ, ಸಾಧು ಸಂತರಿಗೆ, ನಿರಾಶ್ರಿತರಿಗೆ ಬಡ ವಿದ್ಯಾರ್ಥಿಗಳಿಗೆ ಅನ್ನದಾನ, ಅವ್ಯಾಹತವಾಗಿ ನಡೆದದ್ದೇ. ಈ ಪರಿಸರ ಸಿದ್ದಲಿಂಗಯ್ಯನವರಲ್ಲಿ ಅವರ ಶ್ರೀಮಂತಿಕೆಯ ನಡುವೆಯೂ ಅಂದಿನ ಸಮಾಜವನ್ನು ನಿರಂತರ ಕಾಡುತ್ತಿದ್ದ ಬಡತನದ ಪರಿಕಲ್ಪನೆಯನ್ನು ಮೂಡಿಸಿರಲಿಕ್ಕೆ ಸಾಕು.

ಮುಂದೆ ಸಿದ್ದಲಿಂಗಯ್ಯನವರು ರಾಜಕೀಯದಲ್ಲಿ ಬೇಸತ್ತು ಸನ್ಯಾಸ ದೀಕ್ಷೆ ವಹಿಸಿಕೊಳ್ಳುವ ಸಂಕಲ್ಪದಿಂದ ಗುರು ಮಹಾರಾಜರವರ ಬಳಿ ಬಂದಾಗ ಅವರು ಸಿದ್ದಲಿಂಗಯ್ಯನವರನ್ನು ರಾಜಕೀಯದಲ್ಲೇ ಉಳಿದು ದೇಶಸೇವೆ ಮಾಡಲು ಪ್ರೇರೇಪಿಸಿದರು. ರುಮಾಲೆ ಚನ್ನಬಸವಯ್ಯನವರು ತಪಸ್ವಿ ಬಾಬಾರವರು 1950ರ ಸುಮಾರಿನಲ್ಲಿ ಸಿದ್ದಲಿಂಗಯ್ಯನವರಿಗೆ ಕುಟಿ ಪ್ರವೇಶ ಕಾಯಕಲ್ಪವನ್ನು ಅನುಗ್ರಹಿಸಿದ್ದುದನ್ನು ಸ್ಮರಿಸುತ್ತಾ ತಮ್ಮ 80ನೇ ವಯಸ್ಸಿನಲ್ಲೂ ಸಿದ್ದಲಿಂಗಯ್ಯ ಚೇತನಪೂರ್ಣರಾಗಿರುವುದರ ರಹಸ್ಯ ಇದಾಗಿರಬಹುದೆಂದಿದ್ದಾರೆ.

ವಿದ್ಯಾಭ್ಯಾಸ

1911ರಲ್ಲಿ ಸಿದ್ದಲಿಂಗಯ್ಯನವರು ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾದಾಗ ಇದೊಂದು ಉನ್ನತ ಸಾಧನೆಯೆಂದು ಇಡೀ ನಗರ್ತ ಜನಾಂಗವೇ ಹೆಮ್ಮೆಪಟ್ಟಿತು. ಶ್ರೀಯುತರ ವಿದ್ಯಾಭ್ಯಾಸ ಇದೇ ಹುರುಪಿನಲ್ಲಿ ನಡೆದು ಮುಂದೆ ಇವರು ಬಿ.ಎ. ಮತ್ತು ಬಿ.ಎಲ್. ಪದವಿಗಳನ್ನು ಗಳಿಸಿದರು. ವಿದ್ಯಾರ್ಜನೆ ಕಾಲದಲ್ಲೇ ವಿಶಾಲ ನಾಡಿನ ಉದ್ದಗಲಗಳನ್ನು ಕಂಡರು. ಪ್ರಾಥಮಿಕ ಶಿಕ್ಷಣ ಮುಗಿದ ನಂತರ ಪ್ರೌಢಶಾಲೆಗೆ ಬೆಂಗಳೂರು ಸೇರಿದರು. ಪದವಿ ಶಿಕ್ಷಣ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ. ತತ್ವಶಾಸ್ತ್ರವನ್ನು ಐಚ್ಛಿಕ ವಿಷಯವಾಗಿ ಆರಿಸಿಕೊಂಡರು. ಬೆಂಗಳೂರಿನ ಖ್ಯಾತ ವಕೀಲ ಹಾಗೂ ಕಾನೂನು ತಜ್ಞ ಶ್ರೀ ಎಸ್.ಕೆ. ವೆಂಕಟರಂಗಯ್ಯಂಗಾರ್, ಭಾರತೀಯ ಆಡಳಿತ ಸೇವೆಯಲ್ಲಿದ್ದು ಮುಂದೆ ರಾಜ್ಯದ ರಾಜಕೀಯವನ್ನೂ ಪ್ರವೇಶಿಸಿ ಖ್ಯಾತಿಗಳಿಸಿದ ಶ್ರೀ ಜೆ.ಬಿ.ಮಲ್ಲಾರಾಧ್ಯ, ಖ್ಯಾತ ಸಾಹಿತಿ ಶ್ರೀ ವಿ. ಸೀತಾರಾಮಯ್ಯ, ಹಿರಿಯ ಸ್ವಾತಂತ್ರ್ಯಹೋರಾಟಗಾರ ಹಾಗೂ ಶಾಸಕ ಶ್ರೀ ಹೆಚ್.ಆರ್. ಗುರುವಾರೆಡ್ಡಿ ಇವರುಗಳು ಸಿದ್ದಲಿಂಗಯ್ಯನವರ ಸಹಪಾಠಿಗಳು. ಭಾರತದ ಶ್ರೇಷ್ಠ ತತ್ವಶಾಸ್ತ್ರಜ್ಞರಾದ ಡಾ: ಎಸ್. ರಾಧಾಕೃಷ್ಣನ್ ರವರ ಭೋದನೆಯಲ್ಲಿ ತತ್ವಶಾಸ್ತ್ರ ಕಲಿತ ಸಿದ್ದಲಿಂಗಯ್ಯನವರು ತಮ್ಮ ಬದುಕಿನಲ್ಲಿ ದಾರ್ಶನಿಕರಾಗಿಯೇ ಬೆಳೆದಿರುವುದರಲ್ಲಿ ಆಶ್ಚರ್ಯವಿಲ್ಲವಷ್ಟೆ.

ಮುಂದೆ ಶ್ರೀಯುತರು ಇಡೀ ಜನಾಂಗದಲ್ಲೇ ಪ್ರಪ್ರಥಮವಾಗಿ ಬಿ.ಎ. ಪದವೀಧರರಾದುದೇ ಅಲ್ಲದೆ ಮದ್ರಾಸಿನಲ್ಲಿ ಮತ್ತು ತಿರುವಾಂಕೂರಿನಲ್ಲಿ ಸ್ನಾತಕೋತ್ತರ ಕಾನೂನು ವಿದ್ಯಾಭ್ಯಾಸವನ್ನೂ ಪೂರೈಸಿ ವಕೀಲ ವೃತ್ತಿ ಕೈಗೊಂಡಿದುದು ಇಡೀ ನಗರ್ತ ಜನಾಂಗಕ್ಕೆ ಸಂದ ಕೀರ್ತಿ ಎನಿಸಿತ್ತು. ಅವರ ಸಹವಂದಿಗರು ಕೆಲವರು ಹೇಳುವಂತೆ ವಿದ್ಯಾರ್ಥಿದೆಸೆಯಲ್ಲಿ ಇವರೇನೂ ಅಂಥ ಪ್ರತಿಭಾಶಾಲಿಯಾಗಿರಲಿಲ್ಲ. ಶ್ರೀಯುತರು ತಾವೇ ಹೇಳಿರುವಂತೆ ಹೈಸ್ಕೂಲು ಶಿಕ್ಷಣದವರೆಗೆ

ಯಾವ ಪರೀಕ್ಷೆಯಲ್ಲೂ ಒಂದೇ ಬಾರಿಗೆ ಉತ್ತೀರ್ಣರಾದುದೇ ಇಲ್ಲವಂತೆ. ಶಿಕ್ಷಣ ಕ್ಷೇತ್ರದಲ್ಲಿ ಆಗಿಂದಾಗ್ಗೆ ಉಂಟಾದ ಬದಲಾವಣೆಗಳೇ ತಮ್ಮನ್ನು ಅನಾಯಾಸವಾಗಿ ಮುಂದಿನ ತರಗತಿಗಳಿಗೆ ಒಯ್ದವು ಎಂದೂ, ಅಗಣಿತ ಸಾಹಸ ಪ್ರಯತ್ನಗಳ ತರುವಾಯ 1923ರಲ್ಲಿ ನಾನು ಕಾನೂನು ಪದವೀಧರನಾದೆ ಎಂದೂ ತಾವೇ ತಮ್ಮ ನೆನಪುಗಳಲ್ಲಿ ಸ್ವಾರಸ್ಯವಾಗಿ ಹೇಳಿಕೊಂಡಿದ್ದಾರೆ. ಇವರ ಈ ಕಂದಿದ ಪ್ರತಿಭೆಗೆ ಒಂದು ಬಲವತ್ತರವಾದ ಕಾರಣವಿರುವುದು ಕಂಡು ಬರುತ್ತದೆ. ಚಿಕ್ಕಂದಿನಿಂದಲೂ ಬಡಜನರ ಕಷ್ಟ ಕಾರ್ಪಣ್ಯಗಳಿಗೆ ಶ್ರೀಯುತರ ಮನಸ್ಸು ಬಹುವಾಗಿ ಮಿಡಿಯುತ್ತಿತ್ತು. ಜ್ಞಾನ ಬೆಳೆದಂತೆ ಬಡತನ ಸಾಮಾಜಿಕ ಪಿಡುಗೆಂಬುದನ್ನೂ, ಇದಕ್ಕೆ ಭಾರತ ಪ್ರಜೆಗಳು ದಾಸ್ಯಕ್ಕೊಳಗಾಗಿರುವುದೇ ಕಾರಣವೆಂಬುದನ್ನೂ ಮನಗಂಡರು. ಬಿ.ಎ. ತರಗತಿಯಲ್ಲಿ ಇವರ ಪ್ರಾಧ್ಯಾಪಕರಾಗಿದ್ದ ಡಾ: ಎಸ್. ರಾಧಾಕೃಷ್ಣ ರವರು ಇವರ ಖಿನ್ನತೆಯನ್ನು ಗಮನಿಸಿ ಹಿತೋಪದೇಶ ನೀಡಿದ ಸಂಗತಿಯನ್ನು ಈ ಮೊದಲೇ ತಿಳಿದಿದ್ದೇವೆ.

### ವೃತ್ತಿ - ಒಲವು

ಸಿದ್ದಲಿಂಗಯ್ಯನವರ ವಕೀಲಿ ವೃತ್ತಿ ಅವರ ಬದುಕಿನ ಮತ್ತೊಂದು ಗಣನೀಯ ವಿಚಾರ. ವೃತ್ತಿ ನಿರ್ವಹಣೆಯ ದೃಷ್ಟಿಯಿಂದ ಇದು ವಿಜಯ ಗೀತೆ ಎನಿಸಿದ್ದರೂ ಶ್ರೀಯತರಿಂದ ನಾಡಿಗೆ ಸಲ್ಲಬೇಕಾಗಿದ್ದ ಮಹತ್ತರ ಸೇವೆಗೆ ಇದು ಅಡಿಗಲ್ಲಾಯಿತು. 1923ರಲ್ಲಿ ಕಾನೂನು ಶಿಕ್ಷಣವನ್ನು ಮುಗಿಸಿ ಬಂದ ಸಿದ್ದಲಿಂಗಯ್ಯನವರು ಅಣ್ಣ ಸಿದ್ದಪ್ಪನವರ ಇಚ್ಛೆಯಂತೆ ಬೆಂಗಳೂರಿನ ಹಿರಿಯ ವಕೀಲರಾಗಿದ್ದ ಮೋಕ್ಷಗುಂಡಂ ಕೃಷ್ಣಮೂರ್ತಿಯವರ ಲಾ ಛೇಂಬರ್‌ನಲ್ಲಿ ತಮ್ಮ ವೃತ್ತಿ ತರಬೇತಿಯನ್ನಾರಂಭಿಸಿದರು.

ಸುಮಾರು ಮೂರು ವರ್ಷ ಕಾಲ ತರಬೇತಿ ಪಡೆದ ಸಿದ್ದಲಿಂಗಯ್ಯನವರು ಸ್ವಂತವಾಗಿ ವಕೀಲ ವೃತ್ತಿ ನಡೆಸಲು ದೊಡ್ಡಬಳ್ಳಾಪುರಕ್ಕೆ ವಾಪಸಾದರು. ಮನೆಯಲ್ಲೇ ವಕೀಲಿ ಕಛೇರಿ ಸ್ಥಾಪಿಸಿಕೊಂಡರು. ಆದರೆ ಇದರಿಂದ ಅವರಿಗೆ ತೃಪ್ತಿಸಿಗಲಿಲ್ಲ. ಸಮಾಜವನ್ನು ಕಾಡುತ್ತಿದ್ದ ಬಡತನ ಸದಾ ಅವರ ಮನಸ್ಸಿನಲ್ಲಿ ನಿಂತು ನೆಮ್ಮದಿಯನ್ನು ಭಂಗಗೊಳಿಸುತ್ತಿತ್ತು. ಜನರ ಅಂದಿನ ಸಾಮಾಜಿಕ ಸ್ಥಿತಿಗತಿಗಳು ಶೋಚನೀಯವಾಗಿದ್ದು ಅಂಥ ಪರಿಸ್ಥಿತಿಯಲ್ಲಿ ಜೀವನೋಪಾಯಕ್ಕಾಗಿ ಅಥವಾ ಹಣ ಸಂಪಾದನೆಗಾಗಿ ವಕೀಲಿ ವೃತ್ತಿ ನಡೆಸುವುದು ಶ್ರೇಯಸ್ಕರವೆನಿಸಲಿಲ್ಲವೆಂದೂ ಹೊರಗೆ ಸಮಾಜದಲ್ಲಿ ಎದ್ದು ಕಾಣುತ್ತಿದ್ದ ದುಃಖ - ಸಂಕಷ್ಟಗಳಿಂದಾಗಿ ವೃತ್ತಿಯ ಮೇಲೆ ಗಮನಹರಿಸುವುದು ತನಗೆ ಕಷ್ಟದ ವಿಷಯವಾಗಿದ್ದು, ಸಂತೋಷದಿಂದಿರಲು ಸಾಧ್ಯವೇ ಆಗುತ್ತಿರಲಿಲ್ಲವೆಂದೂ ಸಿದ್ದಲಿಂಗಯ್ಯ ತಮ್ಮ ಮನಃಸ್ಥಿತಿಯನ್ನು ತೋಡಿಕೊಂಡಿದ್ದಾರೆ. ಕಾಂಗ್ರೆಸ್ ಚಳುವಳಿ ನನಗೆ ಈ ಬೇಗೆಯಿಂದ ಒಂದು ಬಗೆಯ ಮುಕ್ತಿ ದೊರಕಿಸಿತೆಂದು ನಿಟ್ಟುಸಿರಿಟ್ಟಿದ್ದಾರೆ. ಬಡ ಜನರ ಸೇವೆಯೇ ಪರಮೋಚ್ಚವೆಂದು ಭಾವಿಸಿದ್ದ ಇವರಿಗೆ ಯಾವುದೇ ಅಧಿಕಾರ, ಅಂತಸ್ತು, ಸ್ಥಾನಮಾನಗಳು ರುಚಿಸಲಿಲ್ಲ.

ಸಿದ್ದಲಿಂಗಯ್ಯನವರೊಂದಿಗೆ ವಕೀಲಿ ವೃತ್ತಿ ನಡೆಸಿದ ಸಮಕಾಲೀನರಾರೂ ಈಗ ಜೀವಿಸಿಲ್ಲ. ದೊಡ್ಡಬಳ್ಳಾಪುರದ ವಕೀಲರಾದ ನರಸಿಂಹ ಅಯ್ಯಂಗಾರ್‌ರವರು ಇವರ ಸಮಕಾಲೀನರಾಗಿ ರಾಜಕೀಯದಲ್ಲೂ ಇತರರೊಂದಿಗಿದ್ದವರು. ಇವರೂ ಈಗ ಜೀವಿಸಿಲ್ಲ.

ಇವರ ಪುತ್ರರಲ್ಲಿ ಹಿರಿಯರಾದ ಎಸ್.ಎನ್. ಕೃಷ್ಣಮೂರ್ತಿಯವರು ಹೈದರಾಬಾದಿನಲ್ಲಿ ಹೈಕೋರ್ಟ್ ವಕೀಲರಾಗಿ ವೃತ್ತಿ ಹಿಡಿದಿದ್ದಾರೆ. ಇವರಿಗೆ ಈಗ ಸುಮಾರು 76 ವರ್ಷ ವಯಸ್ಸು. ಒಂದೆರಡು ದಿನಗಳ ವಿಶ್ರಾಂತಿಗಾಗಿ ದೊಡ್ಡಬಳ್ಳಾಪುರಕ್ಕೆ ಬಂದಿದ್ದಾಗ ಅಚಾನಕವಾಗಿ ನನಗೆ ಇವರ ಭೇಟಿ ದೊರಕಿತ್ತು. ಇವರ ಕಿರಿಯ ಸಹೋದರ ಎನ್.ಎಸ್. ಸಂಪತ್ ಅಯ್ಯಂಗಾರ್ ಪತ್ರಿಕೋದ್ಯಮದಲ್ಲಿ ಸೇವೆ ಸಲ್ಲಿಸಿದವರು. ಸಿದ್ದಲಿಂಗಯ್ಯನವರ ಬಗ್ಗೆ ಈ ಸಹೋದರರು ತುಂಬು ಅಭಿಮಾನ ತಳೆದವರಾಗಿದ್ದಾರೆ. ಇವರುಗಳು ಹೇಳುವಂತೆ ಸಿದ್ದಲಿಂಗಯ್ಯನವರು ಕಕ್ಷಿಗಾರರಿಂದ ಫೀಸ್ ಪಡೆದುಕೊಂಡು ವಕೀಲಿಕೆ ನಡೆಸಿದ್ದೇ ವಿರಳ. ಕೇಸು ಮಾಡಲು ಕೋರಿ ಬರುತ್ತಿದ್ದ ಕಕ್ಷಿಗಾರರಿಗೆ ಇವರು ನೋಟೀಸು ನೀಡುವಷ್ಟರಲ್ಲೇ ನ್ಯಾಯ ದೊರಕಿಸಿ ಕೊಡುತ್ತಿದ್ದರಂತೆ. ನ್ಯಾಯಾಲಯದ ಮುಂದೆಯೂ ಇವರು ಕಕ್ಷಿಗಾರರ ನಡುವೆ ಶಾಂತಿ ಒಪ್ಪಂದಗಳನ್ನು ಏರ್ಪಡಿಸುತ್ತಿದ್ದುದೇ ಹೆಚ್ಚು. ಆದರೆ ನ್ಯಾಯಾಲಯದಲ್ಲಿ ಇವರು ಯಾವತ್ತೂ, ವಕಾಲತ್ತು ಇರಲಿ ಇಲ್ಲದಿರಲಿ, ಬಡವರ ದುರ್ಬಲರ ಪರವಾಗಿ ಧ್ವನಿ ಎತ್ತಿ ನ್ಯಾಯ ನಿರ್ಣಯದಲ್ಲಿ ನೆರವಾಗುತ್ತಿದ್ದುದು ಇವರ ನೈಜ ವೃತ್ತಿಪ್ರಜ್ಞೆಯ ದ್ಯೋತಕವಾಗಿದೆ. ರಾಜಕೀಯ ಸೇರುವವರೆಗೂ ಹೀಗೆ ಇವರು ವೃತ್ತಿಯಲ್ಲಿ ಮುಂದುವರೆದು ಮುಂದೆ ಧ್ವಜ ಸತ್ಯಾಗ್ರಹದಲ್ಲಿ ತೊಡಗಿ ಸರ್ಕಾರದ ವಿರುದ್ಧ ಕೂಗೆತ್ತಿದ ಕಾರಣಕ್ಕಾಗಿ ಸರ್ಕಾರ ಇವರ ಸನದ್ ಅನ್ನು ರದ್ದುಗೊಳಿಸಿದ ಬಗ್ಗೆ ವಿವರಿಸಿದ ಮುಗವಾಳಪ್ಪನವರು "ಸಿದ್ದಲಿಂಗಯ್ಯನವರು ಶ್ರೀಮಂತ ವಲಯಗಳಿಗೆ ದೂರ, ಜನಸಾಮಾನ್ಯರೊಂದಿಗೆ ವಿಶೇಷವಾಗಿ ಬೆರೆಯುತ್ತಿದ್ದ ಜನಾನುರಾಗಿ" ಎಂದು ಭಾವತುಂಬಿ ಹೇಳುತ್ತಾರೆ. ಇವರೂ ಸಿದ್ದಲಿಂಗಯ್ಯನವರೊಂದಿಗೆ ಸ್ವಾತಂತ್ರ್ಯ ಚಳುವಳಿಗೆ ಧುಮುಕಿ ಜೈಲುವಾಸ ಅನುಭವಿಸಿದ ಆಪ್ತ ಮಿತ್ರರು. ಸಿದ್ದಲಿಂಗಯ್ಯನವರು ಕಾಂಗ್ರೆಸ್ ಸೇರಲು ನಿರ್ಧರಿಸಿದ ದಿನವೇ ನ್ಯಾಯಾಲಯಕ್ಕೆ ಹೋಗಿ ಮುನ್ಸಿಫರ ಮುಂದೆ ಇನ್ನು ಮುಂದೆ ಯಾವತ್ತೂ ತಾವು ವಕೀಲ ವೃತ್ತಿಯನ್ನು ಕೈಬಿಟ್ಟಿರುವುದಾಗಿಯೂ ಘೋಷಿಸಿ ಬಂದುದನ್ನು ಇವರು ನೆನಪಿಸಿಕೊಳ್ಳುತ್ತಾರೆ.

## ರಾಜಕೀಯ ಪ್ರವೇಶ

ಸಿದ್ದಲಿಂಗಯ್ಯನವರ ಬದುಕು ಬ್ರಹ್ಮವಿದ್ಯಾ ಸಮಾಜದಿಂದ ಪ್ರಭಾವಿತವಾದ ಬಗ್ಗೆ ಮತ್ತು ಟಿ.ಎಸ್. ಕುಟುಂಬದ ಸದಸ್ಯರು ಪ್ರಾರಂಭದಿಂದ ಈವರೆವಿಗೂ ಈ ಲಾಡ್ಜ್‌ನ ನಿರ್ವಹಣೆಯಲ್ಲಿ ಸಕ್ರಿಯವಾಗಿ ಸೇವೆ ಸಲ್ಲಿಸುತ್ತಾ ಬಂದಿರುವ ಬಗ್ಗೆ ಈ ಮೊದಲೇ ಹೇಳಲಾಗಿದೆ. ಸಿದ್ದಲಿಂಗಯ್ಯನವರ ಪರಮಮಿತ್ರರೂ ಅನುವರ್ತಿಗಳೂ ಆದ ಶಾಂಪುರದ ರಾಮಚಂದ್ರಯ್ಯನವರು ದೊಡ್ಡಬಳ್ಳಾಪುರದ Theosophical Lodgeನ ಸದಸ್ಯರಾಗಿದ್ದು ವಿಶ್ವ ಪರ್ಯಟನೆ ಕೈಗೊಳ್ಳಲು 1932ರ ಪ್ರಾರಂಭದಲ್ಲಿ ಸಿದ್ದಲಿಂಗಯ್ಯನವರನ್ನು ಪ್ರೇರೇಪಿಸಿದರು. ಮದ್ರಾಸ್‌ನಿಂದ ಅಂತರ್‌ರಾಷ್ಟ್ರೀಯ ಯಾನ ಕೈಗೊಂಡು ಸಿಲೋನ್, ಸಿಂಗಪುರ್, ಹಾಂಗ್‌ಕಾಂಗ್, ಶಾಂಗೈ, ಕೋಬೆ ಮತ್ತು ಯೋಕೊಹೊಮ ಹಾಗೂ ಪರ್ಲ್‌ಹಾರ್‌ಬರ್‌ಗಳ ಮೂಲಕ ಅಮೇರಿಕ ಸಂಯುಕ್ತ ಸಂಸ್ಥಾನಗಳ ಸ್ಯಾನ್‌ಫ್ರಾನ್ಸಿಸ್ಕೊ ಬಂದರನ್ನು ಸೇರಿದರು. ಅಲ್ಲಿನ ವಿದೇಶಾಂಗ ಅಧಿಕಾರಿಗಳು ಅವರ ದಾಖಲಾತಿಗಳನ್ನು ತನಿಖೆ ಮಾಡಿ ವಿದೇಶ ಪ್ರವಾಸದ ಪರವಾನಿಗೆ ಯುಕ್ತವಾಗಿಲ್ಲ ಎಂಬ ಕಾರಣದಿಂದ ಸುಮಾರು ಒಂದು ತಿಂಗಳ ಕಾಲ ಸ್ಯಾನ್‌ಫ್ರಾನ್ಸಿಸ್ಕೊ ಹಾರ್‌ಬರ್‌ನಿಂದ 15 ಮೈಲಿಗಳು ದೂರದಲ್ಲಿರುವ ಏಂಜಲ್ ಐಲೆಂಡ್‌ನಲ್ಲಿ ವಿಚಾರಣೆಗೆ ಒಳಪಡಿಸಿದರು.

ವಿಚಾರಣೆಯಲ್ಲಿ ತಪ್ಪಿತಸ್ಥರೆಂದು ತೀರ್ಪುನೀಡಿ ದೇಶದಿಂದ ಹೊರ ಹಾಕಲು ಆಜ್ಞೆ ಮಾಡಿದರು. ಈ ಸಂಬಂಧವಾಗಿ ಸಿದ್ದಲಿಂಗಯ್ಯ ಮತ್ತು ರಾಮಚಂದ್ರಯ್ಯ ಸಹ ಅಮೇರಿಕದ ಬ್ರಿಟಿಷ್ ಕೌನ್ಸಿಲ್‌ಗೂ, ಮೈಸೂರು ಸಂಸ್ಥಾನದ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ರವರಿಗೂ ಮಧ್ಯಸ್ಥಿಕೆ ವಹಿಸುವಂತೆ ಕೋರಿ ಮಾಡಿದ ಪ್ರಯತ್ನಗಳು ನಿಷ್ಫಲವಾದವು.

ಇವರ ಮೇಲಿನ ದೊಡ್ಡ ಆರೋಪವೆಂದರೆ ಇವರುಗಳು ಭಾರತೀಯರಾದ ಕಾರಣ ಬ್ರಿಟಿಷರ ಗುಲಾಮರು ಎನ್ನುವುದಾಗಿತ್ತು. ನಂತರ 60 ದಿನಗಳ ಒಳಗೆ ಸಂಯುಕ್ತ ಸಂಸ್ಥಾನಗಳ ಸೀಮೆಯನ್ನು ಬಿಟ್ಟು ಹೊರಗೆ ಹೋಗುವ ಆಜ್ಞೆ ಹೊರಡಿಸಿ ಮುಚ್ಚಳಿಕೆ ಪಡೆದುಕೊಂಡು ಇವರನ್ನು ಬಿಡುಗಡೆ ಮಾಡಲಾಯಿತು. ಆ ಘಳಿಗೆಯಲ್ಲೇ ಸಿದ್ದಲಿಂಗಯ್ಯನವರಿಗೆ ಬ್ರಿಟಿಷ್ ಗುಲಾಮಗಿರಿಯ ಪ್ರಮಾದದ ಅರಿವಾಗಿ ಭಾರತ ಸ್ವತಂತ್ರ ನಾಡಾಗಬೇಕೆಂಬ ಸಂಕಲ್ಪ ಮೂಡಿ ಬಂದಿತು. ಈ ಪ್ರಸಂಗ ಸಿದ್ದಲಿಂಗಯ್ಯನವರಲ್ಲಿ ಅಡಗಿದ್ದ ಅಪರಿಮಿತ ಚೇತನ ದೇಶಾಭಿಮಾನವಾಗಿ ಸಿಡಿದೇಳುವಂತೆ ಮಾಡಿತು. ಅಮೇರಿಕದ ಹೊರ ನಾಡಿನಿಂದಲೇ ಅವರು ಬ್ರಿಟಿಷರಿಂದ ಭಾರತದ ಸ್ವತಂತ್ರ ಅಪಹರಣವಾದುದರ ನಿಕಟ ಪರಿಣಾಮಗಳನ್ನು ವಿಶ್ವದ ಗಮನಕ್ಕೆ ತರುವ ಕಾರ್ಯವನ್ನು ಕೈಗೊಂಡು ಮುಂದೆ ಅವರು ಭೇಟಿಯಾದ ಸ್ಥಳಗಳಲ್ಲೆಲ್ಲಾ ಭಾರತ ಸ್ವಾತಂತ್ರ್ಯದ ಪರ ಭಾಷಣಗಳನ್ನು ಮಾಡಿ ಬಂದರು. ಭಾರತದ ರಾಜಕೀಯ ಸ್ಥಿತಿಗತಿಗಳ ಬಗ್ಗೆ ವಿಶ್ವದ ಪ್ರಜಾಪ್ರಭುತ್ವವಾದಿ ರಾಷ್ಟ್ರಗಳು ಸ್ಪಂದಿಸುವಂತೆ ಮಾಡಿದರು. ಸಿದ್ದಲಿಂಗಯ್ಯನವರ ರಾಷ್ಟ್ರ ಸೇವೆ ಇಲ್ಲಿಂದಲೇ ಪ್ರಾರಂಭವಾಯಿತು.

ನಾಡಿಗೆ ಮರಳಿದವರೇ ಇಲ್ಲಿ ತನ್ನ ಸಹವಂದಿಗರೊಡನೆ ತಮ್ಮ ವಿದೇಶಿ ಯಾತ್ರೆಯ ಕಹಿ ಅನುಭವಗಳನ್ನು, ಭಾವನೆಗಳನ್ನು ಹಂಚಿಕೊಂಡರು. ಆಗ ತನ್ನ ಮಿತ್ರರೆಲ್ಲರೂ ತನ್ನನ್ನು ರಾಜಕೀಯ ಸೇರುವಂತೆ ಪ್ರೇರೇಪಿಸಿದುದನ್ನು ಸಿದ್ದಲಿಂಗಯ್ಯ ಸ್ಮರಿಸಿದ್ದಾರೆ. ಅವರಲ್ಲಿ ರುಮಾಲೆ ಚೆನ್ನಬಸಪ್ಪ, ಮುಗವಾಳಪ್ಪ, ನಾ. ನಂಜುಂಡಿ, ನರಸಿಂಹಯ್ಯ, ಚಂದ್ರಣ್ಣ ಹಾಗೂ ಟಿ. ನರಸಿಂಹ ಅಯ್ಯಂಗಾರ್ ಪ್ರಮುಖರು. ಅವರ ಪರಮ ಮಿತ್ರರಾದ ರುಮಾಲೆ ಚೆನ್ನಬಸಪ್ಪ ಈ ಸಂದರ್ಭಕ್ಕೆ ವಿಶೇಷವಾಗಿ ಸ್ಪಂದಿಸಿದರು. ಅವರ ಸಲಹೆಯಂತೆ ಸವರ್ಣೀಯ ರಾಷ್ಟ್ರಗಳ ಮೇಲೆ ಬಿಳಿಯರ ದಬ್ಬಾಳಿಕೆಯನ್ನು ಹತ್ತಿಕ್ಕುವ ಮಹೋದ್ದೇಶದಿಂದ ದೊಡ್ಡಬಳ್ಳಾಪುರದಲ್ಲಿ ನೆಗಸ್ ಯೂತ್ ಲೀಗ್ ಪ್ರಾರಂಭಗೊಂಡಿತು. ದಕ್ಷಿಣ ಆಫ್ರಿಕಾದ ಜನರನ್ನು ಬ್ಲಾಕ್ ನಿಗರ್ಸ್ ಎಂದು ಕರೆದು ಬಿಳಿಯರು ಅವರನ್ನು ಹಿಂಸಿಸಿದ ದುರ್ಘಟನೆಯ ಸ್ಮರಣೆಗೆ ಈ ಸಂಘಕ್ಕೆ ನೆಗಸ್ ಯೂತ್ ಲೀಗ್ ಎಂದು ನಾಮಕರಣ ಮಾಡಲಾಯಿತು. ಇದರ ಮುಖಂಡತ್ವವನ್ನು ಸಿದ್ದಲಿಂಗಯ್ಯನವರೇ ವಹಿಸಿಕೊಂಡರು. ನೆಗಸ್ ಯೂತ್ ಲೀಗ್‌ನ ಕಾರ್ಯಕ್ರಮಕ್ಕೆ ಸರ್ದಾರ್ ಪಟೇಲ್ ಅವರು ಭೇಟಿ ಕೊಟ್ಟ ಸಂದರ್ಭದಲ್ಲಿ ಈ ಸಂಸ್ಥೆಗೆ ನೆಗಸ್ ಯೂತ್ ಲೀಗ್ ಎಂಬುದರ ಬದಲಾಗಿ ಕಾಂಗ್ರೆಸ್ ಎಂದು ಹೆಸರಿಸಲು ಸೂಚಿಸಿದರು. ಆ ಮೇರೆಗೆ ಮುಂದೆ ಈ ಸಂಸ್ಥೆ ಕಾಂಗ್ರೆಸ್ ಎಂದೇ ಕರೆಯಲ್ಪಟ್ಟಿತು.

ಈ ರೀತಿಯಲ್ಲಿ ದೊಡ್ಡಬಳ್ಳಾಪುರದಲ್ಲಿ ಕಾಂಗ್ರೆಸ್ ಸಂಸ್ಥೆ ಸಿದ್ದಲಿಂಗಯ್ಯನವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದ ಬಗ್ಗೆ ಮತ್ತು ಮುಂದೆ 1936ರಲ್ಲಿ ಪುರಸಭಾ ಚುನಾವಣೆಯಲ್ಲಿ ಶ್ರೀ ಸಿದ್ದಲಿಂಗಯ್ಯನವರು ಕಾಂಗ್ರೆಸ್ ಅಧಿಕೃತ ಹುರಿಯಾಳಾಗಿ ಸ್ಪರ್ಧಿಸಿ ಚುನಾಯಿತರಾದ ಬಗ್ಗೆ ಅವರ ನಿಕಟ ಸಹವರ್ತಿ ಶ್ರೀಮತಿ ಟಿ. ಸುನಂದಮ್ಮ ಸ್ಮರಿಸಿದ್ದಾರೆ. ಸರ್ದಾರ್ ಪಟೇಲರು

ನೆಗಸ್ ಯೂತ್ ಲೀಗ್‌ನ್ನು ಉದ್ದೇಶಿಸಿ ಭಾಷಣ ಮಾಡಿದ ಆ ಸಭೆಯಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಜನ ಭಾಗವಹಿಸಿದುದನ್ನು ಸಿದ್ದಲಿಂಗಯ್ಯನವರು ಉತ್ತೇಜಿತರಾಗಿ ಸ್ಮರಿಸಿದ್ದಾರೆ. ನೆಗಸ್ ಯೂತ್ ಲೀಗ್ ಮುಂದೆ ಎನ್.ಎಸ್. ಹರ್ಡೀಕರ್‌ರವರ ಹಿಂದುಸ್ಥಾನಿ ಸೇವಾದಳದ ಮಾದರಿಯಲ್ಲಿ ಕಾಂಗ್ರೆಸ್ ಸೇವಾ ದಳವಾಗಿ ರೂಪ ತಾಳಿ ಕಾಂಗ್ರೆಸ್‌ನ ಎಲ್ಲಾ ಚಟುವಟಿಕೆಗಳಿಗೆ ಬೆನ್ನೆಲುಬಾಗಿ ನಿಂತಿತು. ಸ್ವಾತಂತ್ರ್ಯಾನಂತರದಲ್ಲಿ ರಾಜ್ಯದ ಎಲ್ಲ ಸೇವಾದಳದ ಘಟಕಗಳು ಒಂದಾಗಿ ಭಾರತ ಸೇವಾದಳ ಸಂಸ್ಥೆ ಅಸ್ತಿತ್ವಕ್ಕೆ ಬಂತು. ಇದು 1975ರಲ್ಲಿ ತನ್ನ ಬೆಳ್ಳಿ ಹಬ್ಬವನ್ನು ಆಚರಿಸಿದ್ದು ಸಿದ್ದಲಿಂಗಯ್ಯನವರ ಸ್ಮರಣೆಯಲ್ಲಿ ಹಸಿರಾಗಿ ನಿಂತಿದೆ.

ತಮ್ಮ ವಿದೇಶಿ ಪ್ರವಾಸದ ಅನುಭವ ಮೊದಲ ಕಾರಣವಾದರೆ ಊರಿನಲ್ಲಿ ತನ್ನ ಮಿತ್ರರು ರಾಜಕೀಯ ಸೇರಲು ನೀಡಿದ ಪ್ರಚೋದನೆ ತಾನು ರಾಜಕೀಯ ಪ್ರವೇಶಿಸಲು ಇನ್ನೊಂದು ಕಾರಣವಾಗಿ ಪರಿಣಮಿಸಿತು ಎಂದು ಸಿದ್ದಲಿಂಗಯ್ಯನವರು ಹೇಳಿಕೊಂಡಿದ್ದಾರೆ. ಮಹಾತ್ಮಾ ಗಾಂಧಿಯವರು ನಂದಿ ಬೆಟ್ಟದಲ್ಲಿ ತಂಗಿದ್ದ ಸಮಯದಲ್ಲಿ ದೊಡ್ಡಬಳ್ಳಾಪುರಕ್ಕೆ ಕರ್ನಾಟಕ ಪ್ರಾಂತ್ಯದ ಅನೇಕ ಮುಖಂಡರು ಬಂದು ಹೋಗುತ್ತಿದ್ದರು. ಅವರಲ್ಲಿ ಎನ್.ಎಸ್. ಹರ್ಡೀಕರ್, ಕಮಲಾ ದೇವಿಚಟ್ಟೋಪಾದ್ಯಾಯ, ಬಿ.ಎನ್.ಗುಪ್ತ ಹಾಗೂ ಆರ್.ಆರ್. ದಿವಾಕರ್ ಪ್ರಮುಖರು. ಅವರ ವಿಚಾರ ಪೂರ್ಣ ಭಾಷಣಗಳಿಂದ ದೊಡ್ಡಬಳ್ಳಾಪುರ ಪಟ್ಟಣದಲ್ಲಿ ರಾಜಕೀಯ ವಾತಾವರಣ ದಟ್ಟವಾಯಿತು. ಇದೇ ಸಮಯದಲ್ಲಿ ಮಹಾತ್ಮಾಗಾಂಧಿಯವರು, ಭಾರತ ದೇಶದ ಪ್ರತಿಯೊಂದು ಕುಟುಂಬವೂ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ಒಬ್ಬೊಬ್ಬ ಸೇವಾಕರ್ತರನ್ನು ಮುಡಿಪಾಗಿಡಬೇಕೆಂದು ಕೊಟ್ಟ ಕ್ರಾಂತಿಯ ಕೂಗು ಸಿದ್ದಲಿಂಗಯ್ಯನವರಿಗೆ ರಾಜಕೀಯದ ಬಾಗಿಲನ್ನು ತೆರೆದಿಟ್ಟಿತು. ತನ್ನ ಒಟ್ಟು ಕುಟುಂಬದ ಎಲ್ಲ ಸದಸ್ಯರೂ ತಾನು ಕಾಂಗ್ರೆಸ್ ಸೇರಲು ಇಚ್ಛೆ ಪಟ್ಟುದುದನ್ನು, ತನ್ನ ಪತ್ನಿ ಪಾರ್ವತಮ್ಮ ಸಹ ಈ ಅವಕಾಶ ತನ್ನ ಪತಿಗೆ ಒದಗಿ ಬಂದುದಕ್ಕೆ ಹೆಮ್ಮೆ ಪಟ್ಟುದುದೇ ಅಲ್ಲದೆ ತಮ್ಮ ಎಲ್ಲ ಚಟುವಟಿಕೆಗಳಿಗೆ ಸಹಕಾರ ನೀಡಿ ತನ್ನೊಂದಿಗೆ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದನ್ನು ಮತ್ತು ಅಣ್ಣ ತಮ್ಮಂದಿರು ತನ್ನ ಕುಟುಂಬದ ಸಕಲ ಜವಾಬ್ದಾರಿಯನ್ನೂ ನಿರ್ವಹಿಸುವ ಆಶ್ವಾಸನೆ ನೀಡಿ ತನ್ನನ್ನು ತಾನು ರಾಜಕೀಯದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಸಕಲ ರೀತಿಯಲ್ಲಿ ಸಹಕಾರ ಮತ್ತು ಬೆಂಬಲ ಸಹ ನೀಡಿದುದನ್ನು ಶ್ರೀಯುತರು ವಿಶೇಷವಾಗಿ ಸ್ಮರಿಸುತ್ತಾರೆ.

ಶ್ರೀಯುತರು ಈ ವೇಳೆಗಾಗಲೇ ವಕೀಲ ವೃತ್ತಿಯಲ್ಲಿ ತೊಡಗಿದ್ದರು. ವೃತ್ತಿಯಿಂದ ಹೆಚ್ಚಿನ ಸಂಪಾದನೆಯಾಗುತ್ತಿತ್ತು. ಶ್ರೀಮಂತ ಕುಟುಂಬಕ್ಕೆ ಸೇರಿದವರಾಗಿ ಅವರಿಗೆ ಯಾವುದೇ ರೀತಿಯ ಆರ್ಥಿಕ ಸಮಸ್ಯೆ ಇದ್ದಿರಲಿಲ್ಲ. ಆದಾಗ್ಯೂ ಅಂದಿನ ಸಾಮಾಜಿಕ ಬದುಕಿನ ಭವಣೆಗಳನ್ನು ಕಂಡು ಜೀವನೋಪಾಯಕ್ಕಾಗಿ ವಕೀಲಿಕೆ ಮಾಡುವುದಕ್ಕೆ ತನ್ನ ಮನಸ್ಸು ಒಪ್ಪಲಿಲ್ಲವಾದ ಕಾರಣ ಜಿಗುಪ್ಸೆ ಮತ್ತು ಅತೃಪ್ತಿಯ ನಡುವೆಯೇ ವೃತ್ತಿಗೆ ಅಂಟಿಕೊಂಡಿದ್ದರು. ಅಂತಹ ದಿನಗಳಲ್ಲಿ ಒಮ್ಮೆ ಬೆಂಗಳೂರಿನ ಶ್ರೇಷ್ಠ ವಕೀಲರಾಗಿದ್ದ ಸಂಪಿಗೆ ವೆಂಕಟಪತಯ್ಯನವರ ಕಛೇರಿಯಿಂದ ಅವರಿಗಾಗಿ ಕರೆ ಬಂತು. ಅಲ್ಲಿ ಹೋದಾಗ ರಾಜ್ಯದ ಪ್ರಮುಖರೆಲ್ಲರೂ ಅಲ್ಲಿ ಸೇರಿದ್ದು ಎಲ್ಲರೂ ಸಿದ್ದಲಿಂಗಯ್ಯನವರನ್ನು ರಾಷ್ಟ್ರೀಯ ಕಾಂಗ್ರೆಸ್‌ನ ಮೈಸೂರು ಸಂಸ್ಥಾನ ವಲಯದ ನೇತೃತ್ವವನ್ನು ವಹಿಸಿಕೊಳ್ಳುವಂತೆ ಸೂಚಿಸಿ ಹುರಿದುಂಬಿಸಿದರು. ಆ ಪೈಕಿ ಕೆ.ಟಿ. ಬಾಷ್ಯಂರವರು, ಭೂಪಾಳಂ

ಸಹೋದರರು ಮತ್ತಿತರರು ಈ ನಾಯಕತ್ವವನ್ನು ಒಪ್ಪಿಕೊಳ್ಳುವಂತೆ ತುಂಬ ಒತ್ತಾಯ ಮಾಡಿದರೆಂದು ಶ್ರೀಯುತರು ಹೇಳಿದ್ದಾರೆ.

ಆಗಿನ ಅವರ ಗೊಂದಲಮಯ ಮನಸ್ಥಿತಿಯಲ್ಲಿ ಈ ಸೂಚನೆಗೆ ತಕ್ಷಣ ಪ್ರತಿಕ್ರಿಯಿಸುವುದು ಅವರಿಗೆ ಕಷ್ಟವಾಯಿತು. ಸ್ವಭಾವತಃ ನಿರಾಶಾವಾದಿಯಾದ ಅವರಿಗೆ ಒಂದುಕಡೆ ರಾಜಕೀಯಕ್ಕೆ ಒಗ್ಗದ ಪ್ರವೃತ್ತಿ, ಅನಿಬೆಸಂಟರ ಶಿಸ್ತಿನ ಬದುಕಿನ ಪ್ರಭಾವ ಹಾಗೂ ವೈರಾಗ್ಯದ ಕಡೆ ಹುಟ್ಟಿದ ಒಲವು - ಇವುಗಳು. ಮತ್ತೊಂದು ಕಡೆ ಸ್ವಾತಂತ್ರ್ಯದ ಹಂಬಲ, ಬಡವರ್ಗಗಳ ಬಗ್ಗೆ ಅನುಕಂಪ ಮತ್ತು ಅವರ ಏಳಿಗೆಯನ್ನು ಸಾಧಿಸುವ ಸೇವಾ ಮನೋಭಾವ - ಈ ಮಧ್ಯೆ ಮನಸ್ಸು ಬಹಳವಾಗಿ ತೊಳಲಾಟಕ್ಕೆ ಸಿಲುಕಿ ಕೊನೆಗೆ ಅನಿಶ್ಚಿತತೆಯಿಂದ ಹೊರ ಬರುವ ಸಂಕಲ್ಪ ಮಾಡಿ ಜವಾಬ್ದಾರಿಯನ್ನು ಒಪ್ಪಿಕೊಂಡರು. "ನನ್ನ ಮನದ ತುಮುಲದಿಂದ ಹೊರ ಬರಲು ನಾನು ನನ್ನ ನಿರಾಶಾವಾದವನ್ನು ಬದಿಗಿಟ್ಟು ಗಾಂಧೀವಾದಿ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲು ಮತ್ತು ಅದರಲ್ಲಿ ನನ್ನ ಬದುಕಿನ ಗುರಿಯನ್ನು ಕಂಡುಕೊಳ್ಳಲು ನಿಶ್ಚಯಿಸಿದೆ" ಎಂದು ಸಿದ್ದಲಿಂಗಯ್ಯ ತಮ್ಮ ನೆನಪಿನ ಕಥನದಲ್ಲಿ ಹೇಳಿಕೊಂಡಿದ್ದಾರೆ. ಈ ಅವಕಾಶವನ್ನು ದೇವರು ಕೊಟ್ಟ ವರವೆಂಬೇ ಭಾವಿಸಿದ ಅವರು ಪ್ರಜಾಹಿತ ಸಾಧನೆಯಲ್ಲಿ ತೊಡಗಿಸಿಕೊಂಡು ಕರ್ಮಯೋಗದಿಂದ ಪ್ರಜಾಸ್ವಾತಂತ್ರ್ಯವನ್ನು ಸಾಧಿಸುವುದನ್ನು ತಮ್ಮ ಬದುಕಿನ ಗುರಿಯಾಗಿಸಿಕೊಂಡರು.

ಅವರ ಈ ನಿರ್ಧಾರವನ್ನು ದೊಡ್ಡಬಳ್ಳಾಪುರದ ಅಂದಿನ ನ್ಯಾಯಾಧೀಶರಿಂದ ಹಿಡಿದು ತನ್ನ ಹಿರಿಯ ವಕೀಲ ಕೃಷ್ಣಮೂರ್ತಿಯವರಾದಿಯಾಗಿ ಸರ್ವರೂ ಮೆಚ್ಚಿ ಅಭಿನಂದಿಸಿದುದು ಮತ್ತು ತತ್ವಶಃ ಕಾಂಗ್ರೆಸ್ ವಿರೋಧಿಗಳಾಗಿದ್ದ ಕೆಲವರೂ ಸಹ ತಮ್ಮ ಈ ನಿರ್ಧಾರವನ್ನು ಸ್ವಾಗತಿಸಿ ಶುಭ ಹಾರೈಸಿದುದು ಅವರಿಗೆ ವಿಶೇಷ ಶಕ್ತಿಯಾಗಿ ಪರಿಣಮಿಸಿದಂತೆ ಕಂಡುಬರುತ್ತದೆ. ಇವರ ಮನೆಮಂದಿಗೂ ಇದರಿಂದ ಅತೀವವಾದ ಸಂತೋಷವಾಯಿತು. ಇದು ಕುಟುಂಬಕ್ಕೆ ಸಂದ ದೊಡ್ಡ ಗೌರವವೆಂದು ಭಾವಿಸಿ ಸಿದ್ದಲಿಂಗಯ್ಯನವರನ್ನು ನಾಡಸೇವೆಗೆ ಸಮರ್ಪಿಸಿದರು. ಕುಟುಂಬದ ವ್ಯವಹಾರಗಳ ಚಿಂತೆಯನ್ನು ಬಿಟ್ಟು ಸಂಪೂರ್ಣವಾಗಿ ದೇಶದ ಸೇವೆಗೆ ತನ್ನನ್ನು ವಿನಿಯೋಗಿಸಿಕೊಳ್ಳುವಂತೆ ಹುರಿದುಂಬಿಸಿದರು. ಅಂದಿನಿಂದ ಅವರ ಮನೆ ರಾಜಕೀಯ ಚಟುವಟಿಕೆಗಳ ನಿಬಿಡ ಕೇಂದ್ರವಾಗಿ ಕಾಂಗ್ರೆಸ್ ಕಾರ್ಯಕರ್ತರಿಗೆ ನಿರಂತರವಾಗಿ ಅನ್ನಾಶ್ರಯಗಳ ತಾಣವಾಗಿ ನಡೆದು ಬಂದಿತು.

ರುಮಾಲೆ ಚನ್ನಬಸವಯ್ಯ, ನರಸಿಂಹ ಅಯ್ಯಂಗಾರ್, ನಾ. ನಂಜುಂಡಿ ಮತ್ತಿತರೂ ಸಹ ಸಿದ್ದಲಿಂಗಯ್ಯನವರ ಈ ನಿರ್ಧಾರದಿಂದ ಸಂತುಷ್ಟರಾಗಿ ಇವರ ಬೆಂಬಲಕ್ಕೆ ನಿಂತು ಇಡೀ ತಾಲ್ಲೂಕಿನಲ್ಲಿ ಕಾಂಗ್ರೆಸ್ ಅಲೆಯನ್ನೇ ಎಬ್ಬಿಸಿದರು. ಅಲ್ಲದೆ ಗಾಂಧೀ ಸಂದೇಶವನ್ನು ರಾಜ್ಯದ ಮೂಲೆ ಮೂಲೆಗೆ ಮುಟ್ಟಿಸುವ ಘನಕಾರ್ಯವನ್ನು ಕೈಗೊಂಡರು. ತಮ್ಮ ಎಲ್ಲ ಕಾರ್ಯಾಚರಣೆಯಲ್ಲಿ ತಮಗೆ ಸಿದ್ದಲಿಂಗಯ್ಯನವರ ನೈತಿಕ ಸ್ಥೈರ್ಯ ಸ್ಫೂರ್ತಿಯಾಗಿತ್ತೆಂದು ರುಮಾಲೆ ಚನ್ನಬಸವಯ್ಯನವರು ಹೇಳಿಕೊಂಡಿದ್ದಾರೆ.

ಅಂದಿನ ದಿನಗಳಲ್ಲಿ ನೆರೆ ರಾಜ್ಯವಾದ ಮದ್ರಾಸ್‌ನ ಸಾಮಾಜಿಕ ವಾತಾವರಣದಿಂದ ಪ್ರಭಾವಿತವಾಗಿ ಮೈಸೂರು ಸಂಸ್ಥಾನದಲ್ಲಿ ಸಹ ಬ್ರಾಹ್ಮಣ - ಬ್ರಾಹ್ಮಣೇತರ ವಿಘಟನೆ ಪ್ರಬಲಗೊಂಡಿತ್ತು. "ಬ್ರಾಹ್ಮಣೇತರರು ಕಾಂಗ್ರೆಸಿಗರೊಡನೆ ಬೆರೆತು ಕೆಲಸ ಮಾಡಲು ಎದೆಗಾರಿಕೆ

ಬೇಕಿದ್ದು ಈ ಎದೆಗಾರಿಕೆಯನ್ನು ಲಿಂಗಾಯಿತ ಕೋಮಿಗೆ ಸೇರಿದ ಸಿದ್ದಲಿಂಗಯ್ಯನವರು ತೋರಿದರು" ಎಂದು ಸಿದ್ದಲಿಂಗಯ್ಯನವರ ಪರಮ ಮಿತ್ರರಾದ ಎಂ.ಎನ್. ಜೋಯಿಸ್‌ರವರು ಹೇಳಿದ್ದಾರೆ. ಅಷ್ಟೇ ಅಲ್ಲ ಮುಂದೆ ಅವರು ಜಾತಿ ಮತ ಪಂಥಗಳ ಆಧಾರದ ಮೇಲೆ ಸಾರ್ವಜನಿಕ ಜೀವನ ಅವಲಂಬಿಸುವುದನ್ನು ಖಂಡಿಸಿ ಕೆಲಸ ಮಾಡಿದುದನ್ನು ಎಂ.ಎನ್. ಜೋಯಿಸರು ಸ್ಮರಿಸಿದ್ದಾರೆ. ಸಿದ್ದಲಿಂಗಯ್ಯನವರು ಕಾಂಗ್ರೆಸ್ ಸೇರುವ ವೇಳೆಗೆ ಕಾಂಗ್ರೆಸ್ ಮತ್ತು ಪ್ರಜಾಪಕ್ಷಗಳು ಬ್ರಾಹ್ಮಣೇತರ ಮತ್ತು ಬ್ರಾಹ್ಮಣ ಪಕ್ಷಗಳೆಂದು ವಿಂಗಡಿಸಿಕೊಂಡು ಬೇರೆ ಬೇರೆಯಾಗಿ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದವು. ಸಿದ್ದಲಿಂಗಯ್ಯನವರು ಕಾಂಗ್ರೆಸ್ ಅಧ್ಯಕ್ಷರಾದ ಸ್ವಲ್ಪ ಕಾಲದಲ್ಲಿ ಪ್ರಜಾ ಪಕ್ಷ ಕಾಂಗ್ರೆಸ್ ಪಕ್ಷದಲ್ಲಿ ವಿಲೀನವಾಗಿ ಒಂದೇ ಪಕ್ಷವಾಯಿತು. ಇದು ಕರ್ನಾಟಕದ ರಾಜಕೀಯ ಹಾಗೂ ಸಾಮಾಜಿಕ ಇತಿಹಾಸದಲ್ಲಿ ಜರುಗಿದ ಒಂದು ಮಹತ್ವದ ಘಟನೆಯಾಗಿದೆ. ಇದರಿಂದ ನಾಡಿನ ಒಗ್ಗಟ್ಟು ಬಲವಾಗಿ ಜನರಲ್ಲಿ ರಾಷ್ಟ್ರೀಯ ಭಾವನೆ ಮೂಡುವುದು ಸುಲಭವಾಯಿತು.

ಕಾಂಗ್ರೆಸ್ ಚಳುವಳಿ

ಸ್ವಾತಂತ್ರ ಹೋರಾಟದ ದಿಶೆಯಲ್ಲಿ ಕಾಂಗ್ರೆಸ್ ಪ್ರಾರಂಭದಲ್ಲಿ ಒಂದು ರಾಜಕೀಯ ಪಕ್ಷವಾಗಿರಲಿಲ್ಲ ಎಂಬುದನ್ನು ನಾವು ಗಮನದಲ್ಲಿ ಇಡುವುದು ಅಗತ್ಯ. ಇದು ಒಂದು ರಾಷ್ಟ್ರಪ್ರೇಮದಿಂದ ಪ್ರೇರಿತವಾದ ಚಳುವಳಿಯಾಗಿತ್ತು. ಜನಾಂದೋಲನವಾಗಿತ್ತು. ಹೀಗಾಗಿ ಹೆಚ್ಚು ಹೆಚ್ಚು ಜನರನ್ನು ಇದರಲ್ಲಿ ತೊಡಗಿಸಿಕೊಳ್ಳುವುದು ಸ್ವಾತಂತ್ರ್ಯ ಸಾಧನೆಯ ದೃಷ್ಟಿಯಿಂದ ಮುಖ್ಯವಾಗಿತ್ತು.

ರಾಜ್ಯ ಕಾಂಗ್ರೆಸಿನ ಅಧ್ಯಕ್ಷರಾಗುತ್ತಲೇ ಸಿದ್ದಲಿಂಗಯ್ಯನವರು ಕಾಂಗ್ರೆಸ್ ಆಂದೋಲನವನ್ನು ರಾಜ್ಯದಲ್ಲಿ ಸಂಚಾಲನೆಗೊಳಿಸುವ ಪ್ರಪ್ರಥಮ ಹೆಜ್ಜೆ ಇಟ್ಟು 1937ರಲ್ಲಿ ಮೂವರು ಸದಸ್ಯರ ಒಂದು ಕಾರ್ಯಾಚರಣೆ ಸಮಿತಿಯನ್ನು ರಚಿಸಿದರು. ಈ ಸಮಿತಿಯಲ್ಲಿ ಇವರೊಂದಿಗೆ ಕೆಲಸ ಮಾಡಿದ ಇತರ ಸದಸ್ಯರು ವೀರಕೇಸರಿ ಸೀತಾರಾಮ ಶಾಸ್ತ್ರಿಗಳು ಮತ್ತು ತಗಡೂರು ರಾಮಚಂದ್ರರಾಯರು. ವಿ.ಎಸ್. ನಾರಾಯಣರಾಯರು ಇದರ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು. ಇಡೀ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಸಂಗ್ರಾಮವನ್ನು ಚೇತನಗೊಳಿಸುವ ಜವಾಬ್ದಾರಿ ಈ ಕಾರ್ಯಾಚರಣೆ ಸಮಿತಿಯದ್ದಾಯಿತು. ಸ್ವಾತಂತ್ರ್ಯ ಸಾಧನೆಯ ಜೊತೆಜೊತೆಗೆ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿಯುತ ಸರ್ಕಾರದ ಸ್ಥಾಪನೆಯಾಗುವಂತೆ ಕಾರ್ಯಶೀಲವಾಗುವುದು ಇದರ ಇನ್ನೊಂದು ಘನ ಉದ್ದೇಶವಾಗಿತ್ತು.

ಕಾಂಗ್ರೆಸ್ ಕಾರ್ಯಾಚರಣೆಗೆ ಅಗತ್ಯವಾದ ಸವಲತ್ತುಗಳು ತಾವಾಗಿ ಒದಗಿಬಂದದ್ದನ್ನು ಸಿದ್ದಲಿಂಗಯ್ಯನವರು ಜನರ ಸಕ್ರಿಯ ಸಹಭಾಗಿತ್ವದ ಕುರುಹೆಂದು ತಿಳಿದು ಅತ್ಯಂತ ಕೃತಜ್ಞತೆಯಿಂದ ನೆನಪಿಸಿಕೊಳ್ಳುತ್ತಾರೆ. ಎನ್. ಕೇಶವ ಅಯ್ಯಂಗಾರ್‌ರವರು ಬೆಂಗಳೂರಿನ ಆಸ್ಪತ್ರೆ ರಸ್ತೆಯಲ್ಲಿದ್ದ ತಮ್ಮ ಮನೆಯನ್ನು ಕಾಂಗ್ರೆಸ್ ಕಛೇರಿಗೆ ಬಿಟ್ಟುಕೊಟ್ಟರು. ಸಿದ್ದಲಿಂಗಯ್ಯನವರು ದಿನನಿತ್ಯ ಅದನ್ನು ತಾವೇ ಗುಡಿಸಿ ಒಪ್ಪವಾಗಿಸಿ ಜಮಖಾನೆ ಹಾಸಿ ಅಲ್ಲಿ ಕುಳಿತು ಜನರೊಂದಿಗೆ ಸಂದರ್ಶನದಲ್ಲಿ ಪಾಲ್ಗೊಳ್ಳುತ್ತಿದ್ದರು. ಕಾಂಗ್ರೆಸ್ ಕಾರ್ಯಕರ್ತರೊಂದಿಗೆ ಜನ ಬೆಂಬಲ, ಸಹಾನುಭೂತಿಗಳನ್ನು

ಸೂಚಿಸುವುದಕ್ಕಾಗಿ ಅನೇಕ ಅನಿರೀಕ್ಷಿತ ಜನರು ಪ್ರತಿದಿನ ಅಲ್ಲಿ ಇವರನ್ನು ಭೇಟಿಯಾಗುತ್ತಿದ್ದುದು ಅಂದಿನ ಪ್ರಜಾಸಮುದಾಯದ ಅಂತರಾಳದಲ್ಲಿ ರಾಜಕೀಯ ಪ್ರಜ್ಞೆ ಮತ್ತು ಸಾಮಾಜಿಕ ಕಾಳಜಿಯನ್ನು ಸಿದ್ದಲಿಂಗಯ್ಯನವರಿಗೆ ಮನವರಿಕೆ ಮಾಡಿ ಕೊಟ್ಟಿತು. ಈ ದಿನಗಳಲ್ಲಿ ತಮಗೆ ಅನೇಕಾನೇಕ ಗಣ್ಯ ವ್ಯಕ್ತಿಗಳ ಸಂಪರ್ಕ ಒದಗಿ ಬಂದು ತಮ್ಮ ಚಳುವಳಿಯ ಹಾದಿ ಸುಗಮವಾಯಿತೆಂದು ಶ್ರೀಯುತರು ಹೇಳಿಕೊಂಡಿದ್ದಾರೆ.

ಸಂದರ್ಶಕರನ್ನು ಭೇಟಿಯಾಗಲು ದಿನಂಪ್ರತಿ ಬೆಳಗ್ಗೆಯಿಂದ ಸಂಜೆಯುವರೆಗೆ ಸಿದ್ದಲಿಂಗಯ್ಯನವರು ನೆಲದಮೇಲೆ ಕುಳಿತುಕೊಳ್ಳಬೇಕಾದ ಪರಿಶ್ರಮವನ್ನು ಕಂಡ ಧರ್ಮಪ್ರಕಾಶ ಎಂ.ವಿ. ವೀರಪ್ಪನವರು ಕಛೇರಿಗೆ ಬೇಕಾದ ಕುರ್ಚಿ, ಮೇಜು ಮತ್ತಿತರ ಆಸನಗಳನ್ನು ಒದಗಿಸಿಕೊಟ್ಟರು. ಹೊರಗೆ ಪ್ರವಾಸ ಹೋಗಬೇಕಾದಾಗಲೆಲ್ಲ ಬಿ.ಆರ್. ಮಾಧವಕೃಷ್ಣರವರು ಕಾರು ಸೌಲಭ್ಯವನ್ನು ಒದಗಿಸುತಿದ್ದರು. ಚಿತ್ರ ನಿರ್ಮಾಪಕ ಬಿ.ಎನ್. ರೆಡ್ಡಿಯುವರು, ಎಲ್.ಎಸ್. ವೆಂಕಾಜಿರಾಯರು ಮತ್ತು ಅಡ್ವೋಕೇಟ್ ಬಾಲಕೃಷ್ಣ ಅವರುಗಳು ಸಹ ಕಾಂಗ್ರೆಸ್ ಕಛೇರಿಗೆ ಬೇಕಾಗುವ ಹಣವನ್ನು ತಮ್ಮಿಂದ ಪಡೆದುಕೊಳ್ಳುವಂತೆ ಒತ್ತಾಯ ಮಾಡುತ್ತಿದ್ದರಂತೆ. ಆದರೆ ಸಿದ್ದಲಿಂಗಯ್ಯನವರು ಧನದ್ವೇಷಿ. ವೆಚ್ಚಕ್ಕೆ ಅಗತ್ಯವಾದಷ್ಟಲ್ಲದೆ ಹಣವನ್ನು ಇಟ್ಟುಕೊಳ್ಳುವುದು ಅವರಿಗೆ ಜಿಗುಪ್ಸೆಯ ವಿಚಾರವಾಗಿದ್ದಿತು ಆದ್ದರಿಂದ ತಮ್ಮ ಕಾರ್ಯಕ್ಕೆ ಬೆಂಬಲ ಸೂಚಿಸುವವರಿಗೆ ಪ್ರವಾಸದ ವಾಹನಕ್ಕೆ ಪೆಟ್ರೋಲ್ ತುಂಬಿಸುವ ಮತ್ತು ಇದರ ದುರಸ್ತಿ ವೆಚ್ಚಗಳನ್ನು ನೋಡಿಕೊಳ್ಳುವ ವ್ಯವಸ್ಥೆ ಕಲ್ಪಿಸಲು ಸೂಚಿಸಿದ್ದರು. ಮುಂದೆ ವಿದ್ಯುಚ್ಛಕ್ತಿ ಮಂಡಳಿಯ ಅಧಿಕಾರಿಯಾಗಿದ್ದ ಎಂ.ಟಿ. ಶ್ರೀನಿವಾಸ್ ಅವರು ತಮ್ಮ ಸ್ವಂತ ಕಾರನ್ನೇ ಸಿದ್ದಲಿಂಗಯ್ಯನವರ ಕೆಲಸ ಕಾರ್ಯಗಳಿಗೆ ಬಳುವಳಿಯಾಗಿ ಕೊಟ್ಟಿದಲ್ಲದೆ ತಮ್ಮ ಕಾರ್ ಚಾಲಕ ಜಗನ್ನಾಥ ಅವರನ್ನು ಸಹ ಕಾಂಗ್ರೆಸ್‌ಗಾಗಿ ಶ್ರಮದಾನ ಮಾಡಲು ಕಳುಹಿಸಿಕೊಟ್ಟರು. ಬೆಂಗಳೂರು ನರಸಿಂಹರಾಜ ರಸ್ತೆಯಲ್ಲಿರುವ ಬೆಂಗಳೂರು ಸ್ಟೋರ್ಸ್ ನಿಂದ ಕಾರು ದುರಸ್ತಿಗೆ ಬೇಕಾಗುವ ಬಿಡಿ ಭಾಗಗಳು ಅನುದಾನವಾಗಿ ದೊರೆಯುತ್ತಿದ್ದವು. ನಾಲ್ಕು ಮೂಲೆಯಲ್ಲಿ ಕಾಂಗ್ರೆಸ್ ಧ್ವಜಾಲಂಕೃತವಾಗಿದ್ದ ಇವರ ಕಾರಿಗೆ ಎಲ್ಲ ಪೆಟ್ರೋಲ್ ಬಂಕುಗಳಲ್ಲಿ ಉಚಿತವಾಗಿ ಪೆಟ್ರೋಲನ್ನು ಕೊಡಮಾಡಲಾಗುತ್ತಿತ್ತು. ಮಾರ್ಗಮಧ್ಯದಲ್ಲಿ ಇವರ ತಂಡದ ಉಪಹಾರ ಪಾನೀಯಗಳಿಗೆ ಹೋಟೆಲುಗಳವರು ಹಣ ಪಡೆದುಕೊಳ್ಳಲು ನಿರಾಕರಿಸುತ್ತಿದ್ದರು. ಸಾರ್ವಜನಿಕರ ಈ ಔದಾರ್ಯ ಅವರಿಗೆ ಕಾಂಗ್ರೆಸ್ ಚಳುವಳಿಯಲ್ಲಿ ಆಸಕ್ತಿಯನ್ನು ಹೆಚ್ಚಿಸಿತು. ಅಷ್ಟೇ ಅಲ್ಲ ಜನರ ಬಗ್ಗೆ ಅಪರಿಮಿತ ಅಭಿಮಾನವನ್ನು ಮೂಡಿಸಿತು.

ಹೀಗಾಗಿ ಸಿದ್ದಲಿಂಗಯ್ಯನವರು ಪ್ರವಾಸ ಹೊರಡಲು ಯಾವುದೇ ಪೂರ್ವ ಸಿದ್ಧತೆ ಬೇಕಾಗಿರುತ್ತಿರಲಿಲ್ಲ. ಯಾವ ಗಳಿಗೆಯಲ್ಲಿಯಾದರೂ ಕಾಂಗ್ರೆಸ್ ಕಾರ್ಯಾಚರಣೆಗೆ ಅವರು ಸಿದ್ಧವಾಗಿರುತ್ತಿದ್ದರು. ಇವರ ಮಿತ್ರ ಹಾಗೂ ಸಹವರ್ತಿ ಮುಗಪಾಳಪ್ಪನವರು ಹೇಳುವಂತೆ ಬಟ್ಟೆ, ಹಾಸಿಗೆ, ಹೊದಿಕೆಗಳಿಗೂ ಅವರು ಚಿಂತಿಸುತ್ತಿದ್ದಿಲ್ಲವಂತೆ. ಹೋದ ಕಡೆ ಜನರು ಕೊಡಮಾಡುತ್ತಿದ್ದ ಎಲ್ಲ ಬಗೆಯ ಸೌಕರ್ಯಗಳನ್ನು ಕಿಂಚಿತ್ತೂ ಸಂಕೋಚವಿಲ್ಲದೆ, ಭೇದವಿಲ್ಲದೆ ಸ್ವೀಕರಿಸುತ್ತಿದ್ದರು. ತಮ್ಮೊಂದಿಗೆ ಒಯ್ದಿದ್ದ ಚಾದರ ಬಟ್ಟೆಗಳನ್ನು ಹಾದಿಯಲ್ಲಿ ಬಡಬಗ್ಗರಿಗೆ ಹೊದಿಸಿ ಬಂದ ಅನೇಕ ನಿದರ್ಶನಗಳನ್ನು ಮುಗವಾಳಪ್ಪನವರು ನೆನಪಿಸಿಕೊಳ್ಳುತ್ತಾರೆ.

ಸ್ವಾತಂತ್ರ ಚಳುವಳಿಯ ಅಂಗವಾಗಿ ಸಿದ್ದಲಿಂಗಯ್ಯನವರು ಮೊದಲು ಕೈಗೊಂಡ ಕಾರ್ಯವೆಂದರೆ ಕಾಂಗ್ರೆಸ್ ಸದಸ್ಯತ್ವವನ್ನು ಬೆಳೆಸುವುದು. ಜನ ಸಾಮಾನ್ಯರಿಗೂ ಚಳುವಳಿಯಲ್ಲಿ ತೊಡಗಿಸಿಕೊಳ್ಳುವ ಈ ಪ್ರಯೋಗ "ನಾಲ್ಕಾಣೆ ಸದಸ್ಯತ್ವ" ಎಂದೇ ಪ್ರಸಿದ್ದವಾಗಿತ್ತು. ಇದಕ್ಕಾಗಿ ಸಿದ್ದಲಿಂಗಯ್ಯನವರು ಇಡೀ ರಾಜ್ಯದಲ್ಲಿ ಪ್ರವಾಸ ಕೈಗೊಂಡರು ಜುಲೈ 1937ರಲ್ಲಿ ಪ್ರಾರಂಭಗೊಂಡ ಅವರ ಈ ಸದಸ್ಯತ್ವ ಆಂದೋಲನ ನಂದಿ ಬೆಟ್ಟದ ಬುಡದಲ್ಲಿರುವ ಸುಲ್ತಾನ ಪೇಟೆಯಿಂದ ಮೊದಲಾಗಿ ಕೋಲಾರ ಜಿಲ್ಲೆ, ಬೆಂಗಳೂರು, ಮೈಸೂರು, ತುಮಕೂರು, ಚಿತ್ರದುರ್ಗ, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳನ್ನು (ಆಗಿನ ಇಡೀ ಮೈಸೂರು ಸಂಸ್ಥಾನ) ಸುತ್ತಿ ಬರುವ ವೇಳೆಗೆ ಸೆಪ್ಟೆಂಬರ್ ತಿಂಗಳು ಕಳೆದಿತ್ತು.

ಕಾಂಗ್ರೆಸ್ ಚಳುವಳಿ ಜನಪ್ರಿಯವಾಗುವುದು ಸಂಸ್ಥಾನದ ಸರ್ಕಾರಕ್ಕೆ ಅಪ್ರಿಯವಾಗಿತ್ತು. ಅದನ್ನು ಹತ್ತಿಕ್ಕಲು ಸರ್ಕಾರ ಸರ್ವಪ್ರಯತ್ನದಲ್ಲಿ ತೊಡಗಿರುತ್ತಿತ್ತು. ಕಾಂಗ್ರೆಸ್ ಕಾರ್ಯಾಚರಣೆಗಳನ್ನು ತನ್ನ ಬಾತ್ಮಿದಾರರಿಂದ ತಿಳಿದು ಕಾಂಗ್ರೆಸ್ ಸಭೆಗಳು ಏರ್ಪಡುವ ಮೊದಲೇ ಸರ್ಕಾರ ಪೊಲೀಸ್ ಬಂದೋಬಸ್ತು ಏರ್ಪಡಿಸಿ ಜನರು ಕಾಂಗ್ರೆಸ್‌ನೊಂದಿಗೆ ಸಹಕರಿಸದೇ ಇರುವಂತೆ ಪ್ರಚೋದಿಸುವುದೇ ಅಲ್ಲದೆ ಬೆದರಿಕೆಗಳನ್ನು ಒಡ್ಡಿ ಪ್ರತಿಬಂಧಕಾಜ್ಞೆಗಳನ್ನು ಹೊರಡಿಸುತ್ತಿತ್ತು. ಕಾಂಗ್ರೆಸ್ ಚಳುವಳಿ ತೀವ್ರವಾದ ಅನೇಕ ಸಂದರ್ಭಗಳಲ್ಲಿ ಪೊಲೀಸರ ಕಣ್ಣು ತಪ್ಪಿಸಿ ನಡುರಾತ್ರಿಗಳಲ್ಲಿ ಸಭೆಗಳನ್ನು ನಡೆಸಬೇಕಾಗುತ್ತಿತ್ತು.

ಇಂಥದೇ ಒಂದು ನಡುರಾತ್ರಿಯಲ್ಲಿ ತಾನು ಸುಮಾರು 5 ವರ್ಷದವನಿದ್ದಾಗ ತನ್ನ ತಂದೆಯನ್ನು ಮೊದಲಬಾರಿಗೆ ನೋಡಿದುದಾಗಿ ಸಿದ್ದಲಿಂಗಯ್ಯನವರ ಕಿರಿಯ ಪುತ್ರ ಟಿ.ಎಸ್. ಶಾಂತಕುಮಾರ್ ನೆನಪಿಸಿಕೊಳ್ಳುತ್ತಾರೆ. ಹಗಲೆಲ್ಲ ನೆಲಮನೆಯಲ್ಲಿರಬೇಕಾಗುತ್ತಿದ್ದ ಸಿದ್ದಲಿಂಗಯ್ಯನವರನ್ನು ನೋಡಬೇಕಾದರೆ ಇವರ ಮನೆ ಮಂದಿ ಇಂತಹ ವೇಳೆ ಮೀರಿದ ಸಭೆಗಳಿಗಾಗಿ ಕಾಯಬೇಕಾಗುತ್ತಿದ್ದ ದಿನಗಳು ಅವು. ಅಂದಿನ ಪರಿಸ್ಥಿತಿಯ ಚಿತ್ರಣವನ್ನು ಕೊಡುವ ಪ್ರತಿನಿಧಿ ಸಭೆ ಕಲಾಪದ ವರದಿಯೊಂದನ್ನು ಗ್ರಂಥದ ಎರಡನೇ ಭಾಗದಲ್ಲಿ ಉದ್ದರಿಸಲಾಗಿದೆ. ಸ್ವತಂತ್ರನಾಡಿನಲ್ಲಿ ಐಶಾರಾಮುವಾಗಿ ಬದುಕುತ್ತಿರುವ ನಮ್ಮಲ್ಲಿ ಎಷ್ಟುಮಂದಿಗೆ ಸಿದ್ದಲಿಂಗಯ್ಯನವರಂತಹ ಬಲಿದಾನಿಗಳ ತ್ಯಾಗದ ಅರಿವಿದ್ದೀತು ?

ಅಧಿಕಾರಿಗಳು, ಪೋಲೀಸರು ಅನೇಕಬಾರಿ ಇಂತಹ ಸಭೆಗಳಿಗೆ ಅಡಚಣೆ ಪ್ರತಿಬಂಧಗಳನ್ನೊಡ್ಡಿ ಕಾಂಗ್ರೆಸ್ ಕಾರ್ಯಕರ್ತರೊಂದಿಗೆ ಅನುಚಿತವಾಗಿ ವರ್ತಿಸುತ್ತಿದ್ದುದನ್ನು ನೆನಪಿಸಿಕೊಳ್ಳುವುದರ ಜೊತೆಜೊತೆಗೆ ಅನೇಕ ಅಧಿಕಾರಿಗಳಿಂದಲೂ ಪೊಲೀಸರಿಂದಲೂ ಕಾಂಗ್ರೆಸ್ ಚಟುವಟಿಕೆಗಳಿಗೆ ಅಪ್ರತ್ಯಕ್ಷವಾಗಿ ಬೆಂಬಲ ದೊರೆತುದದನ್ನೂ ಸಿದ್ದಲಿಂಗಯ್ಯನವರು ಸ್ಮರಿಸಿದ್ದಾರೆ. ಶಿವಪುರ ಸಮಾವೇಶದಲ್ಲಿ ಅಧಿಕಾರಿಗಳ ಕುಟುಂಬದ ಸದಸ್ಯರೂ ಕಾರ್ಯಕರ್ತರಾಗಿ ಸ್ವಯಂಸೇವಕರಾಗಿ ಸೇವೆ ಸಲ್ಲಿಸಿದುದನ್ನು ಸಿದ್ದಲಿಂಗಯ್ಯನವರ ಅನುವರ್ತಿಗಳು, ಅನೇಕರು ಹೊಗಳಿದ್ದಾರೆ. ಕಾಂಗ್ರೆಸ್ ಚಳುವಳಿಯಲ್ಲಿ ಪ್ರತಿರೋಧ ಉಂಟು ಮಾಡಿದ ಸರ್ಕಾರದ ಕ್ರಮಗಳು ಜನತೆಯನ್ನು ಮತ್ತಷ್ಟು ರೊಚ್ಚಿಗೆ ಏಳುವಂತೆ ಮಾಡಿದುವು. ಈ ಕ್ರಮಗಳಿಂದ ಪರೋಕ್ಷವಾಗಿ ಕಾಂಗ್ರೆಸ್ ಚಳುವಳಿ ಬಲಗೊಂಡಿತಲ್ಲದೆ ಜನರ ದೃಷ್ಟಿಯಲ್ಲಿ ಸರ್ಕಾರ ಮತ್ತಷ್ಟು ಹೀನಾಯವಾಗಿ ಕಾಣತೊಡಗಿತು.

ಸಿದ್ದಲಿಂಗಯ್ಯನವರ ರಾಜ್ಯ ಪ್ರವಾಸದ ಅವಧಿಯಲ್ಲಿ ಅವರ ನಿಕಟವರ್ತಿಗಳಾಗಿ ಒದಗಿ ಬಂದ ಗಣ್ಯರ ಯಾದಿ ಬಹಳ ದೊಡ್ಡದು. ಮೈಸೂರು ಸಂಸ್ಥಾನವಲ್ಲದೆ ಅಂದಿನ ಕರ್ನಾಟಕ ಪ್ರಾಂತ್ಯ ಹಾಗೂ ರಾಜಾಳ್ವಿಕೆಗೆ ಒಳಪಟ್ಟ 10-17 ಸಣ್ಣ ಸಣ್ಣ ಸಂಸ್ಥಾನಗಳಿಗೆ ಸೇರಿದ ಎಲ್ಲ ನೇತಾರರ ದೇಶಭಕ್ತರ, ತ್ಯಾಗಿಗಳ, ಆದರ್ಶ ಪುರುಷರ ಹೆಸರುಗಳು ಇದರಲ್ಲಿ ಶಾಮೀಲಾಗಿದೆ.

ಸ್ವಾತಂತ್ರ್ಯ ಚಳುವಳಿಯು ಪ್ರಾರಂಭಕ್ಕೆ ರಚಿತಗೊಂಡ ಕ್ರಿಯಾ ಸಮಿತಿಯಲ್ಲಿ ಶ್ರೀಯುತರೊಂದಿಗೆ ವೀರಕೇಸರಿ ಸೀತಾರಾಮ ಶಾಸ್ತ್ರಿಗಳು ಮತ್ತು ತಗಡೂರು ರಾಮಚಂದ್ರರಾಯರು ಶ್ರಮಿಸಿದ್ದಾರೆ. ಮೈಸೂರು ಕಾಂಗ್ರೆಸ್ ಸ್ಥಾಪನೆಯಲ್ಲಿ ರಾಜ್ಯದ ಭೂತಪೂರ್ವ ಮುಖ್ಯ ಮಂತ್ರಿಗಳಾದ ಕೆ.ಸಿ. ರೆಡ್ಡಿಯವರು, ಕೆಂಗಲ್ ಹನುಮಂತಯ್ಯನವರು, ಎಸ್. ನಿಜಲಿಂಗಪ್ಪನವರು, ದೇವರಾಜ ಅರಸು ರವರು, ಕಡಿದಾಳ ಮಂಜಪ್ಪನವರೇ ಅಲ್ಲದೆ ರಾಜಕೀಯ ಧುರೀಣರುಗಳಾದ ಸರ್ವ ಶ್ರೀ ಸಾವುಕಾರ್ ಚನ್ನಯ್ಯ, ಕೆ.ಟಿ. ಭಾಷ್ಯಂ, ಸಂಪಿಗೆ ವೆಂಕಟಪತಯ್ಯ, ವಿ.ಎಸ್. ನಾರಾಯಣ ರಾವ್, ಹೆಚ್.ಎಂ. ಚೆನ್ನಬಸಪ್ಪ, ಮದ್ದೂರು ಕೆ. ಸುಬ್ಬಾರಾವ್, ಎ.ಜಿ. ರಾಮಚಂದ್ರ ರಾವ್, ಮಾಲಿಮರಿಯಪ್ಪ, ಕೆ.ಟಿ. ಸತ್ಯನಾರಾಯಣ ಶೆಟ್ಟಿ, ಆರ್.ಆರ್. ದಿವಾಕರ್, ಭೂಪಾಳಂ ಸಹೋದರರು, ಎನ್.ಸಿ. ತಿಮ್ಮಾರೆಡ್ಡಿ, ಬಿ.ಎನ್. ಗುಪ್ತಾ ಮತ್ತು ಮಹಿಳಾ ಹೋರಾಟಗಾರರ ಪೈಕಿ ಚಿಕ್ಕಮಗಳೂರಿನ ಬಿ.ಎಲ್. ಸುಬ್ಬಮ್ಮ ಸಾವಿತ್ರಮ್ಮ ಬಳ್ಳಾರಿ ಸಿದ್ದಮ್ಮ ಯಶೋಧರಮ್ಮ ದಾಸಪ್ಪ, ಟಿ. ಸುನಂದಮ್ಮ ಮತ್ತು ಸಿದ್ದಲಿಂಗಯ್ಯನವರ ಧರ್ಮಪತ್ನಿ ಪಾರ್ವತಮ್ಮನವರೂ ಪ್ರಮುಖವಾಗಿ ಸೇರಿದವರಾಗಿದ್ದಾರೆ. ಧ್ವಜ ಸತ್ಯಾಗ್ರಹದ ಕಾಲದಲ್ಲಿ ಶ್ರೀಯತರೊಂದಿಗೆ ವಿಶೇಷವಾಗಿ ತೊಡಗಿಸಿಕೊಂಡವರಲ್ಲಿ, ಹೆಚ್.ಕೆ. ವೀರಣ್ಣಗೌಡ ದಂಪತಿಗಳು, ರಂಗರಾಮಯ್ಯನವರು, ಎ.ಜಿ. ಬಂಡೀ ಸಿದ್ದೇಗೌಡರು, ಹೆಚ್.ಸಿ. ದಾಸಪ್ಪನವರು, ತಿರುಮಲಗೌಡರು, ಎಂ.ಎನ್. ಜೋಯಿಸ್‌ರವರು ಹಾಗೂ ಕೊಪ್ಪದ ಜಾಗಿರ್ದಾರ್‌ರವರು ಆದ್ಯರು.

ಭಾರತ ಬಿಟ್ಟು ತೊಲಗಿ ಚಳವಳಿಯಲ್ಲಿ ಪಾಲ್ಗೊಂಡು ಸಿದ್ದಲಿಂಗಯ್ಯನವರೊಂದಿಗೆ ಸೆರೆಮನೆ ಸೇರಿದವಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾದ ಡಿ.ಎಂ. ಚಂದ್ರಶೇಖರ್ ರವರು ಮಾಜಿ ಸಚಿವ ಕೆ.ಹೆಚ್. ದೊರೆಸ್ವಾಮಿ, ಮಹಾರಾಣಿ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಹೆಚ್.ಎನ್. ಕಾತ್ಯಾಯಿನಿ, ಆಕಾಶವಾಣಿ ನಿರ್ದೇಶಕರಾಗಿದ್ದ ಎಸ್.ಪಿ. ವಿಠಲ್, ಮೇಜರ್ ವೇಣುಗೋಪಾಲ್, ಜಿ.ಆರ್. ಸ್ವಾಮಿ, ಕೋಲಾರದ ಹುಸೇನ್ ಸಾಬ್, ಅಜರ್ ಅಲಿ, ಕಮಲಾದೇವಿ ಚಟ್ಟೋಪಾಧ್ಯಾಯ, ಟಿ. ಸಚ್ಚಿದಾನಂದ ಶಿವಂ ಇವರುಗಳು ಶಾಮೀಲಾಗಿದ್ದು, ಗುಪ್ತ ಚಳವಳಿಗಾರರಲ್ಲಿ ಉಚ್ಚ ನ್ಯಾಯಾಲಯದ ಮತ್ತೊಬ್ಬ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಮತ್ತು ಬುದ್ದದಾಸ್, ಎಂ.ಹೆಚ್. ಷಾ, ಅಬ್ದುಲ್ ಗಫಾರ್, ಎಂ.ವಿ. ಕೃಷ್ಣಪ್ಪ, ಸಿ.ಬಿ. ಮೋನಯ್ಯ ಹಾಗೂ ಸರದಾರ್ ಕೆ.ಎ. ವೆಂಕಟರಾಮಯ್ಯ ಇವರನ್ನು ಸಿದ್ದಲಿಂಗಯ್ಯನವರು ಸ್ಮರಿಸಿರುತ್ತಾರೆ.

ಮೈಸೂರು ಕಾಂಗ್ರೆಸ್ ಚಳುವಳಿಯಲ್ಲಿ ಹೊರನಾಡಿನಿಂದ ಮುಂಬೈನ ಉಪಸಚಿವರುಗಳಾಗಿದ್ದ ಎಂ.ಪಿ. ಪಾಟೀಲ್ ಮತ್ತು ಟಿ.ಆರ್. ನೆಸ್ವಿ, ಮದ್ರಾಸಿನ ಟಿ. ಗೋಪಾಲರೆಡ್ಡಿ ಹಾಗೂ ಸೇಲಂನ ವೆಂಕಟಪ್ಪ ಚೆಟ್ಟಿಯಾರ್ ಇವರುಗಳು ಸಿದ್ದಲಿಂಗಯ್ಯನವರ

ಒಡನಾಡಿದವರಾಗಿದ್ದಾರೆ. ಅಷ್ಟೇಕೆ ತಮ್ಮ ನೇರ ಚಿಂತನೆ ಮತ್ತು ದೃಢ ನಿಶ್ಚಯಗಳಿಂದ ರಾಷ್ಟ್ರಪಿತ ಮಹಾತ್ಮ ಗಾಂಧಿ, ಸರ್ದಾರ್ ವಲ್ಲಭಾಯಿ ಪಟೇಲ್ ಮತ್ತು ಜವಹರಲಾಲ್ ನೆಹರು ಇವರುಗಳ ಮನಸ್ಸೊಲಿಸಿಕೊಂಡು ಅವರ ನಂಬಿಕೆ ಭರವಸೆಗಳಿಗೆ ಪಾತ್ರರಾದ ಅಸದೃಶ ವ್ಯಕ್ತಿತ್ವ ಸಿದ್ದಲಿಂಗಯ್ಯನವರದು.

ಸಿದ್ದಲಿಂಗಯ್ಯನವರ ಸಭೆಗಳು ನಡೆಯುವ ಕಡೆಗಳಲೆಲ್ಲ ಆಯಾಯಾ ಪ್ರದೇಶದ ಮುಖಂಡರುಗಳು ಮೊದಲೇ ಸುತ್ತಿನ ಎಲ್ಲ ಗ್ರಾಮಗಳಿಗೆ ಸುದ್ದಿ ಮುಟ್ಟಿಸಿ ಜನರು ಸೇರುವಂತೆ ವ್ಯವಸ್ಥೆಮಾಡುತ್ತಿದ್ದರು. ತಾವೂ ವೇದಿಕೆಗಳಲ್ಲಿ ಕುಳಿತು, ಜನಮನವನ್ನು ಸಿದ್ದಲಿಂಗಯ್ಯನವರಿಗೆ ಹತ್ತಿರವಾಗಿಸಿದರು ಹಾಗೂ ಮುಂದಿನ ಪ್ರವಾಸಕ್ಕೆ ಸೌಲಭ್ಯ ಮಾಡಿಕೊಡುತ್ತಿದ್ದರು. ಈ ಅನುಭವಗಳನ್ನು ಸಿದ್ದಲಿಂಗಯ್ಯನವರು ಕೊನೆಯವರೆಗೂ ನೆನಪಿಸಿಕೊಳ್ಳುತ್ತಿದ್ದರು. ಕಂಡ ಕಂಡವರಲ್ಲಿ ಹಂಚಿಕೊಳ್ಳುತ್ತಿದ್ದರು. ಸಿದ್ದಲಿಂಗಯ್ಯನವರು ಜನಾನುರಾಗಿಗಳಾಗಿ ಬೆಳೆಯುವಲ್ಲಿ ಅವರ ಬದುಕಿನ ಈ ಪಟ್ಟು ಅತಿ ಮಹತ್ವದ್ದಾಗಿ ಪರಿಣಮಿಸಿತು.

ವಿದೇಶ ಪ್ರವಾಸದಲ್ಲಿ ಸಿದ್ದಲಿಂಗಯ್ಯನವರ ಅನುಭವಗಳನ್ನು ಜನಜನಿತಗೊಳಿಸುವಲ್ಲಿ ಮತ್ತು ಸಿದ್ದಲಿಂಗಯ್ಯನವರ ಕಾಂಗ್ರೆಸ್ ಸಭೆಗಳ ಸಂದೇಶ ಹಾಗೂ ಮಾಹಿತಿಗಳನ್ನು ಪ್ರಸಾರ ಮಾಡುವ ಮೂಲಕ ಚಳುವಳಿಯನ್ನು ಯಶಸ್ಸುಗೊಳಿಸುವಲ್ಲಿ ಅಂದಿನ 'ಪ್ರಜಾಮತ' ಪತ್ರಿಕೆಯ ಸಂಪಾದಕ ಹಾಗೂ ಹಿರಿಯ ನೇತಾರ ಬಿ.ಎನ್. ಗುಪ್ತ ಮತ್ತು 'ವಿಶ್ವ ಕರ್ನಾಟಕ' ದಿನಪತ್ರಿಕೆಯ ಸಂಪಾದಕರಾದ ತಿ.ತಾ. ಶರ್ಮ ಇವರುಗಳ ಸೇವೆಯನ್ನು ಸಿದ್ದಲಿಂಗಯ್ಯನವರು ಅತ್ಯಂತ ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

### ಶಿವಪುರದ ಸತ್ಯಾಗ್ರಹ

ಕಾಂಗ್ರೆಸ್ ಚಳುವಳಿಯ ಸಂಘಟನೆಗೆ ಜನರಿಂದ ಅಪಾರ ಬೆಂಬಲ ದೊರೆಯುತ್ತಿದ್ದುದನ್ನು ಸರ್ಕಾರ ತೀವ್ರವಾಗಿ ಪರಿಗಣಿಸಿತು. ಈ ಆಂದೋಲನವನ್ನು ಹತ್ತಿಕ್ಕುವ ಪ್ರಯತ್ನವಾಗಿ ಸರ್ಕಾರ ಕಾಂಗ್ರೆಸ್ ಸಭೆಗಳು ನಡೆಯುವುದನ್ನು ನಿಷೇಧಿಸಿ ಪ್ರತಿಬಂಧಕಾಜ್ಞೆಗಳನ್ನು ಹೊರಡಿಸಿತಲ್ಲದೆ ಈ ಆಜ್ಞೆಗಳನ್ನು ಉಲ್ಲಂಘಿಸಿದ ನಾಯಕರನ್ನು ಬಂಧಿಸಿ ಸೆರೆಮನೆಗೆ ದೂಡುವ ಕ್ರಮಗಳು ಹೆಚ್ಚಾಯಿತು. ಸಿದ್ದಲಿಂಗಯ್ಯನವರು ತಮ್ಮ ರಾಜಕೀಯ ಪ್ರವೇಶವನ್ನು ಮುಗಿಸಿ ಅಕ್ಟೋಬರ್ ಆರಂಭದಲ್ಲಿ ದೊಡ್ಡಬಳ್ಳಾಪುರ ಕೇಂದ್ರಕ್ಕೆ ಹಿಂದಿರುಗುತ್ತಿದ್ದಂತೆ 6.10.37ರಂದು ಕ್ರಿಯಾ ಸಮಿತಿಯ ಮೂವರೂ ಸದಸ್ಯರ ವಿರುದ್ಧ ಭದ್ರತಾ ಕ್ರಮ ಜರುಗಿಸುವ ಪರ ಸರ್ಕಾರ ನೋಟೀಸು ಜಾರಿ ಮಾಡಲಾಯಿತು. ಸಿಟಿ ಮ್ಯಾಜಿಸ್ಟ್ರೇಟರ ಮುಂದೆ ಜಾಮೀನು ಕೊಡಲು ನಿರಾಕರಿಸಿದ ಈ ಮೂವರನ್ನೂ ತಲಾ ಒಂದು ವರ್ಷ ಕಾಲ ಸೆರೆಮನೆ ವಾಸಕ್ಕೆ ಗುರಿ ಮಾಡಲಾಯಿತು. ಇದರಿಂದ ಜನರ ಭಾವನೆಗಳನ್ನು ಮತ್ತಷ್ಟು ಕೆಣಕಿದಂತಾಯಿತು. ರಾಜ್ಯದ ಎಲ್ಲೆಡೆ ಪ್ರತಿಭಟನೆಗಳು ಹೆಚ್ಚಾದವು. ಜನರು ಸಭೆ ಸೇರಿ ಪ್ರತಿಭಟನೆ ಮಾಡುವುದರ ವಿರುದ್ಧ ಹೊರಡಿಸಿದ ಆಜ್ಞೆಗಳನ್ನು ಉಲ್ಲಂಘಿಸಲಾಗುತ್ತಿತ್ತು.

ಈ ಮಧ್ಯೆ ಕಲ್ಕತ್ತದಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಕ್ರಿಯಾ ಸಮಿತಿ ಸಭೆಯಲ್ಲಿ ಮೈಸೂರು ಸಂಸ್ಥೆಯಲ್ಲಿ ಜರುಗಿದ ಘಟನೆಗಳನ್ನು ಚರ್ಚಿಸಿ ಇಲ್ಲಿಯ ಹೋರಾಟಗಾರರಿಗೆ

ಸಹಾನುಭೂತಿ ಸೂಚಿಸುವ ಮತ್ತು ಸರ್ಕಾರದ ಕ್ರಮಗಳನ್ನು ಖಂಡಿಸುವ ನಿರ್ಣಯವನ್ನು ಕೈಗೊಳ್ಳಲಾಯಿತು. ಈ ನಿರ್ಣಯವನ್ನು ಮಹಾತ್ಮಾಗಾಂಧಿಯವರು ಒಪ್ಪಲಿಲ್ಲ. ಮುಂದೆ ವಾರ್ಧಾದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಸಂಸ್ಥಾನಗಳಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಶಾಖೆಗಳು ಇರತಕ್ಕದ್ದಲ್ಲವೆಂದು, ಈ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರ್ಕಾರಕ್ಕೆ ನಡೆಸುವ ಹೋರಾಟ ಸ್ವತಂತ್ರ ಸಂಸ್ಥೆಗಳ ಮೂಲಕವಲ್ಲದೆ ರಾಷ್ಟ್ರೀಯ ಕಾಂಗ್ರೆಸ್‌ನ ಹೆಸರಿನಲ್ಲಿ ನಡೆಯತಕ್ಕದ್ದಲ್ಲವೆಂದು ನಿರ್ಣಯಿಸಲಾಯಿತು. ಇದರಿಂದ ಮೈಸೂರು ಸಂಸ್ಥಾನದಲ್ಲಿ ಚಳುವಳಿಗಾರರ ವಿರುದ್ಧ ಸರ್ಕಾರದ ದಬ್ಬಾಳಿಕೆ ಮಿತಿಮೀರಿತು.

ಪ್ರತಿಬಂಧಕಾಜ್ಞೆಗಳನ್ನು ಉಲ್ಲಂಘಿಸಿ ಅವರನ್ನು ದಸ್ತಗಿರಿಮಾಡಿ ಸೆರೆಮನೆಗೆ ತುಂಬುವ ಸರ್ಕಾರದ ಪ್ರತಿಕ್ರಿಯೆಯಿಂದ ಅದು ಹೆಚ್ಚಿನ ಪೇಚಿಗೆ ಸಿಲುಕುವಂತಾಯಿತು. ಕಾರಣ, ಜೈಲುಗಳೆಲ್ಲವೂ ಕಾಂಗ್ರೆಸಿಗರಿಂದ ತುಂಬಿಹೋಗಿದ್ದವು. ಈ ಪರಿಸ್ಥಿತಿಯನ್ನು ನಿಭಾಯಿಸುವುದು ಸರ್ಕಾರಕ್ಕೆ ಕಷ್ಟವಾಗಿತ್ತು. ಮಹಾತ್ಮಾಗಾಂಧಿಯವರು ರಾಜಾಜಿಯವರ ಮುಖೇನ ಮೈಸೂರಿಗೆ ರಾಯಭಾರ ಕಳುಹಿಸಿದ್ದೇ ತಡ ದಿವಾನರು ಎಲ್ಲ ಬಂಧಿತರನ್ನು ಫೆಬ್ರವರಿ 1938ರಲ್ಲಿ ಬೇಷರತ್ತಾಗಿ ಬಿಡುಗಡೆ ಮಾಡುವ ಮೂಲಕ ಸದ್ಯಕ್ಕೆ ಸರ್ಕಾರ ಮರ್ಯಾದೆ ಉಳಿಸಿಕೊಳ್ಳುವಂತಾಯಿತು. ಆದರೆ ಪ್ರಜೆಗಳು ತಮ್ಮ ಅಭಿಪ್ರಾಯಗಳನ್ನು ಸ್ವತಂತ್ರವಾಗಿ ವ್ಯಕ್ತಪಡಿಸುವ ಮತ್ತು ನ್ಯಾಯಯುತವಾಗಿ ಪ್ರತಿಭಟಿಸುವ ಕಾರ್ಯಾಚರಣೆಯ ವಿರುದ್ಧ ಮಾಡಲಾದ ಪ್ರತಿಂಬಧಕಾಜ್ಞೆಗಳನ್ನು ಮಾತ್ರ ಸರ್ಕಾರ ತೆರವು ಮಾಡಲಿಲ್ಲ. ಇದರಿಂದಾಗಿ ಜನರ ನಾಗರೀಕ ಹಕ್ಕುಗಳಿಗೆ ಧಕ್ಕೆ ಉಂಟಾಯಿತು.

ಮುಂದೆ ಹರಿಪುರದಲ್ಲಿ ನಡೆದ ರಾಷ್ಟ್ರೀಯ ಸಮಾವೇಶದಲ್ಲಿ ದೇಶೀಯ ಸಂಸ್ಥಾನಗಳಲ್ಲಿ ರಾಷ್ಟ್ರೀಯ ಕಾಂಗ್ರೆಸಿನ ಶಾಖೆಗಳು ತೆರೆಯುವುದಕ್ಕೆ ಅವಕಾಶ ಕಲ್ಪಿಸಲಾಯಿತಾದರೂ ಚಳುವಳಿ ಸತ್ಯಾಗ್ರಹಗಳು ಸಂಸ್ಥಾನಗಳ ಜನರೇ ಸ್ಥಾಪಿಸಿಕೊಂಡ ಸ್ವತಂತ್ರ ರಾಜಕೀಯ ಸಂಸ್ಥೆಗಳಿಂದ ನಡೆಯಬೇಕೆಂದು ನಿರ್ಣಯಿಸಲಾಯಿತು. ಈ ನಿರ್ಣಯದಿಂದಾಗಿ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿಯುತ ಸರ್ಕಾರ ಸ್ಥಾಪನೆಗಾಗಿ ಹೋರಾಡಲು ಒಂದು ಸ್ವತಂತ್ರ ರಾಜಕೀಯ ಸಂಸ್ಥೆಯನ್ನು ರಚಿಸಿಕೊಳ್ಳುವ ಅನಿವಾರ್ಯ ಒದಗಿಬಂತು.

ಚಳುವಳಿಗಾರರ ಬಂಧನಗಳು ಹೆಚ್ಚಿದಂತೆ ಸಂಘಟನೆ ಮತ್ತೂ ಬಲವಾಯಿತು. ರಾಷ್ಟ್ರೀಯ ಕಾಂಗ್ರೆಸಿನ ಮೈಸೂರು ಮಂಡಲಿ ವರ್ಷಕ್ಕೊಮ್ಮೆ ರಾಜ್ಯ ಮಟ್ಟದ ಸಮಾವೇಶವನ್ನು ಸಂಘಟಿಸುವ ಮೂಲಕ ಕಾರ್ಯಕ್ರಮದ ರೂಪುರೇಷೆಗಳನ್ನು ತೀರ್ಮಾನಿಸಲು ಪ್ರಾರಂಭಿಸಿತು. ಇಂತಹ ಎರಡನೇ ಸಮಾವೇಶ 1938ರಲ್ಲಿ ಚಿತ್ರದುರ್ಗದಲ್ಲಿ ನಡೆದಿತ್ತು. ಮುಂದಿನ ಸಮಾವೇಶವನ್ನು ಜನವರಿ 1939ರಲ್ಲಿ ಮೈಸೂರು ಜಿಲ್ಲೆಯಲ್ಲಿ ನಡೆಸುವುದೆಂದು ಯೋಜನೆಯಾಗಿತ್ತು. ಆದರೆ ಅದೇ ವರ್ಷ ಫೆಬ್ರವರಿ ತಿಂಗಳಲ್ಲಿ ಮೈಸೂರು ಕಾಂಗ್ರೆಸ್ ಮಂಡಲಿ ಸಭೆಯನ್ನು ನಡೆಸಿ ಸ್ಥಳೀಯ ಪರಿಸ್ಥಿತಿಯನ್ನು ಹರಿಪುರದ ಅಧಿವೇಶನದವರೆಗಿನ ರಾಷ್ಟ್ರೀಯ ವಿದ್ಯಮಾನಗಳನ್ನು ಗಮನದಲ್ಲಿರಿಸಿಕೊಂಡು ಈ ಸಂಸ್ಥಾನದಲ್ಲಿ ಒಂದು ಸ್ವತಂತ್ರ ರಾಜಕೀಯ ಸಂಸ್ಥೆಯನ್ನು ಸ್ಥಾಪಿಸುವ ಮತ್ತು ಸರ್ಕಾರದಿಂದ ಇದಕ್ಕೆ ಅಂಗೀಕಾರ ಪಡೆಯುವ ಬಗ್ಗೆ ತ್ವರಿತ ತೀರ್ಮಾನ

2165-3

ಕೈಗೊಳ್ಳಬೇಕಾಯಿತು. ಆ ಸಲುವಾಗಿ ಮೂರನೇ ಸಮಾವೇಶವನ್ನು ಮುಂದಿನ ಏಪ್ರಿಲ್ ತಿಂಗಳಲ್ಲೇ ನಡೆಸಲು ತೀರ್ಮಾನಿಸಲಾಯಿತು.

ಈ ಸಮಾವೇಶವನ್ನು ಶಿವಪುರದಲ್ಲಿ ಏರ್ಪಡಿಸಲು ಮೈಸೂರು ಜಿಲ್ಲೆಯ ಕಾರ್ಯಕರ್ತರು ಮುಂದಾದ ಮೇರೆಗೆ ಏಪ್ರಿಲ್ 10, 11 ಮತ್ತು 12ರಂದು ಶ್ರೀ ಹೆಚ್.ಕೆ. ವೀರಣ್ಣ ಗೌಡರ ನೇತೃತ್ವದಲ್ಲಿ ನಡೆಸಲು ತೀರ್ಮಾನಿಸಲಾಯಿತು. ಸಂಸ್ಥೆಯಲ್ಲಿ ಜವಾಬ್ದಾರಿಯುತ ಸರ್ಕಾರ ಸ್ಥಾಪನೆಗಾಗಿ ನಡೆಯುವ ಚಳುವಳಿ ಧ್ವಜ ಸತ್ಯಾಗ್ರಹದ ರೂಪದಲ್ಲಿ ಈ ಸಮಾವೇಶದ ಜೊತೆಜೊತೆಗೆ ನಡೆಯತಕ್ಕದ್ದೆಂದು ಹಮ್ಮಿಕೊಂಡು ಆಯೋಜಿಸಲಾಯಿತು. ಇದನ್ನು ಕಾರ್ಯಗತಗೊಳಿಸಲು ನಿರ್ಧಾರವಾದಂದಿನಿಂದ ಕೇವಲ 5-6 ವಾರಗಳಷ್ಟೇ ಅವಧಿ ಉಳಿಯಿತು. ಅಧಿವೇಶನ ನಡೆಸುವ ಸಂಪೂರ್ಣ ಜವಾಬ್ದಾರಿಯನ್ನು ಸಾಹುಕಾರ್ ಚನ್ನಯ್ಯನವರು ಹೊತ್ತಿದ್ದರು. ಮಾರ್ಚ್ 14ನೇ ತಾರೀಖು ಶಿವಪುರದ ಪಿ. ತಿರುಮಲೇಗೌಡರ ಮುಂದಾಳತ್ವದಲ್ಲಿ ಸ್ವಾಗತ ಸಮಿತಿ ಸಭೆ ಸೇರಿ ಕಾರ್ಯಕಾರಿ ಸಮಿತಿ ಹಾಗೂ ಅನೇಕ ಉಪಸಮಿತಿಗಳನ್ನು ನೇಮಿಸಿತು. ಅಧಿವೇಶನ ನಡೆಸಲು ತಿರುಮಲೇಗೌಡರು ಬೆಂಗಳೂರು - ಮೈಸೂರು ಹೆದ್ದಾರಿಗೆ ಹೊಂದಿಕೊಂಡಿದ್ದ ತಮ್ಮ ಎಂಟು ಎಕರೆ ಜಮೀನನ್ನು ತೆರವು ಮಾಡಿ ಕೊಟ್ಟರು.

ರಾಷ್ಟ್ರೀಯ ಕಾಂಗ್ರೆಸ್ ಹರಿಪುರದಲ್ಲಿ ನಡೆಸಿದ ಸಮಾವೇಶದ ಮಾದರಿಯಲ್ಲೇ ಶಿವಪುರ ಸಮಾವೇಶ ಜರುಗುವಂತೆ ಉದ್ದೇಶಿಸಲಾಯಿತು. ಇದು ಯಶಸ್ವಿಯಾಗದಂತೆ ತಡೆಯುವುದು ಸಂಸ್ಥಾನದ ದಿವಾನರಿಗೆ ಪ್ರತಿಷ್ಠೆಯ ವಿಷಯವಾಗಿ ಪರಿಣಮಿಸಿತು. ಇದಕ್ಕಾಗಿ ಈ ಯೋಜನೆಯನ್ನು ಶಿಥಿಲಗೊಳಿಸಲು ಎಲ್ಲ ಮಾರ್ಗಗಳನ್ನೂ ಸರ್ಕಾರ ಆಲೋಚಿಸಿತು. ಮದ್ರಾಸ್ ರಾಜ್ಯದಲ್ಲಿ ಅವಹೇಳನಕ್ಕೆ ಗುರಿಯಾಗಿದ್ದ ಪೋಲೀಸ್ ಅಧಿಕಾರಿ ಹೆಮಿಲ್ಟನ್ ಅವರನ್ನು ಮೈಸೂರಿಗೆ ಕರೆಸಿಕೊಂಡು ಇಲ್ಲಿನ ಪೋಲೀಸ್ ಮಹಾ ನಿರ್ದೇಶಕರನ್ನಾಗಿ ನೇಮಿಸಲಾಯಿತು. ಪೊಲೀಸ್ ಬಲವನ್ನು ಸಹ ಹೆಚ್ಚಿಸಲಾಯಿತು. ಶಿವಪುರದ ಇಡೀ ಪ್ರದೇಶದಲ್ಲಿ ಸೆಕ್ಷನ್ 144ರ ನಿಷೇಧಾಜ್ಞೆಯನ್ನು ಜಾರಿಗೊಳಿಸಲಾಯಿತು.

ಧ್ವಜ ಸತ್ಯಾಗ್ರಹ ಏರ್ಪಡುವ ಮೊದಲೇ ಸರ್ಕಾರ ವಿಶಾಲ ಮನೋಭಾವ ತಾಳಿ ಕಾಂಗ್ರೆಸ್ ಕಾರ್ಯಕರ್ತರನ್ನು ಮಾತುಕತೆಗೆ ಆಹ್ವಾನಿಸುವರೆಂಬ ಊಹೆ ಹುಸಿಯಾಯಿತು. ದಿವಾನ್ ಮಿರ್ಜಾ ಅವರ ಉದ್ಧಟತನವನ್ನು ಸವಾಲಾಗಿ ತೆಗೆದುಕೊಂಡ ಸತ್ಯಾಗ್ರಹಿಗಳು ಚಳುವಳಿಯನ್ನು ಕಾರ್ಯಗತಗೊಳಿಸುವುದರಿಂದ ಉಂಟಾಗುವ ಯಾವುದೇ ಪರಿಣಾಮವನ್ನು ಎದುರಿಸಲು ನಿಶ್ಚಯಿಸಿದರು. ಆದರೆ ಅಮಾಯಕ ಪ್ರಜೆಗಳನ್ನು ಸರ್ಕಾರದ ದಯಾಹೀನ ದುಂಡಾವರ್ತಿಗೆ ಒಡ್ಡುವುದರ ಘೋರ ಪರಿಣಾಮಗಳನ್ನು ಮನಗಂಡ ಕಾಂಗ್ರೆಸ್ ನಾಯಕರಲ್ಲಿ ಕಳವಳ ಹೆಚ್ಚಾಗತೊಡಗಿತು. ಸಮಾವೇಶದ ಅಧ್ಯಕ್ಷರಾಗಲಿದ್ದ ಸಿದ್ದಲಿಂಗಯ್ಯನವರು ಹಿಂದಿನ ದಿನವೇ ಅಂದರೆ ದಿನಾಂಕ 9.4.38ರಂದು ಶಿವಪುರ ತಲುಪುವುದಿತ್ತು. ಆ ದಿನ ಸಂಜೆ ನಾಲ್ಕು ಘಂಟೆಗೆ ಅವರು ಕಾರಿನಲ್ಲಿ ಶಿವಪುರಕ್ಕೆ ಬಂದಿಳಿದರು. ಬೆಂಗಳೂರಿನಿಂದ ಶಿವಪುರದವರೆಗೆ ಹಳ್ಳಿಗಳಲ್ಲಿ ಜನ ರಸ್ತೆಯ ಇಕ್ಕೆಲಗಳಲ್ಲಿ ಸಾಲು ನಿಂತು ಅಧ್ಯಕ್ಷರಿಗೆ ಶುಭ ಕೋರಿದರು. ಅಧಿವೇಶನದ ಸ್ವಾಗತ ಸಮಿತಿಯ ಮಹತ್ವದ ಸಭೆ ಅಂದು ಬೆಳಗಿನಿಂದ ಸಂಜೆಯವರೆಗೂ ನಡೆಯಿತು.

ಸಭೆಯಲ್ಲಿ ನಾಳಿನ ಅಧಿವೇಶನವನ್ನು ರದ್ದುಗೊಳಿಸಬೇಕೇ, ಸತ್ಯಾಗ್ರಹವನ್ನು ಕೈ ಬಿಡಬೇಕೇ, ಅಧಿವೇಶನದ ಮುನ್ನಾ ದಿನದ ಮೆರವಣಿಗೆಯನ್ನು ಕೈ ಬಿಡುವುದೇ ಇತ್ಯಾದಿ ವಿಚಾರಗಳನ್ನು ಕುರಿತು ಆತಂಕಕಾರಿ ವಾತಾವರಣದಲ್ಲಿ ಗಂಟೆಗಟ್ಟಲೇ ಆವೇಶಪೂರ್ಣ ಚರ್ಚೆ ನಡೆದಿತ್ತು. ನೇತಾರರಲ್ಲಿ ಭಾವೋದ್ವೇಗಕ್ಕೆ ಬೀಳದೆ ಎಚ್ಚರಿಕೆಯಿಂದ ಹೆಜ್ಜೆ ಇಡಬೇಕೆಂಬ ಅಭಿಪ್ರಾಯವಿತ್ತು. ಸಭಿಕರಲ್ಲಿ ಅತಿವಾದಿಗಳೂ ಮಿತವಾದಿಗಳೂ ಇದ್ದರು. ಪರಿಣಾಮ ಪ್ರಜ್ಞೆಯುಳ್ಳ ಸಮವರ್ತಿಗಳೂ ಇದ್ದರು. ಆದರೆ ಕೊನೆಯ ಘಟ್ಟದಲ್ಲಿ ಪರಿಣಾಮ ಏನೇ ಆಗಲಿ ಅಧಿವೇಶನವನ್ನು ನಡೆಸಿಯೇ ತೀರಬೇಕೆಂದು ಮಹಿಳಾ ಕಾರ್ಯಕರ್ತರು ಪಟ್ಟು ಹಿಡಿದ ಕಾರಣ ಯೋಜನೆಯನ್ನು ಕಾರ್ಯಗತಗೊಳಿಸಲು ಸಭೆ ತೀರ್ಮಾನಿಸಿತು. ಈ ನಿರ್ಣಯವನ್ನು ಜನತೆ ಒಕ್ಕೊರಲಿನಿಂದ ಸ್ವಾಗತಿಸಿ ಉತ್ಸಾಹದಿಂದ ಕುಣಿದಾಡಿತು.

ಅಧಿವೇಶನದ ಹಿಂದಿನ ದಿನ ಸಂಜೆ ಆರು ಗಂಟೆಗೆ ಶಿವಪುರ ಮತ್ತು ಮದ್ದೂರಿನ ಬೀದಿಗಳಲ್ಲಿ ಅಧ್ಯಕ್ಷರ ಮೆರವಣಿಗೆ ಏರ್ಪಾಡಾಗಿತ್ತು. ಎಲ್ಲ ಬೀದಿಗಳ ಇಕ್ಕೆಲಗಳಲ್ಲಿ ಜನ ಮೆರವಣಿಗೆ ವೀಕ್ಷಿಸಲು ಸಾಲು ಸಾಲಾಗಿ ನಿಂತಿದ್ದರು. ರಾಜ್ಯದ ಎಲ್ಲ ಮೂಲೆಗಳಿಂದ ಮುಖಂಡರು, ಕಾರ್ಯಕರ್ತರು ಮತ್ತು ಸ್ವಯಂ ಸೇವಕರ ತಂಡಗಳೇ ಅಲ್ಲದೆ ಮೈಸೂರು ಜಿಲ್ಲೆಯ ಹಾಗೂ ಮದ್ದೂರಿನ ಸುತ್ತಮುತ್ತಲ ಪಟ್ಟಣಗಳ ಮತ್ತು ಹಳ್ಳಿಗಳಿಂದ ಸಾವಿರಾರು ಜನ ರೈಲುಗಳಲ್ಲಿ, ಬಸ್ಸುಗಳಲ್ಲಿ, ಕಾರುಗಳಲ್ಲಿ, ಎತ್ತಿನಗಾಡಿಗಳಲ್ಲಿ ಮತ್ತು ಕಾಲ್ನಡಿಗೆಯಲ್ಲಿ ಬಂದು ಸೇರಿದ್ದರು. ಸುಮಾರು 200 ಬಸ್ಸುಗಳು ಮತ್ತು ಕಾರುಗಳು ಬೇರೆಬೇರೆ ಸ್ಥಳಗಳಿಂದ ಸಭಿಕರನ್ನು ಹೊತ್ತು ತಂದಿದ್ದುವು. ಎಲ್ಲೆಡೆ ಕಾಂಗ್ರೆಸ್ ಟೋಪಿಗಳ ಸಮುದ್ರವೇ ಕಾಣುತ್ತಿತ್ತು. ಅಧ್ಯಕ್ಷರ ಮೆರವಣಿಗೆಗೆ ವಿಶೇಷ ರಥವನ್ನು ಸಜ್ಜುಮಾಡಲಾಗಿತ್ತು. ಸಾಲಂಕೃತ ಎತ್ತಿನ ಬಂಡಿಯ ಮೇಲೆ ಮಂಟಪವನ್ನು ಮತ್ತು ಮೆಟ್ಟಿಲುಗಳುಳ್ಳ ವೇದಿಕೆಯನ್ನು ನಿರ್ಮಿಸಿ ವಿಶೇಷವಾಗಿ ಅಲಂಕರಿಸಲಾಗಿತ್ತು. ರಥಕ್ಕೆ ಎಂಟು ಜತೆ ಎತ್ತುಗಳನ್ನು ಶೃಂಗರಿಸಿ ಕಟ್ಟಲಾಗಿತ್ತು. ಒಂದೊಂದು ಜತೆ ಎತ್ತುಗಳು ಮೈಸೂರು ಸಂಸ್ಥಾನದ ಎಂಟು ಜಿಲ್ಲೆಗಳನ್ನು ಪ್ರತಿನಿಧಿಸಿದ್ದವು.

ಅಧ್ಯಕ್ಷರು ಮಹಾತ್ಮಾ ಗಾಂಧಿಯವರ ಫೋಟೋ ಹಿಡಿದು ರಥವನ್ನೇರಿ ಶ್ರೀಮದ್ಗಾಂಭೀರ್ಯದಿಂದ ಜನರ ಅಭಿಮಾನಪೂರ್ವಕ ಶುಭಾಶಯಗಳನ್ನು ಸ್ವೀಕರಿಸಿದರು. ಮೆರವಣಿಗೆ ಹೊರಟಿತು. ಜಿಲ್ಲಾ ಪ್ರತಿನಿಧಿಗಳು ಮೆರವಣಿಗೆಯುದ್ದಕ್ಕೂ ಅಲ್ಲಲ್ಲಿ ನಿಂತು ತಮ್ಮ ಜಿಲ್ಲೆಯ ಪರವಾಗಿ ಅಧ್ಯಕ್ಷರಿಗೆ ಹಾರ ತುರಾಯಿಗಳನ್ನು ಅರ್ಪಿಸುತ್ತಿದ್ದರು. ಅದರ ಹಿಂದೆ 64 ಅಲಂಕೃತ ಎತ್ತಿನ ಬಂಡಿಗಳು ಮೆರವಣಿಗೆಯಲ್ಲಿದ್ದವು. ಮೆರವಣಿಗೆ ಸುಮಾರು ಅರ್ಧ ಮೈಲು ಉದ್ದವಿತ್ತು. ನಾನಾ ವಿಧದ ವಾದ್ಯಗಾರರು ತಮ್ಮ ಬ್ಯಾಂಡ್‌ಗಳೊಂದಿಗೆ ಸ್ವಯಂ ಪ್ರೇರಿತವಾಗಿ ಬಂದು ಮೆರವಣಿಗೆಯಲ್ಲಿ ವಾದ್ಯಗಳನ್ನು ನುಡಿಸಿ ರಂಗೇರಿಸಿದ್ದರು. ಶಿವಪುರಕ್ಕೆ ಸುಮಾರು ಮೂರುವರೆ ಕಿಲೋಮೀಟರು ದೂರದ ಒಂದು ಸ್ಥಳದಿಂದ ಹೊರಟ ಮೆರವಣಿಗೆ ಅತ್ಯಂತ ವೈಭವ ಮತ್ತು ಸಂಭ್ರಮಗಳಿಂದ ಜರುಗಿ ರಾತ್ರಿ 8.30ರ ವೇಳೆಗೆ ಪ್ರವಾಸಿ ಮಂದಿರದಲ್ಲಿ ಏರ್ಪಡಿಸಲಾಗಿದ್ದ ಅಧ್ಯಕ್ಷರ ಬಿಡಾರದ ಬಳಿ ಸೇರಿತು. ಅಲ್ಲಿ ಅಧ್ಯಕ್ಷರು ಲಘು ಭಾಷಣ ಮಾಡಿ ಎಲ್ಲರಿಗೂ ವಂದನೆಗಳನ್ನು ಅರ್ಪಿಸಿದರು. ಅಲ್ಲಿಗೆ ಅಧಿವೇಶನದ ಅಂದಿನ ಕಾರ್ಯಕ್ರಮಗಳು ಮುಗಿದವು.

ಅಧ್ಯಕ್ಷರ ಮೆರವಣಿಗೆಯು ಪ್ರಾರಂಭವಾದ ವೇಳೆಗಾಗಲೇ ಅಖಂಡ ಸಂಖ್ಯೆಯ ಪೊಲೀಸ್ ಸಿಬ್ಬಂದಿ ವ್ಯಾನುಗಳಲ್ಲಿ ಅಧಿವೇಶನದ ಸ್ಥಳಕ್ಕೆ ಬಂದಿಳಿದಿತ್ತು. ರಿಸರ್ವ್ ಪೊಲೀಸರ ಓಡಾಟ ಹೆಚ್ಚಾಗುತ್ತಿದ್ದಂತೆ ಜನರಲ್ಲಿ ನಾನಾ ರೀತಿಯ ಉಹಾಪೋಹಗಳೇಳುತ್ತಿದ್ದವು. ಅಧಿವೇಶನದ ಸ್ಥಳವೂ ಒಳಗೊಂಡಂತೆ ಸುತ್ತ ಎರಡು ಮೈಲಿ ಪ್ರದೇಶದಲ್ಲಿ ಒಂದು ತಿಂಗಳ ಪರ್ಯಂತರ ಧ್ವಜಾರೋಹಣ ಮಾಡಕೂಡದೆಂಬ ಪ್ರತಿಬಂಧಕಾಜ್ಞೆಯನ್ನು ಪೋಲೀಸರು ಪ್ರಚುರಪಡಿಸಿ ಸುಮಾರು 26 ಮಂದಿ ಕಾರ್ಯಕರ್ತರಿಗೆ ಆಗಲೇ ನೋಟೀಸು ಜಾರಿ ಮಾಡಿದ್ದರು. ಉತ್ಸಾಹೀ ಜನರ ಸ್ಥೈರ್ಯವನ್ನು ಕುಂದಿಸುವಂಥ ಹಲವು ಬಗೆಯ ವದಂತಿಗಳನ್ನು ಸರ್ಕಾರ ಉದ್ದೇಶಪೂರ್ವಕವಾಗಿ ಹಬ್ಬಿಸುತ್ತಿತ್ತು. ಈ ಬೆಳವಣಿಗೆಗಳು ಅಧಿವೇಶನದ ಕ್ರಿಯಾ ಸಮಿತಿಯನ್ನು ತಲ್ಲಣಗೊಳಿಸಿದ್ದವು. ಆದರೆ ಕ್ರಿಯಾ ಸಮಿತಿ ಮೆರವಣಿಗೆ ಮತ್ತು ಧ್ವಜ ಸತ್ಯಾಗ್ರಹವನ್ನು ನಡೆಸಿಯೇ ತೀರಬೇಕೆಂದು ನಿರ್ಧಾರ ಕೈಗೊಂಡ ಮೇಲೆ ಚಳುವಳಿಗಾರರು ಎಲ್ಲಾ ಪರಿಣಾಮಗಳನ್ನು ಎದುರಿಸುವ ದೃಢ ನಿಶ್ಚಯ ಮಾಡಿಕೊಂಡರು. ಕಾಂಗ್ರೆಸ್‌ನ ಸ್ಥೈರ್ಯ ದ್ವಿಗುಣಗೊಂಡಿತ್ತು.

ಮಾರನೇ ದಿನದ ಧ್ವಜಾರೋಹಣ ಕಾರ್ಯಕ್ರಮ ಪೀಠಿಕಾ ಪುಟಗಳಲ್ಲಿ ಈಗಾಗಲೇ ಹೇಳಿರುವಂತೆ ಯಶಸ್ವಿಯಾಗಿ ನಡೆದು ಅಂದು ಸಿದ್ದಲಿಂಗಯ್ಯನವರ ಮತ್ತು ಎಂ.ಎನ್. ಜೋಯಿಸರ ದಸ್ತಗಿರಿಯಲ್ಲಿ ಪರ್ಯವಸಾನಗೊಂಡಿತು. ಸಿದ್ದಲಿಂಗಯ್ಯ ಅಧ್ಯಕ್ಷ ಸ್ಥಾನಕ್ಕೆ ಹೆಚ್.ಸಿ. ದಾಸಪ್ಪನವರನ್ನು ನೇಮಿಸಿ ಸೆರೆಮನೆ ಸೇರಿದ್ದರು. ಆ ದಿನ ಪರ್ಯಂತ ಮುಖಂಡರ ಭಾಷಣಗಳು, ಲಾವಣಿ ಹಾಡುಗಳು, ರಾಷ್ಟ್ರಗೀತೆಗಳನ್ನು ಹಾಡುವುದರಲ್ಲಿ ಕಳೆದು ಸಂಜೆಗೆ ಬಹಿರಂಗ ಅಧಿವೇಶನ ನಡೆಯಿತು. ಇಡೀ ಮೈದಾನ ತುಂಬಿ ಕಿಕ್ಕಿರಿಯುವಷ್ಟು ಜನಸ್ತೋಮ ಸೇರಿತ್ತು. ಗೌರವಯುಕ್ತವಾಗಿ ಧ್ವಜಾರೋಹಣ ಜರುಗಿದ ನಂತರ ಅಂದಿನ ಕಲಾಪಗಳು ಯಶಸ್ವಿಯಾಗಿ ಮುಗಿದವು. ಈ ಅಧಿವೇಶನದಲ್ಲಿ ಅಂದಿನ ವಿದ್ಯಮಾನಗಳ ವರದಿಯನ್ನು ಸಭೆಗೆ ನೀಡಿ ಸಿದ್ದಲಿಂಗಯ್ಯನವರು ಮತ್ತು ಎಂ.ಎನ್. ಜೋಯಿಸರಿಗೆ ಪ್ರತಿಬಂಧಕಾಜ್ಞೆ ಉಲ್ಲಂಘನೆ ಆರೋಪ ಸ್ಥಿರಪಟ್ಟ ಕಾರಣ ತಲಾ ಆರು ತಿಂಗಳ ಕಠಿಣ ಸಜೆ ವಿಧಿಸಲ್ಪಟ್ಟ ವಿವರಗಳನ್ನು ನೀಡಲಾಯಿತು. ಮಾರನೇ ದಿನದ ಅಧಿವೇಶನದಲ್ಲಿ ಅಧ್ಯಕ್ಷರ ದಸ್ತಗಿರಿಯಿಂದಾಗಿ ಓದಲಾಗದ ಅಧ್ಯಕ್ಷ ಭಾಷಣವನ್ನು ಹೆಚ್.ಸಿ. ದಾಸಪ್ಪನವರು, ಓದಿ ಪೂರ್ಣಗೊಳಿಸಿದರು. ಆ ದಿನ ಹೆಚ್.ಸಿ. ದಾಸಪ್ಪನವರು, ವಿ. ವೆಂಕಟಪ್ಪನವರು, ಚಂಗಲರಾಯ ರೆಡ್ಡಿಯವರು ಧ್ವಜ ಸತ್ಯಾಗ್ರಹದಲ್ಲಿ ಪಾಲ್ಗೊಂಡು ದಸ್ತಗಿರಿಯಾದರು. ಆ ದಿನದ ಮುಂದಿನ ಕಾರ್ಯಕಲಾಪಗಳು ಕೆ.ಟಿ. ಭಾಷ್ಯಂ ರವರ ಅಧ್ಯಕ್ಷತೆಯಲ್ಲಿ ಜರುಗಿದವು.

ಮಾರನೇ ದಿನದ ಅಧಿವೇಶನದಲ್ಲೂ ಧ್ವಜ ಸತ್ಯಾಗ್ರಹದ ಮುಂದಾಳುಗಳಾಗಿ ಕೆ.ಟಿ. ಭಾಷ್ಯಂ, ಹೆಚ್. ಸಿದ್ದಯ್ಯ ಮತ್ತು ಬಳ್ಳಾರಿ ಸಿದ್ದಮ್ಮ ದಸ್ತಗಿರಿಯಾದರು. ಮುಂದಿನ ಕೂಟಗಳು ಹೆಚ್.ಬಿ. ಗುಂಡಪ್ಪಗೌಡರ ಅಧ್ಯಕ್ಷತೆಯಲ್ಲಿ ಜರುಗಿದವು. ಸಂಜೆ ಧ್ವಜಾರೋಹಣದ ನಂತರ ಧ್ವಜಸ್ತಂಭವನ್ನು ಕದಲಿಸುವ ಮೂಲಕ ಶಿವಪುರದ ಮೂರುದಿನಗಳ ಅಧಿವೇಶನವನ್ನು ಮುಕ್ತಾಯಗೊಳಿಸಲಾಯಿತು. ಆದರೆ ಪ್ರತಿಬಂಧಕಾಜ್ಞೆಯ ಅವಧಿಯು ಕೊನೆಗೊಳ್ಳುವವರೆಗೂ ಧ್ವಜ ಸತ್ಯಾಗ್ರಹವನ್ನು ಮುಂದುವರೆಸಲಾಯಿತು. ಸರ್ಕಾರದ ಆಜ್ಞೆಯನ್ನು ಉಲ್ಲಂಘಿಸಿ ಧ್ವಜರೋಹಣ ಮಾಡುವ ಅವಕಾಶಕ್ಕಾಗಿ ನಾನಾ ಕಡೆಗಳಿಂದ ಸಹಸ್ರಾರು ಸತ್ಯಾಗ್ರಹಿಗಳು

ಮುಂದಾಗಿ ಬರುತ್ತಿದ್ದರು. ಧ್ವಜಾರೋಹಣ ಮಾಡುವ ಪ್ರಯತ್ನದಲ್ಲಿ ನೂರಾರು ಜನ ಸತ್ಯಾಗ್ರಹಿಗಳು ದಸ್ತಗಿರಿಯಾಗಿ ಜೈಲು ಸೇರಿದರು. ಏಪ್ರಿಲ್ 27ರಂದು ಕೆಂಗಲ್ ಹನುಮಂತಯ್ಯನವರು, ಮಳವಳ್ಳಿ ವೀರಪ್ಪನವರು ದಸ್ತಗಿರಿಯಾದರು. ನಂತರ ಹೆಚ್.ಕೆ. ವೀರಣ್ಣನವರು ದಸ್ತಗಿರಿಯಾಗಿ ಸೆರೆಮನೆ ಸೇರಿದರು. ಸಂಸ್ಥಾನದ ಸೆರೆಮನೆಗಳು ಸತ್ಯಾಗ್ರಹಿಗಳಿಂದ ತುಂಬಿಹೋದವು. ಶಿವಮೊಗ್ಗ ಪ್ರಹ್ಲಾದ ಶೆಟ್ಟಿ ಹಾಗೂ ಕಾನಕಾನಹಳ್ಳಿ ಶಂಕರಪ್ಪನವರು ಇದೇ ರೀತಿ ದಸ್ತಗಿರಿಯಾಗಿ ಸೆರೆಮನೆಯಲ್ಲೇ ವೀರ ಮರಣ ಹೊಂದಿದ್ದನ್ನು ಸಿದ್ದಲಿಂಗಯ್ಯ ದುಃಖದಿಂದ ನೆನೆಯುತ್ತಾರೆ.

ಶಿವಪುರದ ಸತ್ಯಾಗ್ರಹ ಸ್ವಾತಂತ್ರ್ಯ ಚಳುವಳಿಯ ಇತಿಹಾಸದಲ್ಲೇ ಒಂದು ಮೈಲುಗಲ್ಲಾಯಿತು. ಇದಾದ ನಂತರ ರಾಜ್ಯದ ಇನ್ನಿತರ ಭಾಗಗಳಲ್ಲೇ ಅಲ್ಲದೆ ದೂರದ ರಾಜ್ಯಗಳಲ್ಲೂ ಇಂತಹ ಸತ್ಯಾಗ್ರಹಗಳು ನಡೆದು ಸಂಸ್ಥಾನಗಳ ರಾಜಾಳ್ವಿಕೆಯ ವರ್ಚಸ್ಸು ಬೀಳತೊಡಗಿತು. ಕಾಂಗ್ರೆಸ್‌ನ ಘನತೆ ಮೇರುವನ್ನೇರಿತು. ಇದು ಗಾಂಧೀಜಿಯವರ ಅಹಿಂಸಾ ಮಾರ್ಗಕ್ಕೆ ದೊರೆತ ದಿಗ್ವಿಜಯವಾಯಿತು. ನಿರಾಯುಧವಾದ ಜನಶಕ್ತಿಯ ವಿರುದ್ಧ ದಬ್ಬಾಳಿಕೆಯ ಸಶಸ್ತ್ರ ಸೈನ್ಯಗಳೂ ಶಕ್ತಿಹೀನವಾಗುವುವೆಂಬುದನ್ನು ಈ ಸತ್ಯಾಗ್ರಹ ದೃಷ್ಟಾಂತವಾಗಿ ತೋರಿಸಿಕೊಟ್ಟಿತು.

ಶಿವಪುರದ ಸತ್ಯಾಗ್ರಹದ ಯಶಸ್ಸಿನಿಂದ ಮುಖಭಂಗಗೊಂಡ ದಿವಾನರ ಸರ್ಕಾರ ಮುಂದಿನ 14 ದಿನಗಳೊಳಗೇ ಪ್ರೇರಣೆ ಇಲ್ಲದಿದ್ದರೂ ಕೋಲಾರ ಜಿಲ್ಲೆಯ ವಿದುರಾಶ್ವತ್ಥದಲ್ಲಿ ಧಾರ್ಮಿಕ ಸಮಾರಂಭಕ್ಕಾಗಿ ಜಿಲ್ಲೆಯ ವಿವಿಧ ಮೂಲೆಗಳಿಂದ ಸೇರಿದ್ದ ಅಮಾಯಕ ಜನರ ಮೇಲೆ ತನ್ನ ಆಕ್ರೋಶವನ್ನು ಹರಿಯಬಿಟ್ಟಿತು. 32 ಜನರು ಅಮಾನುಷವಾಗಿ ಕೊಲ್ಲಲ್ಪಟ್ಟಾ. 400 ಜನ ಗಾಯಗೊಂಡ ಹೀನ ಕೃತ್ಯವನ್ನು ಎಸಗಿದ ಸರ್ಕಾರ ಪ್ರಜೆಗಳ ನಂಬಿಕೆ, ಆದರಗಳಿಗೆ ಮತ್ತಷ್ಟು ದೂರವಾಯಿತು. ಜನರ ಅವಹೇಳನ ಆಕ್ರೋಶಗಳಿಗೆ ಗುರಿಯಾಯಿತು. ಮೈಸೂರು ಕಾಂಗ್ರೆಸಿಗೆ ರಾಜ್ಯದೆಲ್ಲೆಡೆಯಿಂದ ಮತ್ತು ಹೊರ ರಾಜ್ಯಗಳಿಂದಲೂ ಅಗಣಿತವಾದ ಅಭಿನಂದನೆಗಳು ಸಂದವು. ಜುಲೈ 1937 ರಿಂದ ಏಪ್ರಿಲ್ 1938ರ ಎಂಟು-ಹತ್ತು ತಿಂಗಳಲ್ಲೇ ಸಿದ್ದಲಿಂಗಯ್ಯನವರ ಮುಂದಾಳತ್ವ ದೊರೆತ ಕಾಂಗ್ರೆಸ್ ಚಳುವಳಿ ಒಂದು ಘನ ಶಕ್ತಿಯಾಗಿ ಬೆಳೆಯಿತು. ಸಂಸ್ಥಾನದ ರಾಜಾಳ್ವಿಕೆಯನ್ನು ಅಲುಗಾಡಿಸಿ ತನ್ನ ಪ್ರತಿಷ್ಠೆಯನ್ನು ಮೆರೆದಿತ್ತು. ಸಂಸ್ಥಾನದ ಪ್ರಜೆಗಳ ಬಗ್ಗೆ ರಾಷ್ಟ್ರ ನಾಯಕರಲ್ಲಿ ಬೇರೂರಿದ್ದ ಸಂದೇಹಗಳನ್ನು ತೊಡೆದಂತಾಗಿತ್ತು. ದೇಶೀಯ ಸಂಸ್ಥಾನಗಳ ಕಾಂಗ್ರೆಸ್ ಶಾಖೆಗಳ ಬಗ್ಗೆ, ಮೈಸೂರು ಕಾಂಗ್ರೆಸ್ ಬಗ್ಗೆ ಮತ್ತು ಮೈಸೂರು ಸಂಸ್ಥಾನದ ಪ್ರಜಾಶಕ್ತಿಯ ಬಗ್ಗೆ ಬಾಪೂಜಿಯವರಿಗೆ ತಾವು ಕೊಟ್ಟ ಭರವಸೆಯನ್ನು ಸಾದೃಢ ಮಾಡಿಕೊಟ್ಟ ವೀರ ಸೇನಾನಿಯಾಗಿ ಮೆರೆದ ಸಿದ್ದಲಿಂಗಯ್ಯ ಇಡೀ ದೇಶದಲ್ಲಿ ಮೈಸೂರು ಸಂಸ್ಥಾನದ ಪ್ರಜಾಕೋಟಿಗೆ ಅಪಾರ ಘನತೆಯನ್ನು ಸಾಧಿಸಿಕೊಟ್ಟರು.

ಇಲ್ಲಿನವರೆಗಿನ ಬೆಳವಣಿಗೆ ಪರಿಶುದ್ಧ ಭಾವನೆಗಳಿಂದಲೂ, ಪ್ರಾಮಾಣಿಕ ಸಹಕಾರದಿಂದಲೂ ಕೂಡಿದ್ದಾಗಿದ್ದು ಸಂಸ್ಥಾನದ ಜನತೆಗೆ ಇಡೀ ರಾಷ್ಟ್ರದಲ್ಲಿ ಅಪಾರ ಘನತೆ ಗೌರವಗಳನ್ನು ತಂದುಕೊಟ್ಟಿತ್ತು. ಈ ಕಾರಣಕ್ಕಾಗಿ ಶಿವಪುರ ಒಂದು ಪವಿತ್ರ ಕ್ಷೇತ್ರವಾಗಿ

ಜನಮನದಲ್ಲಿ ಚಿರಂತನವಾಗಿ ಉಳಿಯಬೇಕೆಂಬುದು ಸಿದ್ದಲಿಂಗಯ್ಯನವರ ಬಯಕೆಯಾಗಿತ್ತು. ಪ್ರಜಾ ಸ್ವಾತಂತ್ರ್ಯಕ್ಕಾಗಿ ನಡೆದ ಈ ಪವಿತ್ರ ಹೋರಾಟದ ಹಿಂದಿನ ಎಲ್ಲ ನೋವು ನಲಿವುಗಳ ಸಂಕೇತವಾಗಿ ಶಿವಪುರದಲ್ಲಿ ಎದ್ದುನಿಂತಿರುವ ವೀರ ಸೌಧ ಅತಿ ಮಹತ್ವದ ಪುಣ್ಯ ಸ್ಮಾರಕವಾಗಿದೆ.

## ವಿದುರಾಶ್ವತ್ಥದ ದುರಂತ

ಶಿವಪುರದ ಯಶಸ್ವೀ ಸತ್ಯಾಗ್ರಹದ ಸ್ಫೂರ್ತಿಯಲ್ಲಿ ಕಾಂಗ್ರೆಸ್ ಸೇವಾಕರ್ತರು ಏಪ್ರಿಲ್ 25 ರಂದು ಕೋಲಾರ ಜಿಲ್ಲೆಯ ವಿದುರುಶಾಶ್ವತ್ಥದಲ್ಲಿ ಧ್ವಜ ಸತ್ಯಾಗ್ರಹ ನಡೆಸಲು ನಿಶ್ಚಯ ಮಾಡಿದ್ದರು. ಪತ್ರಿಕೆಗಳಲ್ಲಿ ಈ ಕಾರ್ಯಕ್ರಮದ ಬಗ್ಗೆ ಕಾಂಗ್ರೆಸ್ ಸ್ವಯಂಸೇವಕರು ನೀಡಿದ ಜಾಹಿರಾತಿನೊಂದಿಗೆ ಪೋಲೀಸ್ ಕಾರವಾಯಿ ವಿದುರಾಶ್ವತ್ಥದಲ್ಲಿ ಜಮಾವಣೆಗೊಳ್ಳುತ್ತಿರುವ ಬಗೆಗೂ ಸುದ್ದಿ ಪ್ರಕಟವಾಗಿತ್ತು. ಸಿದ್ದಲಿಂಗಯ್ಯನವರಾದಿಯಾಗಿ ನಾಯಕರುಗಳೆಲ್ಲಾ ಶಿವಪುರ ಸತ್ಯಾಗ್ರಹದಲ್ಲಿ ಭಾಗವಹಿಸಿದ ಕಾರಣ ದಸ್ತಗಿರಿಯಾಗಿ ಜೈಲಿನಲ್ಲಿದ್ದರು.

ಶಿವಪುರ ಸತ್ಯಾಗ್ರಹದಿಂದ ಮುಖಭಂಗವಾದದ್ದು ದಿವಾನರ ಆಳ್ವಿಕೆಗಷ್ಟೆ. ಮೈಸೂರಿನ ಶ್ರೀಮನ್ಮಹಾರಾಜರು ಪ್ರಜಾ ಹಿತಚಿಂತಕರೇ ಆಗಿದ್ದರು. ಶಿವಪುರ ಸತ್ಯಾಗ್ರಹಕ್ಕೆ 9.4.38 ರಂದು ಸಿದ್ದಲಿಂಗಯ್ಯನವರ ಜತೆ ಡಾ: ವರದರಾಜ ಅಯ್ಯಂಗಾರ್ ರವರು ತಾವೇ ಅವರೊಂದಿಗಿರಬಯಸಿ ಬಂದಿದ್ದರು. ಅವರು ಮೈಸೂರು ಜಿಲ್ಲಾ ಮ್ಯಾಜಿಸ್ಟ್ರೇಟ್ ಆಗಿದ್ದ ಜಿ.ಎಂ. ಮೇಖ್ರಿಯವರ ಆಪ್ತಮಿತ್ರರು. ಶಿವಪುರ ತಲುಪುತ್ತಿದ್ದಂತೆಯೇ ವರದರಾಜಯ್ಯಂಗಾರ್‌ರವರು ಕಾರಿನಿಂದಿಳಿದು ಹೋದವರು ಎಲ್ಲಿಹೋದರೆಂದು ತಿಳಿದುಬರಲಿಲ್ಲ. ಆದರೆ ಮಾರನೇ ದಿನ ಧ್ವಜ ಸತ್ಯಾಗ್ರಹ ಆರಂಭಗೊಳ್ಳುವುದನ್ನು ತಪ್ಪಿಸಲು ಸಜ್ಜಾಗಿದ್ದ ಪೋಲೀಸ್ ಅಧಿಕಾರಿಗಳು ಹ್ಯಾಮಿಲ್ಟನ್ ರವರೂ ಸೇರಿದಂತೆ, ಗುಂಡು ಹಾರಿಸದೇ ಇದ್ದುದು ಒಂದು ಸಂತೋಷದಾಯಕ ವಿಸ್ಮಯವಾಗಿತ್ತು. ಇದರ ಹಿಂದಿನ ಕಾರಣ ನಂತರದಲ್ಲಿ ತಿಳಿದುಬಂದಿದ್ದು - ಪೋಲೀಸ್ ಅಧಿಕಾರಿಗಳಿಗೆ ಗುಂಡುಹಾರಿಸಲು ದಿವಾನರು ನೀಡಿದ ಗೋಲಿಬಾರ್ ಆದೇಶವನ್ನು ದೂರ ದೃಷ್ಟಿಯುಳ್ಳವರಾದ ಜಿಲ್ಲಾ ಮ್ಯಾಜಿಸ್ಟ್ರೇಟರು ತನ್ನ ಸ್ವಂತ ಜವಾಬ್ದಾರಿಯಲ್ಲಿ ಅಧಿಕಾರ ಸೂಕ್ಷ್ಮವನ್ನರಿತು ಜಾರಿಗೊಳಿಸಲಿಲ್ಲ. ಇದರಿಂದಾಗಿ ಸಂಸ್ಥಾನದಲ್ಲಿ ನಡೆದಿರಬಹುದಾದ ಬಹುಘೋರ ಅನಾಹುತ ತಪ್ಪಿತ್ತು.

ಈ ವಿಷಯ ತಿಳಿದು ಶ್ರೀಮನ್ಮಹಾರಾಜರು ಶ್ರೀ ಮೇಖ್ರಿಯವರ ದೂರದೃಷ್ಟಿಯನ್ನೂ ತೀಕ್ಷ್ಣಮತಿಯನ್ನೂ ಮೆಚ್ಚಿ ಅವರಿಗೆ ಒಂದು ಜೊತೆ ಬಂಗಾರದ ಕೈ ಗುಂಡಿಗಳನ್ನು ಬಹುಮಾನವಾಗಿ ಕೊಟ್ಟ ಸಂಗತಿಯನ್ನು ಸಿದ್ದಲಿಂಗಯ್ಯನವರು ದಾಖಲಿಸಿದ್ದಾರೆ. ಮಹಾರಾಜರಿಗೆ ಪ್ರಜಾಕ್ಷೇಮ ಎಷ್ಟು ಹಿರಿದಾಗಿತ್ತೆನ್ನುವುದು ಇದರಿಂದ ವ್ಯಕ್ತವಾಗುವುದಷ್ಟೆ.

ಬಹುಶಃ ಇದರಿಂದ ದಿವಾನರು ಕಂಗೆಟ್ಟಿರಬಹುದು. ಆದರೆ ಕಾಂಗ್ರೆಸ್ ಚಳುವಳಿಗಾರರ ಮೇಲೆ ಯುಕ್ತ ಸಂದರ್ಭದಲ್ಲಿ ಸೇಡು ತೀರಿಸಿಕೊಳ್ಳಲು ಮನೋನಿಶ್ಚಯ ಮಾಡಿಕೊಂಡಿರಲೂಬಹುದು. ಆ ದಿನ (25.4.38) ರಂದು ವಿದುರಾಶ್ವತ್ಥದಲ್ಲಿ ಕಾಕತಾಳೀಯವಾಗಿ ನೆರೆದಿದ್ದ ಧಾರ್ಮಿಕ ಸಭೆಯಲ್ಲಿ ಶಾಂತಿಯಿಂದ ಪಾಲ್ಗೊಳ್ಳುತ್ತಿದ್ದ ಅಮಾಯಕ ಜನರ ಮೇಲೆ ಪೊಲೀಸರು ವಿನಾ ಪ್ರೇರಣೆ ಗುಂಡು ಹಾರಿಸಿದ ಫಲವಾಗಿ 32 ಜನರು ಗುಂಡಿಗೆ ಬಲಿಯಾಗಿ

ನೂರಾರು ಜನರು ಗಾಯಗೊಂಡ ದುರಂತ ನಡೆದುಹೋಯಿತು. ಇದಕ್ಕೆ ಮಹಾರಾಜರ ಆಳ್ವಿಕೆಯ ದಂಡಹಿಡಿದ ದಿವಾನರೇ ಸಂಪೂರ್ಣ ಹೊಣೆಯಾಗಿ ತೋರಿಬಂದರು.

ಈ ಸುದ್ದಿ ರಾಷ್ಟ್ರದ ಮೂಲೆ ಮೂಲೆಗೂ ಕಾಳ್ಗಿಚ್ಚಿನಂತೆ ಹಬ್ಬಿತು. ಎಲ್ಲ ಕಡೆಗಳಿಂದ ಮೈಸೂರು ಸರ್ಕಾರ ಅವಹೇಳನಕ್ಕೆ ಗುರಿಯಾಯಿತು. ದಿವಾನರ ಆಳ್ವಿಕೆಯಲ್ಲಿ ಸರ್ ಮಿರ್ಜಾ ರವರ ಕಾರ್ಯಾಚರಣೆಯಲ್ಲಿ ಅದು ಅಂತಿಮ ಘಟ್ಟವಾದುದು ಗಮನಾರ್ಹ. ಶ್ರೀ ಎಂ. ಮೇಖ್ರಿ ಯವರ ಅಧಿಕಾರ ಸೂಕ್ಷ್ಮತೆ ಕೋಲಾರದ ಜಿಲ್ಲಾ ಮ್ಯಾಜಿಸ್ಟ್ರೇಟರಿಗೂ ತಿಳಿದಿದ್ದರೆ ವಿದುರಾಶ್ವತ್ಥದ ದುರಂತವೂ ತಪ್ಪಬಹುದಿತ್ತು. ಸರ್ ಮಿರ್ಜಾ ವಿದುರಾಶ್ವತ್ಥದ ಪ್ರಸಂಗದಲ್ಲಿ ಯಾವುದು ಶಿಸ್ತಿನ ಕೆಲಸವೆಂದುಕೊಂಡರೋ ಅದು ಅತಿಮೂರ್ಖ ಕಾರ್ಯಾಚರಣೆಯಾಗಿ ಸಂಭವಿಸಿ ಸರ್ಕಾರಕ್ಕೆ ಮುಳುವಾಗಿ ಸಂಭವಿಸಿತು. ಈ ವಿಷಯದಲ್ಲಿ ಮಹಾತ್ಮಾ ಗಾಂಧಿ, ಸರ್ದಾರ್ ಪಟೇಲ್, ಆಚಾರ್ಯ ಕೃಪಲಾನಿ ಮತ್ತಿತರ ರಾಷ್ಟ್ರನಾಯಕರ ಪ್ರವೇಶದಿಂದಾಗಿ ಈ ದೌರ್ಜನ್ಯ ಪ್ರಕರಣವನ್ನು ತನಿಖೆ ಮಾಡಲು ವಿಚಾರಣಾ ಸಮಿತಿ ನೇಮಕವಾದುದಲ್ಲದೆ ಮಹಾರಾಜರ ಸರ್ಕಾರ ಮತ್ತು ಪ್ರಜಾ ಪ್ರತಿನಿಧಿಗಳ ಮಧ್ಯೆ ಒಂದು ರಾಜಕೀಯ ಒಪ್ಪಂದ ಏರ್ಪಟ್ಟಿತು. ಈ ಒಪ್ಪಂದದ ಪರಿಣಾಮವಾಗಿ ಶಿವಪುರ ಸತ್ಯಾಗ್ರಹದಲ್ಲಿ ಬಂಧನಕ್ಕೊಳಗಾಗಿದ್ದ ಎಲ್ಲರನ್ನು ಸರ್ಕಾರ 13.5.38ರಂದು ಬೇಷರತ್ತಾಗಿ ಬಿಡುಗಡೆ ಮಾಡಿತು. ಮೈಸೂರು ಕಾಂಗ್ರೆಸಿನ ಅಸ್ತಿತ್ವವನ್ನು ಸರ್ಕಾರ ಒಪ್ಪಿಕೊಂಡಿತು. ತ್ರಿವರ್ಣ ಧ್ವಜವನ್ನು ಮನ್ನಿಸಿತು. ಇದೇ ಒಪ್ಪಂದದ ಅಂಗವಾಗಿ ಪ್ರಜಾ ಪ್ರತಿನಿಧಿಗಳನ್ನುಳ್ಳ ಒಂದು ರಾಜಕೀಯ ಸುಧಾರಣಾ ಸಮಿತಿಯು ಅಸ್ತಿತ್ವಕ್ಕೆ ಬಂದಿತು. ಶಿವಪುರ ಸತ್ಯಾಗ್ರಹದಲ್ಲಿ ಮುಂದಾಳತ್ವ ವಹಿಸಿದವರೆಲ್ಲರೂ ಈ ಸಮಿತಿಯ ಸದಸ್ಯರಾದರು.

ಈ ಬೆಳವಣಿಗೆಗಳಿಂದ ನಿರೀಕ್ಷಿತ ಫಲ ಕೈ ಸೇರದಿದ್ದರೂ ಸಂಸ್ಥಾನ ರಾಜಾಳ್ವಿಕೆಯ ಮಹತ್ವ ಕಡಿಮೆಯಾಗಿ ಹೆಚ್ಚಿನ ಮಟ್ಟಿಗೆ ಅದರ ಸರ್ವಾಧಿಕಾರ ಲಕ್ಷಣ ಕುಂದಿದಂತಾಯಿತು. ಮುಂದಿನ ರಾಜಕೀಯ ಬೆಳವಣಿಗೆಗೆ ಇದು ಅನುಕೂಲಕರವಾಗಿ ಪರಿಣಮಿಸಿತು. ಕಾಂಗ್ರೆಸ್‌ನ ಹಿರಿಮೆಗೆ ಹೊನ್ನ ಕಳಶವಿಟ್ಟಂತಾಯಿತು. ಇಷ್ಟೆಲ್ಲವೂ ವಿದುರಾಶ್ವತ್ಥದ ದುರಂತದ ಪರೋಕ್ಷ ಪ್ರತಿಫಲವಾಗಿ ಸಂಭವಿಸಿದುದು ಗಮನಾರ್ಹ.

ಈ ದುರಂತಕ್ಕೆ ಮತ್ತೊಂದು ಮಹತ್ವವಿರುವ ವಿಷಯ ಬಹುಶಃ ಹೆಚ್ಚಿನ ಜನರಿಗೆ ತಿಳಿದಿರಲಾರದು. ಅದೆಂದರೆ ಈ ದುರಂತವನ್ನು ತಪ್ಪಿಸಬಹುದಾಗಿದ್ದ ಒಂದು ಸಂದೇಶ ಆಕಸ್ಮಿಕವಾಗಿ ದಿವಾನರಿಗೆ ತಲುಪದೇ ಹೋದುದು. ಒಂದು ವೇಳೆ ಈ ಸಂದೇಶ ತಲುಪಿದ್ದರೆ ವಿದುರಾಶ್ವತ್ಥದ ಘಟನೆ ತಪ್ಪಬಹುದಾಗಿತ್ತಾದರೂ ಸತ್ಯಾಗ್ರಹದ ಸಾಧನೆ ಇಂದು ಪೂರ್ಣ ಪ್ರಜಾತಂತ್ರವನ್ನು ಒದಗಿಸಿಕೊಟ್ಟಿರುವಷ್ಟು ಪರಿಣಾಮಕಾರಿಯಾಗುತ್ತಿರಲಿಲ್ಲವೇನೋ!

ಶಿವಪುರ ಸತ್ಯಾಗ್ರಹದ ಕಾರಣ ಅಸಂಖ್ಯಾತ ಬಂಧನಗಳಾದ ಹಿನ್ನೆಲೆಯಲ್ಲಿ ಭೂಪಾಳಂ ಚಂದ್ರಶೇಖರಯ್ಯನವರು ಸಂಸ್ಥಾನದಲ್ಲಿ 1938ರ ಏಪ್ರಿಲ್ 22ರಂದು ಮಹಾತ್ಮರವರನ್ನು ವಾರ್ಧಾದಲ್ಲಿ ಭೇಟಿಮಾಡಿ ವಿಚಾರ ನಡೆಸಿದ್ದರು. ಧ್ವಜ ವಿಚಾರದಲ್ಲಿ ಸಂಸ್ಥಾನ ಸರ್ಕಾರಕ್ಕೂ ಕಾಂಗ್ರೆಸ್ಸಿಗೂ ಸಮನ್ವಯ ಏರ್ಪಡುವಂತಹ ನೀತಿಯನ್ನು ರೂಪಿಸಲು ಕಾಂಗ್ರೆಸ್ ಸಭೆಗಳಲ್ಲಿ ಮೈಸೂರು ಧ್ವಜ ಮತ್ತು ತ್ರಿವರ್ಣ ಧ್ವಜ ಎರಡನ್ನೂ ಗೌರವಿಸುವುದು ಗಾಂಧೀಜಿಯವರ

ತಲುಪಿಸಲು ಭೂಪಾಳಂರವರ ಕೈಯಲ್ಲಿ ಕೊಟ್ಟಿದ್ದರು. ಈ ಸಲಹೆ ಶಾಂತಿ ಸೌಹಾರ್ದದ ಸ್ಥಾಪನೆಗೆ ಸಹಾಯಕವಾಗಬಹುದಾಗಿತ್ತು. ಈ ವಿಷಯವನ್ನು ದಿವಾನರಿಗೆ ಟೆಲಿಗ್ರಾಂ ಮೂಲಕ ತಿಳಿಸುವ ಉದ್ದೇಶವಿದ್ದರೂ ಕಾರಣಾಂತರದಿಂದ ಅದೇ ದಿನ 24.4.38ರಂದು ಟೆಲಿಗ್ರಾಂ ನೀಡಲಾಗಲಿಲ್ಲ. ಮಾರನೆಯ ದಿನ 25.4.38ರಂದು ತಾಯ್ನಾಡು ಪತ್ರಿಕೆಯಲ್ಲಿ ಏಪ್ರಿಲ್ 25, 1938ರಂದು ವಿದುರಾಶ್ವತ್ಥದಲ್ಲಿ ಧ್ವಜ ಸತ್ಯಾಗ್ರಹ ಏರ್ಪಟ್ಟ ಸುದ್ದಿಯ ಜೊತೆಗೆ ಪೋಲೀಸು ತಂಡಗಳು ಆ ಸ್ಥಳದಲ್ಲಿ ಜಮಾಯಿಸಿರುವ ಸುದ್ದಿಯೂ ಪ್ರಕಟವಾಗಿತ್ತು ಅದನ್ನು ನೋಡಿ ಭೂಪಾಳಂ ತಕ್ಷಣವೇ ದಿವಾನರಿಗೆ ಟೆಲಿಗ್ರಾಂ ನೀಡಲು ಟೆಲಿಗ್ರಾಂ ಕಛೇರಿಗೆ ಹೊರಟರು. ಆದರೆ ಅಂದು ಭಾನುವಾರವಾದ್ದರಿಂದ ಕಛೇರಿ ಮುಚ್ಚಿತ್ತು. ಹಾಗಾಗಿ ಟೆಲಿಗ್ರಾಂ ಕೊಡುವುದಾಗಲೇ ಇಲ್ಲ.

27.4.38ರಂದು ವಾರ್ಧಾದಿಂದ ಬೆಂಗಳೂರಿಗೆ ಹಿಂತಿರುಗುವ ದಾರಿಯಲ್ಲಿ ಬೊಂಬಾಯಿಯಲ್ಲಿ ಸರ್ದಾರ್ ಪಟೇಲರನ್ನು ಭೇಟಿಯಾಗಲು ಹೋದಾಗ ಆ ವೇಳೆಗಾಗಲೇ ವಿದುರಾಶ್ವತ್ಥದಲ್ಲಿ ದುರಂತ ನಡೆದು ಹೋಗಿದ್ದುದು ತಿಳಿದುಬಂತು. ಸರ್ದಾರ್ ಪಟೇಲರ ಸೂಚನೆ ಮೇರೆಗೆ ಭೂಪಾಳಂ ಮತ್ತೆ ಗಾಂಧೀಜಿಯವರನ್ನು ಭೇಟಿಯಾದರು. ಈ ಘಟನೆ ನಡೆದ ನಂತರದಲ್ಲಿ ಗಾಂಧೀಜಿಯವರ ನಿಲುವಿನಲ್ಲಿ ಭಾರೀ ಬದಲಾವಣೆ ಉಂಟಾಗಿತ್ತು. ಸಂಸ್ಥಾನದ ಆಳ್ವಿಕೆಯೊಂದಿಗೆ ಸಮನ್ವಯದಿಂದ ಚಳುವಳಿ ಸಾಧಿಸಬೇಕೆಂಬ ಅವರ ಸೂಚನೆ ಈಗ ಬದಲಾಗಿ ಪೂರ್ಣ ಸ್ವರೂಪದ ಚಳುವಳಿಯನ್ನು ಕೈಗೊಳ್ಳಲು ಗಾಂಧೀಜಿ ಭೂಪಾಳಂ ರವರಿಗೆ ಸೂಚಿಸಿದರು. ತಾವು ಸಿದ್ದಲಿಂಗಯ್ಯನವರಿಗಾಗಿ ಕೊಟ್ಟಿದ್ದ ಸಮನ್ವಯ ಸಲಹಾ ಪತ್ರದ ಆವಶ್ಯಕತೆ ಇನ್ನಿಲ್ಲವೆಂದು ಭೂಪಾಳಂರವರಿಗೆ ತಿಳಿಸಿ ಅಹಿಂಸಾ ಮಾರ್ಗವನ್ನು ಬಿಡದೆ ಸತ್ಯಾಗ್ರಹವನ್ನು ಸ್ವತಂತ್ರವಾಗಿ ಮುಂದುವರೆಸಿಕೊಂಡು ಹೋಗುವಂತೆ ಹೇಳಿ ಮೈಸೂರು ಪ್ರಜೆಗಳ ಹೋರಾಟಕ್ಕೆ ಜಯವನ್ನು ಕೋರಿ ಕಳುಹಿಸಿಕೊಟ್ಟರು. ಇದರಿಂದ ಮೈಸೂರಿನ ಸ್ವಾತಂತ್ರ್ಯ ಹೋರಾಟದಲ್ಲಿ ಮೈಸೂರು ರಾಜಧ್ವಜ ತನ್ನ ಸ್ಥಾನವನ್ನು ಕಳೆದುಕೊಂಡಂತಾಯಿತು. ಮೈಸೂರು ಸಂಸ್ಥಾನದಲ್ಲಿ ಪ್ರಜಾ ಸ್ವಾತಂತ್ರ್ಯದ ದ್ಯೋತಕವಾದ ತ್ರಿವರ್ಣ ಧ್ವಜ ಮಹಾರಾಜರ ಕೃಪಾಶ್ರಯವಿಲ್ಲದೆ ಸ್ವತಂತ್ರವಾಗಿ ಹಾರಾಡುವಂತಾಯಿತು.

## ಮೈಸೂರು ಕಾಂಗ್ರೆಸ್‌ನ ಹಿರಿಮೆ

ಮೈಸೂರು ಸಂಸ್ಥಾನದಲ್ಲಿ ಪ್ರಜಾತಂತ್ರಕ್ಕಾಗಿ ಹೋರಾಟ ನಡೆಸಲು ರಾಷ್ಟ್ರೀಯ ಕಾಂಗ್ರೆಸ್‌ನಿಂದ ಬೇರೆಯಾದ ಒಂದು ಸಾಂಸ್ಥಾನಿಕ ಸ್ವತಂತ್ರ ವೇದಿಕೆ ಅವಶ್ಯಕವಾದ ಸಂದರ್ಭದಲ್ಲಿ ಸಿದ್ದಲಿಂಗಯ್ಯನವರ ಮೈಸೂರು ಕಾಂಗ್ರೆಸನ್ನು 1937ರಲ್ಲಿ ಸಂಸ್ಥಾಪಿಸಿದರಷ್ಟೆ. ಶಿವಪುರ ಸತ್ಯಾಗ್ರಹ ಮತ್ತು ವಿದುರಾಶ್ವತ್ಥದ ಪ್ರಕರಣಗಳಿಂದ ಉಂಟಾದ ಲಾಭಕರ ಪರಿಣಾಮಗಳಲ್ಲಿ ಮೈಸೂರು ಕಾಂಗ್ರೆಸ್‌ನ ಅಸ್ತಿತ್ವವನ್ನು ಸಂಸ್ಥಾನದ ಆಳ್ವಿಕೆ ಒಪ್ಪಿಕೊಂಡು ಅದಕ್ಕೆ ಸರ್ಕಾರದ ಸಮಿತಿಗಳಲ್ಲಿ ಪ್ರಾತಿನಿಧ್ಯ ನೀಡಿದುದು ಒಂದು. ಇದರಿಂದ ಜವಾಬ್ದಾರಿಯುತ ಸರ್ಕಾರ ರಚನೆಗೆ ಅನುಕೂಲಕರ ವಾತಾವರಣ ಏರ್ಪಟ್ಟಿತು.

ಆದರೆ ಒಪ್ಪಂದದ ಷರತ್ತುಗಳನ್ನು ಪಾಲಿಸುವಲ್ಲಿ ದಿವಾನರ ಸರ್ಕಾರ ಪ್ರಾಮಾಣಿಕವಾಗಿ ನಡೆದುಕೊಳ್ಳಲಿಲ್ಲ. ಸರ್ ಮಿರ್ಜಾ ರವರ ನಂತರ ಅಧಿಕಾರಕ್ಕೆ ಬಂದ ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್‌ರವರು ಮಹಾರಾಜರಿಗೆ ಕಾಂಗ್ರೆಸ್ ಚಳುವಳಿ ಕ್ಷೀಣಗೊಳ್ಳುತ್ತಿದೆ ಎಂಬಂತೆ ತಪ್ಪು ಮಾಹಿತಿಗಳನ್ನು ನೀಡುತ್ತಾ ಸಂಸ್ಥಾನ ಸರ್ಕಾರದ ಕೊನೆಯನ್ನು ಮುಂದಕ್ಕೆ ಹಾಕುತ್ತಾ ಬಂದರು. ಮಹಾರಾಜರಿಗೂ ಕಾಂಗ್ರೆಸ್ ಪ್ರತಿನಿಧಿಗಳ ನಡುವೆ ಕಂದಕವನ್ನು ನಿರ್ಮಿಸುವ ಕ್ರಮವಾಗಿ ರಾಜಕೀಯ ಆಗುಹೋಗುಗಳ ಬಗ್ಗೆ ಜನರಿಗೆ ಸುದ್ದಿ ತಲುಪಿಸುತ್ತಿದ್ದ 'ಪ್ರಜಾಮತ' ಮತ್ತು 'ಪ್ರಜಾಶಕ್ತಿ' ವಾರ ಪತ್ರಿಕೆಗಳ ಮೇಲೆ ನಿರ್ಬಂಧ ವಿಧಿಸಿ ಶ್ರೀ ಬಿ.ಎನ್. ಗುಪ್ತಾ ರವರನ್ನು ಶ್ರೀ ಸಿ. ಮೋನಯ್ಯರವರನ್ನು ಹೊರನಾಡಿನವರೆಂಬ ಕಾರಣ ನೀಡಿ ಸರ್ಕಾರ ಗಡೀ ಪಾರು ಆಜ್ಞೆ ಹೊರಡಿಸಿತ್ತು. ಕಾಂಗ್ರೆಸ್ ಚಳುವಳಿಯಲ್ಲಿ ಕಾಂಗ್ರೆಸ್ ಪರವಾಗಿ ಧ್ವನಿ ಎತ್ತಿದ ಹಲವು ಪಟೇಲರು, ಶಾನುಭೋಗರು ಹಾಗೂ ಉಪಾಧ್ಯಾಯರುಗಳನ್ನು ರಾಜಕೀಯ ಕಾರಣಗಳ ಮೇಲೆ ವಜಾಮಾಡಿ ಪತ್ರಗಳನ್ನು ಹೊರಡಿಸಿತ್ತು. ರಾಜಕೀಯ ಸುಧಾರಣಾ ಸಮಿತಿಯಲ್ಲಿ ಭೂಪಾಳಂ ರವರ ನಿರ್ಗಮನದಿಂದ ತೆರವಾದ ಕಾಂಗ್ರೆಸ್ ಸ್ಥಾನವನ್ನು ಮತ್ತೊಬ್ಬ ಕಾಂಗ್ರೆಸಿಗನಿಂದ ತುಂಬಲು ನಿರಾಕರಿಸಿತ್ತು. ರಾಜಕೀಯ ಸುಧಾರಣಾ ಸಮಿತಿಯಲ್ಲಿ ಅಧಿಕಾರೇತರ ಸದಸ್ಯರಿಗೆ ಅಭಿಪ್ರಾಯ ಮಂಡನೆಗೆ ಪೂರ್ಣ ಅಧಿಕಾರ ನೀಡುತ್ತಿರಲಿಲ್ಲ. ಮೈಸೂರು ನಗರದಲ್ಲಿ ಕಾಂಗ್ರೆಸ್ ಸಭೆ / ಸತ್ಯಾಗ್ರಹಗಳ ವಿರುದ್ಧ ಹೇರಲಾದ ಪ್ರತಿಬಂಧಕಾಜ್ಞೆಗಳನ್ನು ಹಿಂತೆಗೆದುಕೊಳ್ಳಲಿಲ್ಲ.

ಈ ಕಾರಣಗಳಿಂದ ಚಳುವಳಿಯನ್ನು ಮತ್ತಷ್ಟು ಚುರುಕುಗೊಳಿಸುವುದು ಅವಶ್ಯಕವಾಯಿತು. ಶಿವಪುರದ ಸತ್ಯಾಗ್ರಹದಲ್ಲಿ ದಸ್ತಗಿರಿಯಾಗಿದ್ದ ಸಿದ್ದಲಿಂಗಯ್ಯನವರು 13.5.38 ರವರೆಗೂ ಸೆರೆಮನೆಯಲ್ಲಿದ್ದರಷ್ಟೆ. ಬಿಡುಗಡೆಯಾಗಿ ಬಂದ ನಂತರ ತಾತ್ಕಾಲಿಕ ಅಧ್ಯಕ್ಷರಾಗಿದ್ದ ಹೆಚ್.ಬಿ. ಗುಂಡಪ್ಪಗೌಡರಿಂದ ಅಧ್ಯಕ್ಷ ಸ್ಥಾನದ ಪ್ರಭಾರವನ್ನು ವಹಿಸಿಕೊಂಡು ಆ ಕೂಡಲೇ ಪರಿಸ್ಥಿತಿಯ ಅಧ್ಯಯನ ಮಾಡಿ ಸರ್ಕಾರದ ಲೋಪಗಳ ವಿರುದ್ಧ ದನಿ ಎತ್ತಿ ಪ್ರತಿಭಟಿಸಿದರು. ಪ್ರತಿನಿಧಿಗಳ ಭಾವನೆಗಳನ್ನು ಸರ್ಕಾರದ ಮುಂದಿಡಲು ಇವರಿಗೆ ಪ್ರಜಾಪ್ರತಿನಿಧಿ ಸಭೆ ಉತ್ತಮ ವೇದಿಕೆಯಾಗಿ ಒದಗಿಬಂತು. ಈ ವೇದಿಕೆಯಿಂದ ಸಿದ್ದಲಿಂಗಯ್ಯನವರು ಪ್ರಚಂಡ ಭಾಷಣಗಳನ್ನು ಮಾಡಿ ಪ್ರಜಾಹಿತಸಾಧಕ ಧೋರಣೆಗಳನ್ನು ಸರ್ಕಾರದ ಮುಂದಿಟ್ಟರು.

ದಿವಾನರ ಸರ್ಕಾರದ ನಿರ್ಲಕ್ಷ ಧೋರಣೆಗಳನ್ನು ಪ್ರತಿಭಟಿಸಿ ಪ್ರತಿನಿಧಿ ಸಭೆಯ ಎಲ್ಲಾ ಕಾಂಗ್ರೆಸ್ ಸದಸ್ಯರು ರಾಜೀನಾಮ ನೀಡಿ ಹೊರಬರುವಂತೆ ಕರೆ ಇತ್ತರು. ಕೂಡಲೇ ಕಾಂಗ್ರೆಸ್ ಸದಸ್ಯರೇ ಅಲ್ಲದೆ ಅವರಿಗೆ ಬೆಂಬಲವಾಗಿ ಕಾಂಗ್ರೆಸ್ಸೇತರ ಸದಸ್ಯರೂ ಪ್ರತಿನಿಧಿಸಭೆಯ ತಮ್ಮ ಸ್ಥಾನಗಳಿಗೆ ರಾಜಿನಾಮೆ ನೀಡಿ ಹೊರಬಂದರು. ಈ ನಿದರ್ಶನ ಅಂದಿನ ರಾಜಕೀಯ ಪರಿಶುದ್ಧತೆಯ ಔನ್ನತ್ಯಕ್ಕೆ ಹಿಡಿದ ಕನ್ನಡಿಯಾಗಿದೆ.

ಈ ಸಂದರ್ಭದಲ್ಲಿ ಮೈಸೂರು ಕಾಂಗ್ರೆಸ್ ಕ್ರಮೇಣ ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಕಾಂಗ್ರೆಸ್ ಸಮಿತಿಗಳನ್ನು ಸ್ಥಾಪಿಸಿಕೊಂಡು ಮತ್ತೂ ಬಲಯುತವಾಗಿ ಬೆಳೆಯಿತು. ಸ್ಥಳೀಯ ಸರ್ಕಾರಗಳಿಗೆ ನಡೆದ ಚುನಾವಣೆಗಳಲ್ಲಿ ಕಾಂಗ್ರೆಸ್ಸಿಗರು ಸೋಲು ಅನುಭವಿಸುವಂತೆ ಮಾಡಲು ದಿವಾನರು ಅನೇಕ ಕುಹಕ ಯುಕ್ತಿಗಳನ್ನು ಕೈಗೊಂಡರು. ಆದರೆ ಎಲ್ಲ ಕಡೆ ಕಾಂಗ್ರೆಸ್ ಸದಸ್ಯರೇ ಬಹು ಸಂಖ್ಯೆಯಲ್ಲಿ ಚುನಾಯಿತರಾಗಿ ಬಂದರು. ದಿವಾನರ ಆಳ್ವಿಕೆಗೆ ಜನರ

ಮೈಸೂರು ಕಾಂಗ್ರೆಸ್‌ನ ಘನತೆ ಹೆಚ್ಚಿತು. ಇಡೀ ಸಂಸ್ಥಾನದಲ್ಲಿ ಪ್ರಜಾಸತ್ತೆಯ ಪರವಾದ ರಾಜಕೀಯ ಪ್ರಜ್ಞೆ ಮೂಡಿ ಜಾತಿ ಮತಗಳ ಅಂತರಗಳನ್ನು ಮೀರಿ ಒಗ್ಗಟ್ಟು ಸಾಧಿತವಾಯಿತು. ಅಷ್ಟೇ ಅಲ್ಲ, ಇಡೀ ರಾಷ್ಟ್ರದಲ್ಲಿ ಮತ್ತು ಇತರೆ ದೇಶೀಯ ಸಂಸ್ಥಾನಗಳಲ್ಲೂ ಮೈಸೂರು ಕಾಂಗ್ರೆಸ್‌ನ ಹಿರಿಮೆ ಹೇಳಿ ಬರುವಂತಾಯಿತು. ಮೂಲೆ ಮೂಲೆಗಳಿಂದ ಅನೇಕ ಗಣ್ಯರು, ಮುತ್ಸದ್ದಿಗಳು ಮೈಸೂರು ಕಾಂಗ್ರೆಸ್‌ನ ಕಾರ್ಯಸಾಧನೆಯನ್ನು ಶ್ಲಾಘಿಸಿ ಅಭಿನಂದನಾ ಸಂದೇಶಗಳನ್ನು ಕಳುಹಿಸಿದ್ದರು. ದಿವಾನ್ ಮಿರ್ಜಾರವರ ತಿಳಿಗೇಡಿತನ ಇಷ್ಟೆಲ್ಲ ಸಾಧನೆಗೆ ಪರೋಕ್ಷ ಮೂಲವಾಯಿತು. ಸಂಸ್ಥಾನದ ಪ್ರಜೆಗಳಲ್ಲಿ ಇತಿಹಾಸ ಕಂಡರಿಯದ ಒಗ್ಗಟ್ಟು, ಸೋದರಭಾವಗಳು ಬೆಳೆಯಲು ಕಾರಣವಾಯಿತು. ಅಷ್ಟೇ ಅಲ್ಲ ಬ್ರಿಟಿಷರಿಂದ ದೇಶ ಬಿಡುಗಡೆಯಾದ ನಂತರದಲ್ಲಿ ದೇಶೀಯ ರಾಜರಿಂದ ಪ್ರಜೆಗಳಿಗೆ ಸ್ವಾತಂತ್ರ್ಯ ದೊರಕಿಸಿಕೊಡುವ ಕಾರ್ಯಭಾರ ಮೈಸೂರು ಸಂಸ್ಥಾನದ ಮಟ್ಟಿಗೆ ಸುಲಭವಾಯಿತು.

## ಮೈಸೂರು ಚಲೋ

ಮಹಾರಾಜರ ಜನಹಿತಾಸಕ್ತಿ ಶಿವಪುರ ಸತ್ಯಾಗ್ರಹ ನಡೆದಾಗಲೇ ಪ್ರಕಟವಾಗಿತ್ತು. ಆದರೆ ದಿವಾನರ ಕಛೇರಿ ಮಹಾರಾಜರಿಗೂ ಪ್ರಜೆಗಳಿಗೂ ನಡುವೆ ಅಡ್ಡಗೋಡೆಯಾಗಿ ನಿಂತಿತ್ತು. ಮಹಾರಾಜರಿಗೆ ರಾಜಕೀಯ ಪರಿಸ್ಥಿತಿಯ ಬಗ್ಗೆ ಪೊಳ್ಳು ಚಿತ್ರಣಗಳನ್ನು ನೀಡುತ್ತಾ ಬಂದಿತು. ಒಡೆದು ಆಳುವ ರಾಜಕೀಯ ತಂತ್ರವನ್ನು ದಿವಾನರ ಕಛೇರಿ ಬ್ರಿಟಿಷರಿಂದ ಕಲಿತಿದ್ದುದು ನಂತರದ ಬೆಳವಣಿಗೆಗಳಲ್ಲಿ ಕಂಡು ಬರುತ್ತದೆ.

ಇದರಿಂದಾಗಿ ಮತ್ತೊಮ್ಮೆ ತೀವ್ರ ಚಳುವಳಿ ನಡೆಸುವುದು ಕಾಂಗ್ರೆಸ್‌ಗೆ ಅನಿವಾರ್ಯವಾಯಿತು. ದಿವಾನರ ಮಧ್ಯವರ್ತಿ ನಡವಳಿಕೆಯಿಂದಾಗಿ ಪ್ರತಿಭಟನೆಯನ್ನು ಚಳುವಳಿಗಾರರು ಮೈಸೂರು ಅರಮನೆ ಬಾಗಿಲಿಗೇ ಕೊಂಡೊಯ್ಯುವುದು ಅನಿವಾರ್ಯವಾಯಿತು. ರಾಷ್ಟ್ರೀಯ ಚಳುವಳಿಯಲ್ಲಿ ದೆಹಲಿ ಚಲೋ ಹಮ್ಮಿಕೊಂಡ ಮಾದರಿಯಲ್ಲೇ ಮೈಸೂರು ಸಂಸ್ಥಾನದಲ್ಲಿ 'ಚಲೋ ಮೈಸೂರು' ಚಳುವಳಿ ಕಾರ್ಯಾಚರಣೆ ರೂಪುಗೊಳ್ಳತೊಡಗಿತು. ಸಂಸ್ಥಾನದ ನಾನಾ ಕೇಂದ್ರಗಳಿಂದ ಜಾತಾಗಳು ಹೊರಟು ಒಂದು ನಿರ್ದಿಷ್ಟವಾದ ದಿನ ಮೈಸೂರು ರಾಜಧಾನಿಯಲ್ಲಿ ಸೇರಿ ಜವಾಬ್ದಾರೀ ಸರ್ಕಾರದ ಸ್ಥಾಪನೆಗಾಗಿ ಸತ್ಯಾಗ್ರಹ ಹೂಡುವುದು ಯೋಜನೆಯಾಗಿತ್ತು. ಸರ್ಕಾರ ಇದನ್ನು ಭಂಗಗೊಳಿಸಬಹುದೆಂಬ ಆತಂಕದಿಂದ ಯೋಜನೆಯ ರೂಪುರೇಷೆಗಳನ್ನು ಗೋಪ್ಯವಾಗಿಡಲಾಗಿತ್ತು. ಹೇಗೋ ಇದರ ವಾಸನೆ ತಿಳಿದ ದಿವಾನರ ಸರ್ಕಾರ ಮತ್ತೆ ಆಗಸ್ಟ್ - ಸೆಪ್ಟೆಂಬರ್ 1947ರಲ್ಲಿ ಕಾಂಗ್ರೆಸ್ ಕಾರ್ಯಕರ್ತರನ್ನು ಬಂಧಿಸುವ ಕೆಲಸವನ್ನು ಪ್ರಾರಂಭ ಮಾಡಿತು.

ಸರ್ವಶ್ರೀ ಸಾವುಕಾರ್ ಚನ್ನಯ್ಯ, ಕೆ.ಸಿ. ರೆಡ್ಡಿ, ಕೆ.ಟಿ. ಭಾಷ್ಯಂ, ಹೆಚ್. ಸಿದ್ದಯ್ಯ ಮತ್ತಿತರ ಕೆಲವರೊಂದಿಗೆ ಸಿದ್ದಲಿಂಗಯ್ಯನವರನ್ನು ಬಂಧಿಸಿ ಚಿಕ್ಕಮಗಳೂರು ಜೈಲಿನಲ್ಲಿಡಲಾಯಿತು. ಈ ಬಂಧನದ ಹಿಂದಿನ ದಿನಗಳಷ್ಟೇ ಕಾಂಗ್ರೆಸ್‌ನ ಚರಿತ್ರೆಯಲ್ಲಿ ಪಾವಿತ್ರ್ಯವನ್ನು ಕಂಡ ದಿನಗಳೆನಿಸುತ್ತದೆ. ಮುಂದಿನ ದಿನಗಳು ದುರಂತ ಇತಿಹಾಸವನ್ನೇ ಮೆರೆಯಲನುವಾದವು. 1947 ಅಕ್ಟೋಬರ್ 6ರಂದು ಇದ್ದಕ್ಕಿದ್ದಂತೆ ಎಲ್ಲ ಕಾಂಗ್ರೆಸ್ ಕಾರ್ಯಕರ್ತರನ್ನು ಜೇಲುಗಳಿಂದ ಬಿಡುಗಡೆ ಮಾಡಿ ಸರ್ಕಾರೀ ವಾಹನಗಳಲ್ಲಿ ಬೆಂಗಳೂರಿಗೆ

ಕಳುಹಿಸಿಕೊಡಲಾಯಿತು. ಈ ನಡುವೆ ಏನು ಬೆಳವಣಿಗೆಗಳಾದುವೆಂಬುದು ಸಿದ್ದಲಿಂಗಯ್ಯನವರಿಗೆ ತಿಳಿಯಲಿಲ್ಲ. ಇವರ ಬಿಡುಗಡೆಯ ಸಂದೇಶದೊಂದಿಗೇ ಕೆ.ಸಿ. ರೆಡ್ಡಿಯವರು ಮಹಾರಾಜರೊಡನೆ ಭೇಟಿಗಾಗಿ ಈಗಾಗಲೇ ಹೋಗಿದ್ದಾರೆಂಬ ವಿಷಯ ತಿಳಿದು ಬಂತು. ಕೊನೆಗೂ ದಿವಾನರ ಭೇದ ತಂತ್ರ ಫಲಿಸಿತ್ತು. ಕಾಂಗ್ರೆಸ್‌ನ ಅಖಂಡತೆಗೆ ರಾಹು ಕವಿಯಿತು. ಪ್ರಾಮಾಣಿಕ ಕಾಂಗ್ರೆಸ್ಸಿಗರು ಕ್ರಮೇಣ ಮೂಲೆಗುಂಪಾದರು.

ಇದಾದ ಒಂದು ವಾರದೊಳಗೇ ಕೆಲವು ಕಾಂಗ್ರೆಸ್ ಮುಖಂಡರ ಜೊತೆಗೆ ದಿವಾನರನ್ನೂ ಒಳಗೊಂಡ ಸಚಿವ ಸಂಪುಟ ರಚನೆಯಾದ ಪ್ರಕಟಣೆ ಹೊರಬಿದ್ದಿತು. ಈ ಸಂಪುಟ ಸಿದ್ದಲಿಂಗಯ್ಯನವರನ್ನೊಳಗೊಂಡಿರಲಿಲ್ಲ. 6 ಜನ ಕಾಂಗ್ರೆಸ್ ಸದಸ್ಯರು 3 ಜನ ಕಾಂಗ್ರೆಸೇತರ ಸದಸ್ಯರು ಜೊತೆಗೆ ವಿಶಿಷ್ಟ ಸಚಿವರಾಗಿ ದಿವಾನ್ ರಾಮಸ್ವಾಮಿ ಮೊದಲಿಯಾರ್ ಇವರುಗಳನ್ನೊಳಗೊಂಡಿತ್ತು. ಇದು ಶಾಶ್ವತ ವ್ಯವಸ್ಥೆಯಾಗುವವರೆಗಿನ ತಾತ್ಕಾಲಿಕ ವ್ಯವಸ್ಥೆ ಎನಿಸಿದರೂ ಮುಂದೆ ಇದೇ ರಚನೆಯನ್ನು ಉಳಿಸಿಕೊಂಡ ಶಾಶ್ವತ ಸಚಿವ ಸಂಪುಟ ಕೆ.ಸಿ. ರೆಡ್ಡಿಯವರ ನಾಯಕತ್ವದಲ್ಲಿ ಸಂಸ್ಥಾಪಿತವಾಯಿತು. ಅಮಾಯಕ ಪ್ರಜೆಗಳಿಗೆ ಇದು ವಿಜಯೋತ್ಸವದ ಸುದ್ದಿಯಾಗಿತ್ತು. ಅದರ ಅಂತರಾಳವನ್ನು ಅವರು ಭೇದಿಸಲಾರದವರಾಗಿದ್ದರು.

ಸಿದ್ದಲಿಂಗಯ್ಯನವರು ಕಾಂಗ್ರೆಸ್ ಅಧ್ಯಕ್ಷತೆಗೆ ಸೂಚಿತವಾಗಿರುವುದಾಗಿ ಅಭಿಪ್ರಾಯಕೊಡಲಾಯಿತು. ಆದರೆ ಮುಂದೆ ಕಾಂಗ್ರೆಸ್ ಅಧ್ಯಕ್ಷರ ಚುನಾವಣೆ ಬಂದಾಗ ಇವರ ವಿರುದ್ಧ ಇವರ ಅಪಾರಾತ್ಮವೆನ್ನುವಂತಿದ್ದ ಕೆಂಗಲ್ ಹನುಮಂತಯ್ಯನವರನ್ನು ಸ್ಪರ್ಧೆಗೆ ನಿಲ್ಲಿಸಲಾಯಿತು. ಇದಕ್ಕೆ ಕೆಂಗಲ್ ಹನುಮಂತಯ್ಯನವರು ಒಪ್ಪಿದ ಬಗ್ಗೆ ಸಿದ್ದಲಿಂಗಯ್ಯನವರಿಗೆ ಆಶ್ಚರ್ಯ. ಹನುಮಂತಯ್ಯನವರು ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಹನುಮಂತಯ್ಯನವರ ಮಿತ್ರರು ಹಿತೈಷಿಗಳು ಮಾಡಿದ ಪ್ರಯತ್ನ ನಿಷ್ಫಲವಾಯಿತು. ಕೊನೆಗೆ 14.11.1947 ರಂದು ಚಿತ್ರದುರ್ಗದ ಅಧಿವೇಶನದ ಸಂದರ್ಭದಲ್ಲಿ ನಡೆದ ಸಾಂಸ್ಥಿಕ ಚುನಾವಣೆಯಲ್ಲಿ ವಿಜಯದೇವತೆ ಸಿದ್ದಲಿಂಗಯ್ಯನವರಿಗೇ ಒಲಿದಿದ್ದಳು. ಧರ್ಮಕ್ಕೆ ಜಯವೆಂಬ ಭರವಸೆ ಉಳಿದಂತಾಯಿತು. ಚುನಾವಣೆಯ ನಂತರ ಹನುಮಂತಯ್ಯನವರೂ ಸಿದ್ದಲಿಂಗಯ್ಯನವರೂ ಪರಸ್ಪರ ಆಲಂಗಿಸಿಕೊಂಡು ಗಳಗಳನೆ ಅತ್ತುದನ್ನು ಸಿದ್ದಲಿಂಗಯ್ಯನವರು ಸದ್ಭಾವನೆಯಿಂದ ಸ್ಮರಿಸಿಕೊಳ್ಳುತ್ತಾರೆ. ಮಾತ್ರವಲ್ಲ ಕೆಂಗಲ್ ಹನುಮಂತಯ್ಯನವರ ಪ್ರಾಮಾಣಿಕ ಆದರ್ಶವನ್ನೂ, ಇಡೀ ನಾಡನ್ನೇ ಸಂಸ್ಕೃತಿಯ ಉತ್ತುಂಗಕ್ಕೆ ಕೊಂಡೊಯ್ಯಬಲ್ಲ ಸಾಮರ್ಥ್ಯವನ್ನೂ ಕೊಂಡಾಡಿ ಕೆಂಗಲ್ ಹನುಮಂತಯ್ಯನವರು ಮಾತ್ರವೇ ವಿಶ್ವವನ್ನು ಸರಿಯಾಗಿ ರೂಪಿಸಬಲ್ಲರು ಎಂದು ಮನಃಪೂರ್ವಕವಾಗಿ ಶ್ಲಾಘಿಸಿದ್ದಾರೆ.

ಚುನಾವಣೆಯ ವಿಜಯದಿಂದ ಸಮಸ್ಯೆಗಳ ಪರಿಹಾರವಾಗಲಿಲ್ಲ ಬದಲಿಗೆ ಮತ್ತಷ್ಟು ವಿಷಮವಾದವು. ಕಾರ್ಯಕಾರಿ ಸಮಿತಿ ಸಭೆಗಳಲ್ಲಿ ಇವರಿಗೆ ಕಿರುಕುಳಗಳು ಮೊದಲಾದವು. ಇವರ ವಿರುದ್ಧ ತಲೆಬುಡವಿಲ್ಲದ ಆರೋಪಗಳನ್ನು ಹೊರಿಸಿ ಮನೋವ್ಯಥೆಗೆ ಗುರಿ ಮಾಡಲಾಯಿತು. ಇದರಿಂದ ಬೇಸತ್ತ ಸಿದ್ದಲಿಂಗಯ್ಯನವರು ಕಲುಷಿತ ವ್ಯವಸ್ಥೆಯಿಂದ ದೂರ ಉಳಿಯಬಯಸಿದರು. ಅಂತಃ ಕಲಹಗಳನ್ನು ಬಹಿರಂಗಪಡಿಸುವುದು ಆಗತಾನೆ ಕಣ್ತೆರೆಯುತ್ತಿದ್ದ

ಪ್ರಜಾಸತ್ತೆಗೆ ಮಾರಕವಾಗಬಹುದೆಂದು ಎಲ್ಲಾ ನೋವನ್ನು ತಮ್ಮೊಳಗೇ ಅಡಗಿಸಿಕೊಂಡ ವಿಷಕಂಠರಾದರು. ಸ್ವಾತಂತ್ರ್ಯ ಬಂದ ಮೂರು ದಶಕಗಳ ನಂತರ ಈ ಬೆಳವಣಿಗೆಗಳನ್ನು ತಾವು ಮಂತ್ರಿಯಾಗಿದ್ದ ಎರಡು ಅವಧಿಗಳ ಅನುಭವವನ್ನೂ ನೆನಪಿಸಿಕೊಂಡು ರಾಜಕೀಯ ನೀತಿಪತನ ಬ್ರಿಟಿಷರಿಂದ ಕಾಂಗ್ರೆಸ್‌ಗೆ ಅಧಿಕಾರ ಹಸ್ತಾಂತರವಾದ ದಿನದಿಂದಲೇ ಪ್ರಾರಂಭವಾಗಿತ್ತೆಂದು ಸಿದ್ದಲಿಂಗಯ್ಯನವರು ವಿಷಾದದಿಂದ ಹೇಳಿಕೊಂಡಿದ್ದಾರೆ. ಸ್ವಾತಂತ್ರ್ಯ ಸಾಧನೆಯಾದೊಡನೆಯೇ ಕಾಂಗ್ರೆಸನ್ನು ಪರ್ಯಾವಸಾನಗೊಳಿಸಬೇಕೆಂದು ಸೂಚಿಸಿದ್ದ ಮಹಾತ್ಮಾಗಾಂಧಿಯವರ ಮಾತುಗಳನ್ನು ಹೃದಯಭಾರಗೊಂಡು ಸ್ಮರಿಸಿದ್ದಾರೆ.

### ಹೊರ ರಾಜ್ಯಗಳಲ್ಲಿ ಕಾಂಗ್ರೆಸ್ ಸಂಘಟನೆ - ಕರ್ನಾಟಕ ಏಕೀಕರಣದ ಅಂಕುರ

ಏಪ್ರಿಲ್ 1939ರಲ್ಲಿ ನಡೆದ ವಿದುರಾಶ್ವತ್ಥದ ಅಧಿವೇಶನದಲ್ಲಿ ಹೆಚ್.ಸಿ. ದಾಸಪ್ಪನವರು ಅಧ್ಯಕ್ಷರಾದರು. ಅವರ ಸಾಮರ್ಥ್ಯದಲ್ಲಿ ಸಿದ್ದಲಿಂಗಯ್ಯನವರಿಗೆ ಅಪಾರ ನಂಬಿಕೆ ಇತ್ತು. ಹಾಗಾಗಿ ಸಂಸ್ಥಾನ ಕಾಂಗ್ರೆಸಿನ ಎಲ್ಲ ಕಾರ್ಯಭಾರವನ್ನು ಹೆಚ್.ಸಿ. ದಾಸಪ್ಪನವರಿಗೆ ವಹಿಸಿ ತಾವು ವಿಶ್ರಾಂತರಾಗಬಯಸಿದರು. ಆ ಸಮಯದಲ್ಲಿ ಧಾರವಾಡ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಗೆ ಹೊಸಮನಿ ಸಿದ್ದಪ್ಪನವರು ಅಧ್ಯಕ್ಷರಾಗಿದ್ದರು. ಸಿದ್ದಲಿಂಗಯ್ಯನವರ ಸಾಮರ್ಥ್ಯ ಕಂಡ ಇಳಿವಯಸ್ಸಿನ ಹೊಸಮನಿಯವರು ತಮ್ಮ ಕಾಂಗ್ರೆಸ್ ಸೇವೆಯಲ್ಲಿ ನೆರವಾಗಲೆಂದು ಬಯಸಿ ಸಿದ್ದಲಿಂಗಯ್ಯನವರನ್ನು ಧಾರವಾಡ ಕೆ.ಪಿ.ಸಿ.ಸಿ.ಗೆ ಆಮಂತ್ರಿಸಿ ಅವರನ್ನು ಅಲ್ಲಿನ ಉಪಾಧ್ಯಕ್ಷರನ್ನಾಗಿ ನೇಮಿಸಿದರು. ಇಲ್ಲಿ ಸಿದ್ದಲಿಂಗಯ್ಯನವರಿಗೆ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ (ಮತ್ತೊಬ್ಬ ಉಪಾಧ್ಯಕ್ಷರು) ಮತ್ತು ಎನ್.ಎಸ್. ಹರ್ಡೀಕರ್ (ಕಾರ್ಯದರ್ಶಿ) ಇವರ ಸಂಗವೂ ಲಭ್ಯವಾಗಿತ್ತು. ಸುಮಾರು ಆರು ತಿಂಗಳು ಅಲ್ಲಿ ಶ್ರಮಿಸಿ ಸೆಪ್ಟೆಂಬರ್ 1939 ರಲ್ಲಿ ಅವರು ಭಾರತ ಎರಡನೇ ಮಹಾ ಯುದ್ಧದಲ್ಲಿ ಭಾಗಿಯಾಗಿರುವುದರ ವಿರುದ್ಧ ಸತ್ಯಾಗ್ರಹವನ್ನು ಸಂಘಟಿಸಲು ಬೆಂಗಳೂರಿಗೆ ಬಂದಿದ್ದರು.

ಮೈಸೂರಿನ ಬನಪ್ಪ ಪಾರ್ಕಿನಲ್ಲಿ ಈ ಸಂದರ್ಭವಾದ ಸಭೆಯಲ್ಲಿ ಭಾಷಣ ಮಾಡುತ್ತಿರುವಾಗ ಇವರನ್ನು ಬಂಧಿಸಿ ನಂತರ ಒಂದು ವರ್ಷ ಸೆರೆವಾಸ ವಿಧಿಸಲಾಯಿತು. ಆದರೆ 1940ರಲ್ಲಿ ಮಹಾರಾಜ ಜಯಚಾಮರಾಜೇಂದ್ರ ಒಡೆಯರ್‌ರವರ ವಿವಾಹ ಸಂದರ್ಭದಲ್ಲಿ ಕ್ಷಮಾದಾನ ನೀಡಿ ಬಿಡುಗಡೆ ಮಾಡಲಾಯಿತು. ಆ ನಂತರ ಅವರು ಧಾರವಾಡ ಕೆ.ಪಿ.ಸಿ.ಸಿ.ಗೆ ಮರಳಿದರು.

ಮೈಸೂರು ಕಾಂಗ್ರೆಸಿನ ವಿಜಯಗಾಥವನ್ನು ಕೇಳಿದ ಧಾರವಾಡ ಕೆ.ಪಿ.ಸಿ.ಸಿ ಕಾಂಗ್ರೆಸ್ ಚಳುವಳಿಯನ್ನು ಇತರ ಸಣ್ಣ ಸಣ್ಣ ರಾಜಾಳ್ವಿಕೆಯ ಸಂಸ್ಥಾನಗಳಲ್ಲೂ ಸಂಘಟಿಸಲು ಇಚ್ಛಿಸಿತು. ಜಮಖಂಡಿ, ಮುಧೋಳ, ರಾಮದುರ್ಗ, ಸವಣೂರು ಮುಂತಾದ ಹದಿನೇಳು ಸಣ್ಣ ಹೊರ ರಾಜ್ಯಗಳಿಗೆ ಭೇಟಿ ಇತ್ತು ಅಲ್ಲಿ ಸ್ಥಳೀಯ ಕಾಂಗ್ರೆಸ್ ಸಂಸ್ಥೆಗಳನ್ನು ಸ್ಥಾಪಿಸಿದ ಕೀರ್ತಿ ಸಿದ್ದಲಿಂಗಯ್ಯನವರಿಗೆ ಸಲ್ಲುತ್ತದೆ. 1940ರಲ್ಲಿ ನಡೆದ ಜಮಖಂಡಿ ಕಾಂಗ್ರೆಸ್ ಅಧಿವೇಶನ ಸಿದ್ದಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಜರುಗಿದ್ದು ಮತ್ತೊಂದು ವಿಶೇಷ. ಇಲ್ಲಿ ಅವರಿಗೆ ಶ್ರೀ ಬಿ.ಡಿ. ಜತ್ತಿಯವರ ಒಡನಾಟ ದೊರೆತಿತ್ತು. ಜಮಖಂಡಿ ಕಾಂಗ್ರೆಸ್ ಅಧಿವೇಶನದಲ್ಲಿ

ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದ ಬಿ.ಡಿ. ಜತ್ತಿಯವರ ಬಗ್ಗೆ ಸಿದ್ದಲಿಂಗಯ್ಯನವರಿಗೆ ತುಂಬು ಅಭಿಮಾನ. ಸಿದ್ದಲಿಂಗಯ್ಯ ಅವರನ್ನು ಆಧ್ಯಾತ್ಮಿಕತೆ ಮತ್ತು ನೈತಿಕತೆಯನ್ನು ಜಗತ್ತಿಗೆ ಸಾರಲು ಅವತರಿಸಿರುವ ದೇವದೂತನೆಂದು ಗೌರವಾದರಗಳಿಂದ ಸ್ಮರಿಸಿದ್ದಾರೆ.

ಈ ಎಲ್ಲ ಹೊರರಾಜ್ಯಗಳಲ್ಲಿ ಸಿದ್ದಲಿಂಗಯ್ಯನವರು ಪ್ರವಾಸ ಮಾಡಿ ಕಾಂಗ್ರೆಸ್ ಸದಸ್ಯತ್ವವನ್ನು ಬೆಳೆಸಿ ಸಾರ್ವಜನಿಕ ಸಭೆಗಳಲ್ಲಿ ಭಾಷಣಗಳನ್ನು ಮಾಡಿದರು. ರಾಮದುರ್ಗ ಸಂಸ್ಥಾನದಲ್ಲಿ ಮಾತ್ರ ಈ ಚಳುವಳಿ ಸುಗಮವಾಗಿರಲಿಲ್ಲವೆಂದು ಹೇಳಿ ಅಲ್ಲಿನ ಎಂ.ಪಿ. ಮುನವಳ್ಳಿಯವರು ಈ ಕಾರಣಕ್ಕಾಗಿ ಗಲ್ಲು ಏರಬೇಕಾಗಿ ಬಂದಿದ್ದ ವೈಪರೀತ್ಯವನ್ನು ಸ್ಮರಿಸಿಕೊಳ್ಳುತ್ತಾರೆ. ಈ ಕಾರ್ಯ ಕರ್ನಾಟಕ ಏಕೀಕರಣದ ಬೀಜಾಂಕುರವಾಯಿತೆಂದರೆ ಅತಿಶಯೋಕ್ತಿಯಾಗಲಾರದು. ಕರ್ನಾಟಕ ಕಾಂಗ್ರೆಸಿನ ಕಾರ್ಯಕರ್ತರಾಗಿದ್ದ ಹುಕ್ಕೇರಿಕರ್. ಕಮಲಾದೇವಿ, ಆರ್.ಆರ್. ದಿವಾಕರ, ಶ್ರೀನಿವಾಸ ಇವರುಗಳನ್ನು ಕೆಪಿಸಿಸಿಗೆ ಚುನಾಯಿಸುವ ವಿಶೇಷ ಅವಕಾಶ ಮೈಸೂರು ಸಂಸ್ಥಾನದ ದೊಡ್ಡಬಳ್ಳಾಪುರ, ದೇವನಹಳ್ಳಿ, ಯಲಹಂಕ, ನೆಲಮಂಗಲ ಕ್ಷೇತ್ರಗಳಿಗೆ ಲಭ್ಯವಾಗಿತ್ತು. ಕರ್ನಾಟಕದ ಏಕೀಕರಣ 1934-35ರಲ್ಲಿ ಹೀಗೆ ಸಾಧಿತವಾಗಿತ್ತೆನ್ನಬಹುದಲ್ಲವೆ ? ರಾಜಕೀಯ ವಿಷಯಗಳಲ್ಲೇ ಅಲ್ಲದೆ ವೈಯಕ್ತಿಕ ವಿಷಯಗಳಲ್ಲೂ ಸಿದ್ದಲಿಂಗಯ್ಯನವರು ಮೈಸೂರು ಕರ್ನಾಟಕ ಪ್ರಾಂತ್ಯಗಳನ್ನು ಏಕೀಕರಿಸಿದ್ದಾರೆ. 1951ರಲ್ಲಿ ತಮ್ಮ ಏಕೈಕ ಪುತ್ರಿ ಟಿ.ಎಸ್. ಸರೋಜಮ್ಮ ಇವರನ್ನು ಮುಂಬೈ ಕರ್ನಾಟಕದ ಸಚಿವರಾಗಿದ್ದ ಬೆಳಗಾವಿಯ ಎಂ.ಪಿ. ಪಾಟೀಲ್ ರವರ ಪುತ್ರ ಶಿವನಗೌಡ ಪಾಟೀಲ್‌ರಿಗೆ ಕೊಟ್ಟು ವಿವಾಹ ಮಾಡಿ ಉತ್ತರ ಕರ್ನಾಟಕದೊಂದಿಗೆ ಧಾರ್ಮಿಕ ಬಾಂಧವ್ಯವನ್ನು ಸಾಧಿಸಿದವರು ಸಿದ್ದಲಿಂಗಯ್ಯ.

ಕರ್ನಾಟಕ ಏಕೀಕರಣದ ಸಾರ್ಥಕ ಕಾರ್ಯದಲ್ಲಿ ಕೆಂಗಲ್ ಹನುಮಂತಯ್ಯನವರ ಸಂಕಲ್ಪಕ್ಕೆ ಹೃತ್ಪೂರ್ವಕ ಬೆಂಬಲ ನೀಡಿ ಸದಾ ಅವರೊಂದಿಗಿದ್ದ ಸಹವರ್ತಿ ಎಂದರೆ ಸಿದ್ದಲಿಂಗಯ್ಯನವರೇ. ಸಿದ್ದಲಿಂಗಯ್ಯನವರು ಕರ್ನಾಟಕ ಏಕೀಕರಣ ಸಮಿತಿಯ ಅಧ್ಯಕ್ಷರಾಗಿಯೂ ಶ್ರಮಿಸಿದವರು. ಕರ್ನಾಟಕ ಏಕೀಕರಣದ ವಿರೋಧಿಗಳೂ ನಮ್ಮಲ್ಲಿದ್ದರು. ಏಕೀಕರಣದ ಪ್ರಶ್ನೆಯನ್ನು ಕೇಂದ್ರ ಸರ್ಕಾರ ಗೋವಿಂದವಲ್ಲಭ ಪಂತರ ನಿಷ್ಕರ್ಷೆಗೆ ಬಿಟ್ಟ ಸಂದರ್ಭದಲ್ಲಿ ಏಕೀಕರಣ ವಿರೋಧಿಗಳು ಪಂತ್ ರವರನ್ನು ಭೇಟಿಯಾಗಿ ತಮ್ಮ ನಿಲುವನ್ನು ವಿವರಿಸಿದ್ದರು. ಆ ಹಿನ್ನೆಲೆಯಲ್ಲಿ ಪಂತ್‌ರವರು ಹನುಮಂತಯ್ಯನವರು ಒಪ್ಪಿದ ಪಕ್ಷಕ್ಕೆ ಎರಡು ಪ್ರತ್ಯೇಕ ಕನ್ನಡ ರಾಜ್ಯ ಸ್ಥಾಪಿಸಲು ತನ್ನ ಆಕ್ಷೇಪವೇನೂ ಇಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಿದ ಸಂದರ್ಭದಲ್ಲಿ ಧರ್ಮ ಪ್ರಕಾಶ ರುದ್ರಯ್ಯ ನವರು ಏಕೀಕರಣದ ಪರವಾಗಿ ವಾದಿಸಲು ನಿಯೋಜಿಸಿ ಕಳುಹಿಸಿದ ತ್ರಿಸದಸ್ಯ ಸಮಿತಿಯಲ್ಲಿ ಸಿದ್ದಲಿಂಗಯ್ಯನವರು ಪ್ರಧಾನರು. ಇಂಥ ಒಂದು ಪ್ರತಿ ನಿಯೋಜನೆ ಏರ್ಪಡದಿದ್ದರೆ ಎರಡು ಕನ್ನಡ ರಾಜ್ಯಗಳು ಏರ್ಪಡುವುದು ಶತಃಸಿದ್ಧವಾಗಿತ್ತೆಂದು ಸಿದ್ದಲಿಂಗಯ್ಯನವರು ಹೇಳಿದ್ದಾರೆ.

ಈ ಸಂಘಟನಾ ಕಾರ್ಯ ಸಿದ್ದಲಿಂಗಯ್ಯನವರಿಂದ ಅವ್ಯಾಹತವಾಗಿ ನಡೆದೇ ಇದ್ದಿತು. ಆದರೆ 1941ರ ಉತ್ತರಾರ್ಧ ಭಾಗದಲ್ಲಿ ಶಿವಮೊಗ್ಗದ ರಾಮಣ್ಣ ಪಾರ್ಕಿನಲ್ಲಿ ಇವರು ಮಾಡಿದ ಭಾಷಣಕ್ಕಾಗಿ ಇವರನ್ನು ತಪ್ಪಿತಸ್ಥರನ್ನಾಗಿ ಮಾಡಿ ಒಂದು ವರ್ಷಗಳ ಕಾಲ ಸೆರೆವಾಸ ವಿಧಿಸಿ ಬೆಂಗಳೂರು ಸೆಂಟ್ರಲ್ ಜೈಲಿಗೆ ರವಾನಿಸಲಾಯಿತು. ಆಗಸ್ಟ್ 1942ರಲ್ಲಿ 'ಕ್ವಿಟ್ ಇಂಡಿಯಾ' ಚಳುವಳಿ ಪ್ರಾರಂಭವಾಯಿತು. ಆ ಅವಧಿಯಲ್ಲಿ ಸಿದ್ದಲಿಂಗಯ್ಯ ಜೈಲಿನಲ್ಲೇ ಇದ್ದರು. 1943ರ

ಫೆಬ್ರವರಿ ತಿಂಗಳಲ್ಲಿ ಶಿಕ್ಷಾವಧಿ ಮುಗಿದು ಹೊರಬಂದಾಗ ಸಿದ್ದಲಿಂಗಯ್ಯ ನಿಜಕ್ಕೂ ವಿಶ್ರಾಂತ ಜೀವನವನ್ನು ಬಯಸಿ ಊರಿಗೆ ಬಂದರು. ಅಲ್ಲಿ ರುಮಾಲೆ ಚನ್ನಬಸವಯ್ಯನವರೊಂದಿಗೆ ಕೆಲದಿನಗಳು ಕಳೆದು ಯಾರಿಗೂ ತಿಳಿಸದೆ ಅಜ್ಞಾತವಾಸಕ್ಕೆ ತೆರಳಿದರು. ಅವರು ಎಲ್ಲಿದ್ದರೆಂಬುದು ಯಾರಿಗೂ ತಿಳಿಯಲಿಲ್ಲ ಮತ್ತೆ ಅವರು ಊರಿಗೆ ಬಂದದ್ದು 1946ರಲ್ಲಿ. ಈ ಮೂರು ವರ್ಷಗಳನ್ನು ಅವರು ತಪಸ್ವಿ ಬಾಬಾರವರ ರಾಜಾಸ್ಥಾನದ ಮೂಲ ಆಶ್ರಮದಲ್ಲಿ ಕಳೆದು ಬಂದಿದ್ದರು. ರಾಜಕೀಯದಿಂದ ನಿವೃತ್ತಿ ಹೊಂದಬೇಕೆಂಬ ತಮ್ಮ ಬಯಕೆಯನ್ನು ಸಿದ್ದಲಿಂಗಯ್ಯ ಬಾಬಾರವರ ಮುಂದಿಟ್ಟಾಗ ಅವರು ಅದನ್ನು ಒಪ್ಪದೆ ಸಮಾಜ ಸೇವೆಯನ್ನು ಪೂರ್ತಿಗೊಳಿಸಿ ಬರಲು ಸಿದ್ದಲಿಂಗಯ್ಯನವರಿಗೆ ಆದೇಶಿಸಿದರಂತೆ. ಹಾಗಾಗಿ ಸಿದ್ದಲಿಂಗಯ್ಯನವರು 1946ಕ್ಕೆ ಮತ್ತೆ ತಮ್ಮನ್ನು ತಾವು ರಾಜಕೀಯದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡರು.

ಇಷ್ಟು ಕಾಲ ಈ ಅಜ್ಞಾತವಾಸ ಕಳೆದರೂ ಮೈಸೂರು ಸಂಸ್ಥಾನದಲ್ಲಿ ಇನ್ನೂ ನಿಜವಾದ ಪ್ರಜಾಸತ್ತೆ ಏರ್ಪಟ್ಟಿರಲಿಲ್ಲ. ವಿದುರಾಶ್ವತ್ಥ ಪ್ರಸಂಗದ ನಂತರ ಏರ್ಪಟ್ಟ ಒಪ್ಪಂದದಂತೆ ನಡೆದುಕೊಳ್ಳಲು ದಿವಾನ್ ಮಿರ್ಜಾ ತಪ್ಪಿದ್ದರು. ಆ ವೇಳೆಗೆ ದಿವಾನ್ ಮಿರ್ಜಾರವರ ಅಧಿಕಾರಾವಧಿ ಮುಗಿದು ಅವರ ಜಾಗದಲ್ಲಿ ದಿವಾನ್ ಸರ್. ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್‌ರವರು ಅಧಿಕಾರವಹಿಸಿಕೊಂಡಿದ್ದರು. ವ್ಯಕ್ತಿ ಬದಲಾವಣೆಯಾದಾಗ್ಯೂ ದಿವಾನರು ಆಳ್ವಿಕೆಯ ಪ್ರಜಾವಿರೋಧೀ ಸರ್ವಾಧಿಕಾರ ಧೋರಣೆ ಮತ್ತು ಕಾರ್ಯನೀತಿಗಳಲ್ಲಿ ಏನೇನೂ ಬದಲಾವಣೆ ಕಂಡು ಬಂದಿರಲಿಲ್ಲ. ಕಾಂಗ್ರೆಸ್‌ನೊಂದಿಗಿನ ಒಪ್ಪಂದವನ್ನು ಮನ್ನಿಸುವುದಿರಲಿ ಸುಮಾರು 6-8 ವರ್ಷಗಳ ನಂತರ ಇಂತಹ ಒಪ್ಪಂದ ಏರ್ಪಟ್ಟಿತ್ತೆಂಬುದನ್ನೇ ದಿವಾನರು ನಿರಾಕರಿಸಹತ್ತಿದ್ದರು. ಒಪ್ಪಂದವನ್ನು ಪಾಲಿಸದೇ ಹೋದದ್ದು ದಿವಾನರ ಕೃತ್ರಿಮದ ಮೊದಲನೆ ಆಯಾಮವಾದರೆ ಒಪ್ಪಂದವೇ ಆಗಲಿಲ್ಲವೆಂದು ಸಾಧಿಸುವುದು ಅದರ ಎರಡನೇ ಆಯಾಮವಾಗಿತ್ತು. ಮುಂದಿನ ಆಯಾಮಗಳು ಇನ್ನೂ ತೀಕ್ಷ್ಣತರವಾದುವು. ಒಡಕಿಲ್ಲದೆ ಒಮ್ಮತದಿಂದ ಕಾರ್ಯ ಸಾಧಿಸುತ್ತಿದ್ದ ಕಾಂಗ್ರೆಸ್‌ನಲ್ಲಿ ಸ್ವಾರ್ಥ ಸಾಧಕರನ್ನು ಗುರ್ತಿಸಿ ತನ್ನಕಡೆಗೆಳೆದುಕೊಂಡು ತಾನೂ ಆ ಗುಂಪಿನಲ್ಲಿ ನುಸುಳಿ ಹತೋಟಿಯನ್ನು ಸಾಧಿಸಿ ಪ್ರಾಮಾಣಿಕ ವ್ಯಕ್ತಿಗಳನ್ನು ಹೊರಗೆ ಹಾಕಿ ಪ್ರಜಾಹಿತವನ್ನು ಗಾಳಿಗೆ ತೂರಿ ತಮ್ಮ ಹರಮಾರಿತನವನ್ನು ಸಾಧಿಸಿಕೊಂಡ ದಿವಾನರ ಜಾಣ್ಮೆಗೆ ಮೆಚ್ಚಬೇಕೋ ಅವರ ಈ ಕೃತ್ರಿಮ ಸಾಧನೆಯ ಅರಿವಿಲ್ಲದೆ ತನ್ನ ಮನೆಗೆ ತಾನೇ ಬೆಂಕಿ ಹಚ್ಚಿಕೊಳ್ಳುವ ಸ್ವಾರ್ಥ ಕಾಂಗ್ರೆಸಿಗರ ಕಿಡಿಗೇಡಿನತಕ್ಕೆ ದುಃಖಿಸಬೇಕೋ ಎನ್ನುವಂಥ ಪರಿಸ್ಥಿತಿ ಒದಗಿಬಂದುದು ನಿಜಕ್ಕೂ ದುರದೃಷ್ಟಕರ.

## ಸ್ವಾತಂತ್ರ್ಯಾನಂತರದ ರಾಜಕೀಯ

ಸ್ವತಂತ್ರ ಮೈಸೂರು ಸಂಸ್ಥಾನದ ಪ್ರಥಮ ಪ್ರಜಾಸರ್ಕಾರ ಸೆರೆಮನೆಯಿಂದ ದಿವಾನರೊಂದಿಗೆ ರಹಸ್ಯ ಸಂಧಾನ ನಡೆಸಿದ ಸ್ವಾರ್ಥ ಸಾಧಕರ ಕೂಟವಾಯಿತು. ಸ್ವತಂತ್ರ ನಾಡಿನ ಪ್ರಜೆಗಳ ಅಶೋತ್ತರಗಳಿಗೂ ಪ್ರಥಮ ಗಣತಂತ್ರ ಸರ್ಕಾರದ ಸಾಧನೆಗೂ ಅಜಗಜಾಂತರ. ಆಡಳಿತದ ಚುಕ್ಕಾಣಿ ಹಿಡಿದವರು ದಿವಾನರ ಕೃಪಾಶ್ರಯವನ್ನಲಂಬಿಸಿ ಸರ್ಕಾರವನ್ನು ನಡೆಸಹತ್ತಿದ್ದರು.

ಕಾಂಗ್ರೆಸಿನ ಅನೇಕರು ಈ ಆಡಳಿತ ವೈಖರಿಯನ್ನು ವಿರೋಧಿಸುತ್ತಿದ್ದರೂ ಮಂತ್ರಿ ಮಂಡಲವನ್ನು ಉರುಳಿಸುವ ಪ್ರಯತ್ನಕ್ಕೆ ಯಾರೂ ಕೈ ಹಾಕಲಿಲ್ಲ. ಕಾರಣ ಗಾಂಧೀಜಿಯವರು ಹೇಳಿದಂತೆ 'ಪರಕೀಯರ ಸುರಾಜಕತೆಗಿಂತಲೂ ನಮ್ಮೊಳಗಿನ ಅರಾಜಕತೆಯೇ ಶ್ರೇಯಸ್ಕರ' ವೆಂದು ನಂಬಿದ್ದರು. ಜೊತೆಗೆ ಮೊದಲನೇ ಸರ್ಕಾರವೇ ದುರಂತಕ್ಕೆ ಸಿಗದಿರಲೆಂಬ ವಿಶಾಲ ಭಾವನೆ. ಸಿದ್ದಲಿಂಗಯ್ಯನವರು ಪಂಡಿತ ನೆಹರುರವರೊಂದಿಗೆ ಸಮಾಲೋಚಿಸಿ ಪರಿಸ್ಥಿತಿಯನ್ನು ವಿವರಿಸಿದರೂ ಸ್ಥಳೀಯ ಆಡಳಿತ ವೈಖರಿ ಬದಲಾಗಲಿಲ್ಲ. ಕೆಂಗಲ್ ಹನುಮಂತಯ್ಯನವರಂತೂ ಸರ್ಕಾರವನ್ನು ಉರುಳಿಸುವುದರಲ್ಲಿ ಕಿಂಚಿತ್ತು ನಂಬಿಕೆ ಇಟ್ಟವರಲ್ಲ. ಆಳುವ ಪಕ್ಷ ಸಂಪೂರ್ಣ ವಿಫಲವಾದ ಪಕ್ಷದಲ್ಲಿ ಮಾತ್ರ ಪರ್ಯಾಯ ವ್ಯವಸ್ಥೆ ನೀಡುವ ಬುದ್ಧಿ ಸಾಮರ್ಥ್ಯವುಳ್ಳ ಮುತ್ಸದ್ದಿಯಾಗಿದ್ದರು. ಹಾಗಾಗಿ ಸರ್ಕಾರ ಉರುಳಿ ಬೀಳುವ ಭಯವಿಲ್ಲದಿದ್ದರೂ ತಮ್ಮ ಅಸಮರ್ಪಕತೆಯ ಅರಿವು ಅಂದಿನ ಸರ್ಕಾರದ ಸಚಿವರಲ್ಲಿ ಇಲ್ಲದಿರಲಿಲ್ಲ. ಪ್ರಾಮಾಣಿಕರನ್ನು ಕಡೆಗಣಿಸಲಾಯಿತೆಂಬ ನಿಂದೆಯನ್ನು ದೂರಮ್ಮಾಡಲೋಸುಗವಷ್ಟೇ ಸಿದ್ದಲಿಂಗಯ್ಯನವರನ್ನು ಮಂತ್ರಿ ಮಂಡಲದಲ್ಲಿ ಉಪ ಮುಖ್ಯಮಂತ್ರಿಯಾಗಲು ಆಮಂತ್ರಿಸಲಾಯಿತು. ಸಿದ್ದಲಿಂಗಯ್ಯನವರು ಸ್ವಭಾವತಃ ತಾನಾಗಿ ಯಾವುದನ್ನು ಹುಡುಕಿಕೊಂಡು ಹೋಗುವವರಲ್ಲ, ತಾನಾಗಿ ಬಂದುದನ್ನು ದೂರ ಮಾಡುವವರೂ ಅಲ್ಲ. ಬೇಕು - ಬೇಡ ಎನ್ನದ ನಿರ್ಲಿಪ್ತ.

ಆದರೆ ಸಿದ್ದಲಿಂಗಯ್ಯನವರಿಗಿಂತಲೂ ತಾವು ಹಿರಿಯರೆಂಬ ದುರಭಿಮಾನ ಹೊತ್ತ ಒಬ್ಬಿಬ್ಬರು ಸಿದ್ದಲಿಂಗಯ್ಯನವರಿಗೆ ತಮಗಿಂತಲೂ ಉನ್ನತ ಸ್ಥಾನ ದೊರಕುವುದನ್ನು ಮೊಂಡುತನದಿಂದ ಪ್ರತಿಭಟಿಸಿದರು. ಸರ್ದಾರ್ ಪಟೇಲರ ಉಪದೇಶದಿಂದಲೂ ಪ್ರಯೋಜನವಾಗಲಿಲ್ಲ. ಈ ಪರಿಸ್ಥಿತಿಯಲ್ಲಿ ಸರ್ಕಾರ ರಾಜಿನಾಮೆ ನೀಡುವಷ್ಟು ಡೋಲಾಯಮಾನವಾಯಿತು. ಆಗ ಸಿದ್ದಲಿಂಗಯ್ಯನವರು ಸಹಾನುಭೂತಿಯಿಂದಲೂ, ಮೊದಲ ಮಂತ್ರಿಮಂಡಲವನ್ನು ಅವಧಿ ಪೂರ್ಣಗೊಳ್ಳುವವರೆಗೆ ಎತ್ತಿ ನಿಲ್ಲಿಸುವ ಆದರ್ಶದಿಂದಲೂ ಸಂಪ್ರೇರಿತರಾಗಿ ಇವರು ಉಪ ಮುಖ್ಯ ಮಂತ್ರಿಯಾಗುವುದನ್ನು ಪ್ರತಿಭಟಿಸಿದ ವ್ಯಕ್ತಿಗಳಿಗಿಂತ ಕೆಳಗಿನ ಸಚಿವಸ್ಥಾನದಲ್ಲಿರಲು, ಹನುಮಂತಯ್ಯನವರ ಎಚ್ಚರಿಕೆಯ ಮಾತುಗಳನ್ನೂ ಲೆಕ್ಕಿಸದೆ, ಕೆ.ಸಿ. ರೆಡ್ಡಿಯವರ ಕೋರಿಕೆಯನ್ನು ಮನ್ನಿಸಿ ಒಪ್ಪಿಕೊಂಡರು. ಹಾಗಾಗಿ 6.2.1950ರಂದು ಅವರು ಮೊದಲ ಸಚಿವ ಸಂಪುಟದಲ್ಲಿ ಶಿಕ್ಷಣ ಹಾಗೂ ಆರೋಗ್ಯ ಖಾತೆಯ ಸಚಿವರಾಗಿ ಸೇರಿದರು. ಇದರಿಂದ ಪ್ರಯೋಜನಾಗಿದ್ದು ಪಟ್ಟಭದ್ರ ಹಿತಾಸಕ್ತಿಗಳಿಗೆ ಮಾತ್ರ. ಕೊನೆಗೆ ಕೇವಲ ಹತ್ತು ತಿಂಗಳ ಕಾಲ ಹೆಸರಿಗೆ ಮಾತ್ರ ಸಚಿವರಾಗಿದ್ದು ನಂತರ ರಾಜಿನಾಮೆ ನೀಡಿ ಸಂಪುಟದಿಂದ ಹೊರಬಿದ್ದರು.

ಇದರ ಕಾರಣವನ್ನು ವಿಧಾನ ಸಭೆಯಲ್ಲಿ ಅನೇಕ ಸದಸ್ಯರು ನಿರ್ದಿಷ್ಟವಾಗಿ ಪ್ರಶ್ನೆ ಎತ್ತಿದಾಗ್ಯೂ ಯಾವುದೇ ವಿವರಣೆ ನೀಡಲು ಅವರು ಇಚ್ಛಿಸಲಿಲ್ಲ. ತಮ್ಮ ನೆನಪುಗಳ ದಾಖಲೆಯಲ್ಲಿ ಮಾತ್ರ "ನಾನು ರಾಜಕೀಯ ಚದುರಂಗದಲ್ಲಿ ಪಗಡೆಕಾಯಿ ಮಾತ್ರವಾಗಿದ್ದೆ. ಸಮಕಾಲೀನ ರಾಜಕೀಯದ ಆಟದಲ್ಲಿ ಗೆಲ್ಲುವ ಸಾಮರ್ಥ್ಯ ನನಗಿರಲಿಲ್ಲ" ಎಂದಿಷ್ಟೇ ಹೇಳಿಕೊಂಡಿದ್ದಾರೆ. ಈ ಅವಧಿಯಲ್ಲಿ ಇವರ ಆಪ್ತ ಸಹಾಯಕರಾಗಿ ಕೆಲಸ ಮಾಡಿದ ಶ್ರೀ ಹರಿನಾರಾಯಣ್‌ರವರು "ಇನ್ನೂ ಉತ್ತಮ ಸರ್ಕಾರವನ್ನು ರಚಿಸುವ" ಉದ್ದೇಶದಿಂದ ಶ್ರೀಯುತರು ಸಚಿವ ಪದವಿಗೆ

ರಾಜೀನಾಮೆ ಇತ್ತರೆಂದು ಹೇಳಿರುವುದು ಗಮನಾರ್ಹ. ಈ ವೇಳೆಗಾಗಲೇ ಕಾಂಗ್ರೆಸಿನ ಹೆಸರಿಗೆ ಸಾಕಷ್ಟು ಕಳಂಕ ತಟ್ಟಿತ್ತು. ಕಾಂಗ್ರೆಸ್ ಅಧ್ಯಕ್ಷನಾಗಿ ಉತ್ತಮ ಆಡಳಿತವನ್ನು ಕೊಡುವ ಜವಾಬ್ದಾರಿ ಹೊತ್ತ ಸಿದ್ದಲಿಂಗಯ್ಯನವರಿಗೆ ಈ ಸರ್ಕಾರದ ಕಾರ್ಯವೈಖರಿಯಿಂದ ನಾಚುವಂತಾಗಿತ್ತು. 1952ರಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆಯಬೇಕಾಗಿದ್ದರಿಂದ ಪ್ರಜಾಹಿತದ ದೂರದೃಷ್ಟಿಯಿಂದ ಒಂದು ಕೆಟ್ಟ ವ್ಯವಸ್ಥೆಯನ್ನು ತಾಳಿಕೊಂಡಂತಾಯಿತು ಸ್ವತಂತ್ರ ಮೈಸೂರಿನ ಮೊದಲ ಸ್ವಾತಂತ್ರಾನುಭವ.

1952ರಲ್ಲಿ ಪ್ರಜಾ ತಂತ್ರದ ಮೊದಲ ಸಾರ್ವತ್ರಿಕ ಚುನಾವಣೆ ನಡೆಯಿತು. ಸಿದ್ದಲಿಂಗಯ್ಯನವರು ಬೇರೆಲ್ಲರಿಗಿಂತಲೂ ಹೆಚ್ಚಿನ ಮತ ಪ್ರಮಾಣವನ್ನು ಗಳಿಸಿ ಗೆದ್ದುಬಂದರು. ಜವಾಹರಲಾಲ್ ನೆಹರೂ ರವರಿಗಿಂತಲೂ ಹೆಚ್ಚು ಶೇಕಡಾಂಶ ಮತಗಳು ದೊರೆತಿದ್ದುವು. ಈ ಬಾರಿ ಕೆಂಗಲ್ ಹನುಮಂತಯ್ಯನವರ ನೇತೃತ್ವದಲ್ಲಿ ಗಣತಂತ್ರ ಸರ್ಕಾರದ ಪ್ರಥಮ ಸಚಿವ ಸಂಪುಟ ರಚನೆಯಾಯಿತು. ಅದರಲ್ಲಿ ಸಿದ್ದಲಿಂಗಯ್ಯನವರು ಕೈಗಾರಿಕೆ ಮತ್ತು ವಾಣಿಜ್ಯ ಖಾತೆಯ ಮಂತ್ರಿಗಳಾಗಿ ನೇಮಕಗೊಂಡರು. ಆದರೆ ಕಾಂಗ್ರೆಸ್‌ನೊಳಗಿನ ಸ್ವಾರ್ಥಸಾಧಕರು, ಅಧಿಕಾರ ಪಿಪಾಸುಗಳು ಕೆಂಗಲ್‌ರ ಮಂತ್ರಿ ಮಂಡಲದ ವಿರುದ್ಧ ಒಳಗಿಂದೊಳಗೆ ಪಿತೂರಿ ನಡೆಸಿ ಶುದ್ಧ ಆಡಳಿತ ನೀಡುವುದಕ್ಕೆ ಸಾವಿರ ಆತಂಕಗಳನ್ನೊಡ್ಡಿದರು.

ಹನುಮಂತಯ್ಯನವರ ದಕ್ಷತೆ ಪ್ರಾಮಾಣಿಕತೆಗಳನ್ನು ಕೇಳರಿಯದವರಿಲ್ಲ. 'ವಿಧಾನ ಸೌಧ' 'ಏಕೀಕೃತ ಕರ್ನಾಟಕ ರಾಜ್ಯ' ಇವರ ಶುದ್ಧ ಹಾಗೂ ದೃಢ ಸಂಕಲ್ಪಗಳ ಪ್ರತೀಕವಾಗಿ ನಿಂತಿವೆ. ಆದರೆ ಈ ಘನ ಕಾರ್ಯಗಳಿಗಾಗಿ ಕೆಂಗಲ್‌ರು ತಮ್ಮ ರಾಜಕೀಯ ಭವಿಷ್ಯವನ್ನೇ ಬಲಿಕೊಡಬೇಕಾಯಿತು. ಇದೇ ಕಾರಣವಾಗಿ ಹನುಮಂತಯ್ಯನವರ ವಿರುದ್ಧ ಇಲ್ಲ ಸಲ್ಲದ ಆರೋಪಗಳನ್ನು ಸೃಷ್ಟಿಸಿದ್ದಾಯಿತು. ಹನುಮಂತಯ್ಯನವರ ಆದರ್ಶವನ್ನು ಬೆಂಬಲಿಸುವರೆಂಬ ಒಂದೇ ಕಾರಣಕ್ಕೆ ಸಿದ್ದಲಿಂಗಯ್ಯನವರು ಈ ಸ್ವಾರ್ಥ ಸಾಧಕರ ಗೃಧ ದೃಷ್ಟಿಗೆ ಬಿದ್ದವರಾದರು.

ಸಿದ್ದಲಿಂಗಯ್ಯ ಕೈಗಾರಿಕಾ ಮಂತ್ರಿಯಾಗಿದ್ದಾಗ ವಿದ್ಯುಚ್ಛಕ್ತಿ ಸಾಗಣೆಗೆ ಅವಶ್ಯಕವಾಗಿದ್ದ ತಾಮ್ರದ ತಂತಿಯನ್ನು ಅದು ಲಭ್ಯವಿದ್ದ ದೂರದ ಸ್ಥಳದಿಂದ ಬೆಂಗಳೂರಿಗೆ ತರಿಸಲು ಎಲ್ಲ ಸರ್ಕಾರಿ ಕ್ರಮಗಳನ್ನು ಅನುಸರಿಸಿ ಅತಿ ಕಡಿಮೆ ದರದಲ್ಲಿ ಚೌಡಪ್ಪ ಎಂಬ ಒಬ್ಬ ವ್ಯಕ್ತಿಗೆ ಕಾಂಟ್ರಾಕ್ಟ್ ನೀಡಲಾಯಿತು. ಚೌಡಪ್ಪ ಒಬ್ಬ ಯುವ ದೇಶಾಭಿಮಾನ ಕೂಡ. ಇವರು ಸಿದ್ದಲಿಂಗಯ್ಯನವರ ಊರಾದ ದೊಡ್ಡಬಳ್ಳಾಪುರದವರೇ ಆಗಿದ್ದುದು ಕಾಕತಾಳೀಯ. ಆದರೆ ಇದು ಸಂಭವಿಸಿದ್ದು ಪಿತೂರಿದಾರರಿಗೆ ಬಹಳ ಅನುಕೂಲವಾಗಿ ಒದಗಿಬಂತು. ಪಟ್ಟಭದ್ರ ಹಿತಾಸಕ್ತಿಗಳು ಇದಕ್ಕೆ ಮತ್ತಷ್ಟು ಬಣ್ಣ ಬಳಿದು ಸೂಕ್ಷ್ಮ ಸ್ವಭಾವದವರಾದ ಸಿದ್ದಲಿಂಗಯ್ಯನವರ ಬಗ್ಗೆ ಅಪವಾದದ ಮಾತುಗಳನ್ನಾಡಿ ಅಧಿಕಾರ ವಹಿಸಿಕೊಂಡ ಹತ್ತು ತಿಂಗಳಲ್ಲೇ ಅವರು ಮಂತ್ರಿ ಪದವಿಗೆ ರಾಜಿನಾಮೆ ನೀಡುವಂತೆ ಮಾಡುವುದರಲ್ಲಿ ಜಯಶೀಲರಾದರು. ಸಿದ್ದಲಿಂಗಯ್ಯನವರನ್ನು ಈ ಅವಹೇಳನಕ್ಕೆ ಗುರಿ ಮಾಡಿದುದು ಸಿದ್ದಲಿಂಗಯ್ಯನವರನ್ನು ಬಲ್ಲವರಿಗೆಲ್ಲ ದಿಗ್ಭ್ರಮೆಯನ್ನು ಉಂಟು ಮಾಡಿತು. ಈ ಬಗ್ಗೆ ಅನೇಕ ದಿನಪತ್ರಿಕೆಗಳು ಸಂಪಾದಕೀಯದಲ್ಲಿ ಈ ಬೆಳವಣಿಗೆಗಳನ್ನು ಖಂಡಿಸಿ ಬರೆದವು. ಅನೇಕ ರಾಷ್ಟ್ರ ನಾಯಕರು, ಮುತ್ಸದ್ದಿಗಳು ತಮ್ಮ ದಿಗ್ಭ್ರಮೆಯನ್ನು ವ್ಯಕ್ತಪಡಿಸಿ ಪತ್ರಗಳನ್ನು ಬರೆದರು. ಈ ಕೆಲವು

ದಾಖಲೆಗಳನ್ನು ಭಾಷಾಂತರಿಸಿ ಗ್ರಂಥದ ಕೊನೆಯ ಭಾಗಕ್ಕೆ ಜೋಡಿಸಲಾಗಿದೆ. ಸಿದ್ದಲಿಂಗಯ್ಯನವರ ಹಿತೈಷಿಗಳು ರಾಜಿನಾಮೆ ನೀಡಿದುದು ಕುತಂತ್ರಿಗಳ ಜಾಲಕ್ಕೆ ಬಿದ್ದಂತಾಯಿತೆಂದು ವ್ಯಥೆಪಟ್ಟರು. ಇಂತಹುದೇ ಕುಯುಕ್ತಿಗಳಿಂದ ಕೆಂಗಲ್ ಹನುಮಂತಯ್ಯನವರೂ ರಾಜಿನಾಮೆ ನೀಡುವಂತೆ ಮಾಡಿದರು. ಹನುಮಂತಯ್ಯನವರ ನಂತರ ಅಧಿಕಾರ ಸ್ಥಾನವನ್ನೇರಿದವರು ಸಿದ್ದಲಿಂಗಯ್ಯನವರ ವಿರುದ್ಧ ತನಿಖೆಯನ್ನು ಆಜ್ಞಾಪಿಸಿದರು. ಸಿದ್ದಲಿಂಗಯ್ಯನವರಂತಹ ಪ್ರಾಮಾಣಿಕ ಹಾಗೂ ಸರಳ ವ್ಯಕ್ತಿಯ ವಿರುದ್ದ ಇಂತಹ ಕೃತ್ರಿಮ ಆರೋಪಗಳನ್ನು ಹೇರಿದುದು ನಿಟ್ಟೂರು ಶ್ರೀನಿವಾಸರಾಯರಂತಹ ನ್ಯಾಯಪರರನ್ನು ಅವಾಕ್ಕು ಗೊಳಿಸಿತು. ಅವರು ಮತ್ತು ಡಾ: ಅಂಬೇಡ್ಕರ್‌ರವರೂ ಸಹ ಸಿದ್ದಲಿಂಗಯ್ಯನವರನ್ನು ಈ ಸುಳ್ಳು ಆರೋಪದಿಂದ ಮುಕ್ತರನ್ನಾಗಿ ಮಾಡುವತ್ತ ಆಸಕ್ತಿವಹಿಸಿದರು. ಕೆಂಗಲ್ ಹನುಮಂತಯ್ಯನವರ ವಿರುದ್ಧವೂ ಈ ಪಟ್ಟಭದ್ರ ಹಿತಾಸಕ್ತಿಗಳು ಭ್ರಷ್ಟಾಚಾರದ ಆರೋಪ ಹೊರಿಸಿ ತನಿಖೆಗೆ ಆದೇಶಿಸಿದ್ದವು. ಸಿದ್ದಲಿಂಗಯ್ಯನವರ ವಿರುದ್ಧ ಹಾಗೂ ಹನುಮಂತಯ್ಯನವರ ವಿರುದ್ಧ ಮಾಡಿದ ಆರೋಪಗಳು ಆಧಾರರಹಿತವೆಂದು ತನಿಖಾ ಸಮಿತಿಗಳು ತೀರ್ಪಿತ್ತಾಗ ಸಹೃದಯ ಸಮವರ್ತಿಗಳೆಲ್ಲರೂ ಸಮಾಧಾನದ ನಿಟ್ಟುಸಿರೆಳೆದರು.

1948 ರಿಂದಲೂ ಅವ್ಯಾಹತವಾಗಿ ನಡೆದುಬಂದ ಇಂತಹ ಕೃತ್ರಿಮ ರಾಜಕೀಯದಿಂದ ಸಿದ್ದಲಿಂಗಯ್ಯನವರು ಬೇಸತ್ತು ಹೋಗಿದ್ದರು. ವಿಧಾನ ಮಂಡಲದ ಕಾರ್ಯಕಲಾಪಗಳಲ್ಲಿದ್ದ ಅವರ ಎಲ್ಲಾ ಆಸಕ್ತಿಯೂ ಕಮರಿಹೋಯಿತು. ಅವರ ಬದುಕನ್ನು ವೈರಾಗ್ಯ ಆವರಿಸಿತು. ಇವರ ತ್ಯಾಗಪೂರ್ಣ ಬದುಕಿಗೆ ಅರ್ಥವಿಲ್ಲದಂತಾಯಿತು. ಅಧಿಕಾರ ಲಾಲಸೆ ಅಪ್ರಮಾಣಿಕತೆ ತಾಂಡವವಾಡುವುದನ್ನು ಕಂಡು ಮರುಗಿದರು. ಸ್ವಭಾವತಃ ನಿರ್ಲಿಪ್ತರಾದ ಸಿದ್ದಲಿಂಗಯ್ಯನವರು ಈ ಬೆಳವಣಿಗೆಗಳಿಂದ ವೈಯಕ್ತಿಕವಾಗಿ ಎಳ್ಳಷ್ಟೂ ಬಾಧಿತರಾಗಲಿಲ್ಲ. ತಮ್ಮ ಮೇಲೆ ಹೊರಿಸಲಾದ ಆರೋಪಗಳು ಸುಳ್ಳೆಂದು ಸಾಧಿಸುವ ಗೋಜಿಗೂ ಹೋಗಲಿಲ್ಲ. "ಆ ಆರೋಪಗಳಿಗೂ ನನಗೂ ಸಂಬಂಧವಿಲ್ಲ. ನಾನೇಕೆ ವಿಚಲಿತನಾಗಲಿ ?" ಎನ್ನುವ ಧೋರಣೆಯಿಂದಿದ್ದರು. ಇವರನ್ನು ದೋಷಮುಕ್ತರೆಂದು ತೋರಿಸಲು ಇವರ ವ್ಯಕ್ತಿತ್ವವನ್ನು ಅರಿತು ಗೌರವಿಸುತ್ತಿದ್ದ ಮದ್ದೂರು ಸುಬ್ಬರಾಯರಂತಹ ಗಣ್ಯರು ಶ್ರಮಿಸಿದರೇ ಹೊರತು ಸಿದ್ದಲಿಂಗಯ್ಯನವರು ನಿರ್ಲಿಪ್ತರಾಗಿಯೇ ಇದ್ದರು.

ಹನುಮಂತಯ್ಯನವರ ನಂತರ ಬಂದ ಸರ್ಕಾರಗಳು ಇವರ ಸಾಮರ್ಥ್ಯವನ್ನು ಗುರ್ತಿಸಲಿಲ್ಲ. ಇವರ ತ್ಯಾಗವನ್ನು ಸ್ಮರಿಸಲಿಲ್ಲ. ಸಿದ್ದಲಿಂಗಯ್ಯ ಮೊದಲಿನಿಂದಲೂ ತಾವಾಗಿ ಯಾವ ಸ್ಥಾನವನ್ನೂ ಬಯಸಿದವರಲ್ಲ. ಮುಂದೆ ಅಧಿಕಾರಕ್ಕೆ ಬಂದ ಯಾರೂ ಇವರಿಗೆ ವಿಧಾನ ಸಭೆಗೆ ಅಥವಾ ಲೋಕ ಸಭೆಗೆ ಟಿಕೇಟು ಕೊಡುವ ಬಗ್ಗೆ ಆಲೋಚಿಸಲಿಲ್ಲ. ಕೊನೆಗೆ ವಿಧಾನ ಪರಿಷತ್ತು ಅಥವಾ ರಾಜ್ಯ ಸಭೆಗಳಿಗೆ ನಾಮನಿರ್ದೇಶನ ಮಾಡುವ ಸೌಜನ್ಯವನ್ನೂ ತೋರಲಿಲ್ಲ. ಅಧಿಕಾರಕ್ಕಾಗಿ ಪೈಪೋಟಿ ಮಾಡುವ ಮಂದಿ ಸಹಸ್ರಾರು ಇರುವಾಗ ಅಳದೇ ಇರುವ ಮಗುವಿಗೆ ಹಾಲು ಕೊಡುವವರಾರು ? ಸಿದ್ದಲಿಂಗಯ್ಯನವರ ಆಪ್ತರಾಗಿದ್ದ ಮೈಸೂರಿನ ಕೆ.ಎಂ. ಶಿವಲಿಂಗಯ್ಯನವರು "ಅಂದು ಯಾರ ಗಮನಕ್ಕೂ ಬಾರದಿದ್ದಂತಹ ಅಪಾತ್ರರು ಇಂದು ಸ್ವಾತಂತ್ರ್ಯ ತಂದುಕೊಟ್ಟ ಸಾರ್ವಭೌಮತೆ ಮೆರೆಯುವಂತಾದುದು ಎಂತಹ ದುರಂತ ಇವರುಗಳು

2165-4

ಇಂಥ ಹಸಿ ಸುಳ್ಳು ಹೇಳುತ್ತಾರೆಂದು ಯಾರು ನಂಬಿದ್ದರು" ಎಂದು ಹೇಳಿರುವುದು ಎಷ್ಟು ಸಹಜ.

1953ರ ಕೊನೆ ಭಾಗದಲ್ಲಿ ಬೆಂಗಳೂರಿನಲ್ಲಿ ನಡೆಸಲುದ್ದೇಶಿಸಲಾಗಿದ್ದ ಅಂತಹ ರಾಷ್ಟ್ರೀಯ ಸಮಾಜ ಕಾರ್ಯ ಸಮಾವೇಶದ ರಾಷ್ಟ್ರೀಯ ಕೂಟದ ಸ್ವಾಗತ ಸಮಿತಿಗೆ ಸಿದ್ದಲಿಂಗಯ್ಯನವರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಈ ಸಮಾವೇಶದ ಮುಂದಿನ ರಾಷ್ಟ್ರೀಯ ಕೂಟವನ್ನು 1954ರಲ್ಲಿ ಜಿನೀವಾದಲ್ಲಿ ಏರ್ಪಡಿಸಲಾಗಿದ್ದು ಆ ಸಭೆಯಲ್ಲಿ ಸಿದ್ದಲಿಂಗಯ್ಯನವರು ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಅಲ್ಲಿಂದ ಹಿಂತಿರುಗಿದ ನಂತರ ತನ್ನ ಕ್ಷೇತ್ರದಲ್ಲಿ ಆಗಬೇಕಾಗಿದ್ದ ಅಭಿವೃದ್ಧಿ ಕಾರ್ಯಗಳ ಕಡೆ ಗಮನಕೊಡುತ್ತಾ ಬಂದರು.

1962ರಲ್ಲಿ ಕಾಮರಾಜ ನಾಡಾರ್‌ರವರು ಸಿದ್ದಲಿಂಗಯ್ಯನವರ ಪ್ರಾಮಾಣಿಕ ಸೇವೆಯನ್ನು ಗುರುತಿಸಿ ಸಿ.ಎಂ. ಪೂಣಚ್ಚ ರವರು ಲೋಕಸಭೆಗೆ ಸಚಿವರಾಗಿ ಹೋದುದರಿಂದ ತೆರವಾದ ರಾಜ್ಯಸಭಾ ಸ್ಥಾನಕ್ಕೆ ಸಿದ್ದಲಿಂಗಯ್ಯನವರು ಸ್ಪರ್ಧಿಸಲು ಅವಕಾಶ ಮಾಡಿಕೊಟ್ಟರು. ಚುನಾವಣೆಯಲ್ಲಿ ಆರಿಸಿ ಬಂದ ಸಿದ್ದಲಿಂಗಯ್ಯನವರಿಗೆ ಸಂಸತ್‌ನಲ್ಲಿ ಸೇವೆ ಸಲ್ಲಿಸುವ ಒಂದು ಸಣ್ಣ ಅವಕಾಶ ದೊರೆಯುವಂತಾಯಿತು. ಇದೇ ಸಿದ್ದಲಿಂಗಯ್ಯನವರಿಂದ ನಾಡಿಗೆ ಸಂದ ಕೊನೆಯ ಸಾಂಪ್ರದಾಯಿಕ ರಾಜಕೀಯ ಸೇವೆಯಾಯಿತು.

## ರಾಜಕೀಯಾನಂತರ

ಸಾರ್ವಜನಿಕ ಬದುಕಿಗೆ ಬೀಳಲು ಸಿದ್ದಲಿಂಗಯ್ಯನವರಿಗಿದ್ದ ಏಕೈಕ ಪ್ರೇರಣೆ ಸಮಾಜೋದ್ಧಾರವಷ್ಟೆ ಆಗಿತ್ತೆಂಬುದನ್ನು ಮೊದಲೇ ನೋಡಿದ್ದೇವೆ. ಅಧಿಕಾರಗಳು ತಾವಾಗಿ ಇವರ ಬಳಿ ಬಂದವು; ಇವರಿಂದ ದೂರವಾದವು. ಇವರನ್ನು ವಿಚಲಗೊಳಿಸುವುದು ಹೊಸ ಸ್ಥಾನಮಾನಗಳನ್ನುಳ್ಳ ಅಧಿಕಾರಿಗಳಿಗೆ ಸಾಧ್ಯವಾಗಲಿಲ್ಲ. ತಮ್ಮ ರಾಜ್ಯಸಭೆಯ ಅವಧಿ ಮುಗಿಯುತ್ತಿದ್ದಂತೆಯೇ ಮನಸ್ಸು ಮತ್ತೆ ಸಮಾಜಸೇವೆಯ ಕಡೆ ಹೊರಳಿತು. ಈ ಬಾರಿ ಅವರು ರಾಜಕೀಯದ ಸೋಂಕಿನಿಂದ ದೂರ ಉಳಿಯಲು ಇಚ್ಛಿಸಿದರು.

ತಾವು ಕೈಗಾರಿಕಾ ಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಸಿದ್ದಲಿಂಗಯ್ಯನವರಿಗೆ ಕೊಯಮತ್ತೂರಿನ ಪ್ರಚಂಡ ಕೈಗಾರಿಕೋದ್ಯಮಿಯಾಗಿದ್ದ ಜಿ.ಡಿ. ನಾಯ್ಡು ರವರ ಪರಿಚಯವಾಗಿತ್ತು. ನಾಯ್ಡುರವರು ಸರ್ ಎಂ. ವಿಶ್ವೇಶ್ವರಯ್ಯನವರಿಗೂ ಪರಿಚಿತರಾಗಿದ್ದರು. 1950ರ ಸುಮಾರಿನಲ್ಲಿಯೇ ಇವರು ಸಂಪೂರ್ಣ ಸ್ಥಳೀಯವಾದ ತಾಂತ್ರಿಕತೆಯಿಂದ ಸುಮಾರು ಆರುನೂರು ರೂಪಾಯಿಗಳಲ್ಲಿ ಉತ್ಪಾದನೆಯಾಗಬಹುದಾದ ಒಂದು ಮೋಟಾರು ಕಾರಿನ ಮಾದರಿಯನ್ನು ತಯಾರಿಸಿದ್ದರು. ಇವರ ಪುತ್ರ ಗೋಪಾಲ್ ಹತ್ತು ವರ್ಷದ ಬಾಲಕನಾಗಿದ್ದಾಗಲೇ ವಿನೂತನ ಕೈ ಗಡಿಯಾರವನ್ನು ತಯಾರಿಸಿದ್ದ ಪ್ರಚಂಡ. ಜಿ.ಡಿ. ನಾಯ್ಡುರವರಿಗೆ ಮೈಸೂರು ಸಂಸ್ಥಾನದಲ್ಲಿ ಒಂದು ಮೋಟಾರು ವಾಹನ ಉದ್ಯಮ ಸ್ಥಾಪಿಸುವ ಹಂಬಲವಿದ್ದಿತು. ಅದನ್ನು ಸಾಧಿಸಲು ಸಿದ್ದಲಿಂಗಯ್ಯನವರ ನೆರವು ಕೋರಿದ್ದರು. ಸಿದ್ದಲಿಂಗಯ್ಯನವರು ಪ್ರಾಮಾಣಿಕವಾಗಿ ಪ್ರಯತ್ನಪಟ್ಟಾಗ್ಯೂ ಕೇಂದ್ರ ಸರ್ಕಾರದ ಔದ್ಯಮಿಕ ನೀತಿಯಲ್ಲಿನ ತೊಡಕುಗಳಿಂದಾಗಿ ಅದು ಸಾಧ್ಯವಾಗಲಿಲ್ಲ. ಆದರೆ ಜಿ.ಡಿ. ನಾಯ್ಡುರವರೊಂದಿಗೆ ಸಿದ್ದಲಿಂಗಯ್ಯನವರ ಸ್ನೇಹ ಬೆಳೆಯಿತು.

1974ರ ಸುಮಾರಿಗೆ ರಾಜಕೀಯದಿಂದ ವಿಮುಕ್ತರಾದ ಮೇಲೆ ಸಿದ್ದಲಿಂಗಯ್ಯನವರು ಹೆಚ್ಚು ಹೆಚ್ಚಾಗಿ ಜಿ.ಡಿ. ನಾಯ್ಡುರವರೊಂದಿಗೆ ಬೆರೆತು ತಮ್ಮ ಸ್ವಭಾವ ವಿಶೇಷಗಳನ್ನು ಹಂಚಿಕೊಳ್ಳುತ್ತಿದ್ದರು. ಸಿದ್ದಲಿಂಗಯ್ಯನವರ ಕಿರಿಯ ಸಹೋದರ ಟಿ.ಸಿ. ಸಿದ್ದಲಿಂಗಯ್ಯನವರ ಅಳಿಯಂದಿರು ಡಾ: ಎಸ್.ಎಂ. ಮುನಿರತ್ನಂ ಚೆಟ್ಟಿ ಕೊಯಮತ್ತೂರಿನ ಮೆಡಿಕಲ್ ಕಾಲೇಜ್‌ನಲ್ಲಿ ಪ್ರೊಫೆಸರ್ ಮತ್ತು ಔಷಧಶಾಸ್ತ್ರ ಇಲಾಖೆಯ ಮುಖ್ಯಸ್ಥರಾಗಿ ಕೆಲಸ ಮಾಡುತ್ತಿದ್ದರು. ಹಾಗಾಗಿ ಸಿದ್ದಲಿಂಗಯ್ಯನವರು 1973 ರಿಂದ 1978ರ ಪರ್ಯಂತ ವಿಶೇಷವಾಗಿ ಕೊಯಮತ್ತೂರಿನಲ್ಲಿರುತ್ತಿದ್ದರು. ಈ ಸಮಯದಲ್ಲಿ ಅವರು ಜಿ.ಡಿ. ನಾಯ್ಡುರವರ ಸಹಯೋಗದಿಂದ ಕೊಯಮತ್ತೂರಿನಲ್ಲಿ ಒಂದು ಇಂಜಿನಿಯರುಗಳ ಸಂಘವನ್ನು ಸ್ಥಾಪಿಸಿದರು.

1977ರ ಸುಮಾರಿನಲ್ಲಿ ಎಸ್.ಎಸ್. ಹರ್ಡೀಕರ್ ಅವರು ಬೆಳಗಾವಿ ಸಮೀಪದ ಘಟಪ್ರಭದಲ್ಲಿ ರೋಗಿಗಳಿಗಾಗಿ ಒಂದು ಶುಶ್ರೂಷಾ ಕೇಂದ್ರವನ್ನು ಸ್ಥಾಪಿಸಿದರು. ಈ ಕೇಂದ್ರದ ಉದ್ಘಾಟನಾ ಸಮಾರಂಭಕ್ಕೆ ಹೋಗಿದ್ದ ಸಿದ್ದಲಿಂಗಯ್ಯನವರನ್ನು ಈ ಸಂಸ್ಥೆ ಆಕರ್ಷಿಸಿತು. ಅವರ ಸಮಾಜಸೇವಾ ಮನೋವೃತ್ತಿ ಹರ್ಡೀಕರ್ ರೊಂದಿಗಿನ ಆತ್ಮೀಯ ಸಂಬಂಧದ ಹಿನ್ನೆಲೆಯಲ್ಲಿ ಮತ್ತೆ ಚಿಗುರಿತು. ತಮ್ಮ ಮುಂದಿನ ಜೀವನವನ್ನು ಅನಾರೋಗ್ಯಪೀಡಿತರ ಸೇವೆಯಲ್ಲಿ ಕಳೆಯಲು ಸಿದ್ದಲಿಂಗಯ್ಯ ನಿಶ್ಚಯಿಸಿ ಘಟಪ್ರಭಾದಲ್ಲಿ ನೆಲೆಸಿದರು.

ಆದರೆ ಅಲ್ಲಿಗೆ ಹೋದ ವರ್ಷಾಂತ್ಯದೊಳಗೆ ಅವರು ಪಾರ್ಶ್ವವಾಯುವಿಗೆ ತುತ್ತಾದರು. ಸ್ವಲ್ಪ ಕಾಲ ಬೆಳಗಾವಿಯ ಅವರ ಮಗಳ ಮನೆಯಲ್ಲಿ ಶುಶ್ರೂಷೆ - ವಿಶ್ರಾಂತಿ ಪಡೆದರು. ಇವರ ಅನಾರೋಗ್ಯ ಸ್ಥಿತಿಯನ್ನು ಕಂಡ ಡಾ: ಮುನಿರತ್ನಂ ಚೆಟ್ಟಿ ಇವರನ್ನು ಶುಶ್ರೂಷೆಗಾಗಿ ಕೊಯಮತ್ತೂರಿಗೆ ಕರೆದುಕೊಂಡು ಹೋದರು. 6-8 ತಿಂಗಳ ಕಾಲ ಅಲ್ಲಿ ಶುಶ್ರೂಷೆ ಪಡೆದ ನಂತರ ಸಿದ್ದಲಿಂಗಯ್ಯನವರು ಪಾರ್ಶ್ವವಾಯುವಿನಿಂದ ಚೇತರಿಸಿಕೊಂಡರು.

ಸಿದ್ದಲಿಂಗಯ್ಯನವರು ರಾಜಕೀಯ ಪ್ರವೇಶಿಸಿದಾಗ ಅವರ ಮಕ್ಕಳು - ಒಬ್ಬಳೇ ಮಗಳು ಸರೋಜಮ್ಮ, ಇಬ್ಬರು ಗಂಡು ಮಕ್ಕಳು ಟಿ.ಎಸ್. ರಾಜಶೇಖರಯ್ಯ ಮತ್ತು ಟಿ.ಎಸ್. ಶಾಂತ ಕುಮಾರ್ - ಇನ್ನೂ ಹಸುಳೆಗಳು. ಶಿವಪುರ ಸತ್ಯಾಗ್ರಹದ ನಂತರ ಸಿದ್ದಲಿಂಗಯ್ಯನವರು ಸೆರೆಮನೆ ಸೇರಿದ ಸ್ವಲ್ಪ ಸಮಯದಲ್ಲಿ ಅವರ ಧರ್ಮಪತ್ನಿ ಪಾರ್ವತಮ್ಮ ಕ್ಷಯ ರೋಗದಿಂದ ಬಳಲಿ ನಿಧನರಾಗಿದ್ದರು. ಮಕ್ಕಳು ಒಟ್ಟು ಕುಟುಂಬದ ಇತರ ಸದಸ್ಯರ ಪ್ರೀತಿ ಅಭ್ಯುದಯ ಚಿಂತನೆಗಳಲ್ಲಿ ಬೆಳೆದರೂ ತಂದೆ ತಾಯಿಗಳ ಸಹಜ ಪ್ರೀತಿಯಿಂದ ವಂಚಿತರಾಗಿದ್ದರು.

ಮಕ್ಕಳ ಪುರೋಭಿವೃದ್ಧಿಗಾಗಿ ತಮ್ಮ ಅಧಿಕಾರ - ಸ್ಥಾನಮಾನದ ವರ್ಚಸ್ಸನ್ನು ಪ್ರಯೋಗ ಮಾಡಲು ಸಿದ್ದಲಿಂಗಯ್ಯನವರ ಮನಸ್ಸು ಒಪ್ಪಲಿಲ್ಲ. ಇವರನ್ನು ರಾಜಕೀಯಕ್ಕೆ ಸಮರ್ಪಿಸುವಾಗ ಇವರ ಅಣ್ಣ ತಮ್ಮಂದಿರು ರಾಜಕೀಯದಿಂದ ಇಡೀ ಕುಟುಂಬಕ್ಕೆ ಯಾವುದೇ ಲಾಭ ಪಡೆದುಕೊಳ್ಳದೆ ನಿಸ್ಪೃಹತೆಯಿಂದ ಕೆಲಸ ಮಾಡುವ ಸಂಕಲ್ಪವನ್ನು ಸಿದ್ದಲಿಂಗಯ್ಯನವರಿಗೆ ಭೋಧಿಸಿದ್ದರು. ಅದರಿಂದಾಗಿ ಸಿದ್ದಲಿಂಗಯ್ಯನವರು ರಾಜ್ಯ ಸಚಿವ ಸಂಪುಟದ ಎರಡನೇ ಸ್ಥಾನಕ್ಕೆ ಏರಿದ್ದರೂ ಅವರ ಮಕ್ಕಳು ಸಾಮಾನ್ಯ ಪ್ರಜೆಯ ಮಕ್ಕಳಂತೆ ತಮ್ಮ ಸ್ವಂತ ಬುದ್ಧಿಮತ್ತೆಯಿಂದಲೇ

ಅವಕಾಶಗಳನ್ನು ಕಲ್ಪಿಸಿಕೊಂಡು ಬೆಳೆದರು. ತಂದೆಯ ವರ್ಚಸ್ಸನ್ನು ಅವಲಂಬಿಸಿ ಸ್ಥಾನಮಾನಗಳಿಗೆ ಏರಲಿಲ್ಲ. ಹಿರಿಯ ಪುತ್ರ ರಾಜಶೇಖರ್ ಕೆನರಾ ಬ್ಯಾಂಕಿನ ಅಧಿಕಾರಿಯಾಗಿ ಸೇರಿ ತಮ್ಮ ಸ್ವಂತ ಸಾಮರ್ಥ್ಯದಿಂದ ಹಿರಿಯ ಅಧಿಕಾರಿಯಾಗಿ ನಿವೃತ್ತರಾದರು. ಕಿರಿಯ ಪುತ್ರ ಶಾಂತಕುಮಾರ್ ಮೈಕೋ ಕಾರ್ಖಾನೆಯ ಉದ್ಯೋಗಿಯಾಗಿ ಶ್ರೇಯಸ್ಸುಗಳಿಸಿದರು. ಅವರ ವಿದ್ಯಾಭ್ಯಾಸ SSLC ವರೆಗಷ್ಟೇ ಆದರೂ ಅವರ ಪ್ರಚಂಡ ತಂತ್ರಜ್ಞಾನ ಯಾರನ್ನಾದರೂ ಬೆರಗುಗೊಳಿಸುವಂತಹುದು. ತಾವೇ ಸ್ವತಃ ವಾಶಿಂಗ್ ಮೆಶಿನ್, ಟೆಲಿವಿಶನ್ ಮತ್ತಿತರ ಗ್ಯಾಡ್ಜೇಟ್‌ಗಳನ್ನು ಜೋಡಿಸಿದ್ದಾರೆ.

ಇಂತಹ ಕೌಟುಂಬಿಕ ಪರಿಸರದಲ್ಲಿ ಸಿದ್ದಲಿಂಗಯ್ಯ ಮತ್ತು ಅವರ ಮಕ್ಕಳ ನಡುವೆ ಗಾಢವಾದ ಸಂಬಂಧಗಳು ಬೆಳೆಯಲು ಸಾಧ್ಯವಾಗಲಿಲ್ಲ. ಸಿದ್ದಲಿಂಗಯ್ಯ ತಮ್ಮ ಸಂಸಾರ ವೈಭೋಗಗಳನ್ನು ತ್ಯಜಿಸಿ ನಾಡಿನ ಸ್ವಾತಂತ್ರ್ಯಕ್ಕಾಗಿ ಪಡಬಾರದ ಕಷ್ಟ ಹಿಂಸೆಗಳನ್ನು ಅನುಭವಿಸಿ ತನ್ನ ಸಹವರ್ತಿಗಳಿಂದಲೇ ಅಪಹೇಳನಕ್ಕೆ ಗುರಿಯಾದರು. ಇವರ ಈ ತ್ಯಾಗದ ಬೆಲೆ ನಾಡಿನ ಸ್ವಾತಂತ್ರ್ಯವನ್ನು ತಮ್ಮ ಸ್ವಾರ್ಥ ಸಾಧನೆಗೆ ಬಳಸಿ ಮೆರೆಯುತ್ತಿರುವ ಇಂದಿನ ರಾಜಕಾರಣಿಗಳಿಗೆ ಮನದಟ್ಟಾಗುವುದಾದರೂ ಹೇಗೆ ?

## ಕೊನೆಯ ದಿನಗಳು

ಸಿದ್ದಲಿಂಗಯ್ಯನವರು ತಮ್ಮ ಕೊನೆಯ ದಿನಗಳಲ್ಲಿ ಒಂದು ಸೂರು ಒಂದು ಊರು ಎನ್ನದೆ ಯಾರು ವಿಶ್ವಾಸದಿಂದ ಕರೆದರೂ ಅವರೊಂದಿಗಿದ್ದು ಬದುಕು ಸಾಗಿಸಿದರು. ನಾಡಿಗೇ ಸ್ವಾತಂತ್ರ್ಯ ತಂದುಕೊಟ್ಟ ಇವರು ಕೊನೆಗೆ ಇವರ ರಾಜಕೀಯ ಪ್ರತಿಷ್ಠೆಯ ಲಾಭ ಪಡೆದುಕೊಳ್ಳಲು ಪ್ರಯತ್ನಿಸಿದ ಕೆಲವು ಸಮಯ ಸಾಧಕ ವ್ಯಕ್ತಿಗಳ ಹಿಡಿತಕ್ಕೆ ಸಿಕ್ಕು ತಮ್ಮ ವೈಯಕ್ತಿಕ ಸ್ವಾತಂತ್ರ್ಯವನ್ನು ಕಳೆದುಕೊಂಡು ಕೆಲಕಾಲ ಪಡಬಾರದ ಕಷ್ಟ ವೇದನೆಗಳನ್ನು ಅನುಭವಿಸಿದರು. ಇದನ್ನು ಅವರು ಯಾರಿಗೂ ಹೇಳಿರಲಿಲ್ಲ. ಅಚಾನಕವಾಗಿ ವಿಷಯ ತಿಳಿದ ಅವರ ಮಕ್ಕಳು 1983-84ರಲ್ಲಿ ತೀವ್ರ ಅನಾರೋಗ್ಯ ಸ್ಥಿತಿಯಲ್ಲಿ ಇವರನ್ನು ಚಿಕಿತ್ಸೆಗಾಗಿ ವಿಕ್ಟೋರಿಯಾ ಆಸ್ಪತ್ರೆಗೆ ಸೇರಿಸಿದರು. ಈ ಸಮಯದಲ್ಲಿ ಇಂದಿರಾಗಾಂಧಿಯವರು ಹಾಗೂ ಇತರ ಸ್ಥಳೀಯ ಪ್ರಮುಖರು ಸಿದ್ದಲಿಂಗಯ್ಯನವರನ್ನು ಆಸ್ಪತ್ರೆಯಲ್ಲಿ ಭೇಟಿಯಾಗಿದ್ದರು. ಅಲ್ಲಿ ಸಿಕ್ಕ ವಿಶೇಷ ಚಿಕಿತ್ಸೆಯಿಂದ ಚೇತರಿಸಿಕೊಂಡರೂ ಪೂರ್ಣಾರೋಗ್ಯ ದುರ್ಲಭವಾಯಿತು. ಚಿಕಿತ್ಸೆಯಿಂದ ಸ್ವಲ್ಪಗುಣಮುಖರಾದರೂ ಅವರ ದೇಹ ಮತ್ತು ಮನಸ್ಸು ಸಹ ಯಾತನೆಯಿಂದ ಜರ್ಝರಿತವಾಗಿತ್ತು.

ಇಷ್ಟಾದರೂ ಅವರು ತಮ್ಮ ಸಂಕಷ್ಟಗಳಿಗಾಗಿ ಯಾರನ್ನೂ ದೂರಲಿಲ್ಲ. ಯಾರನ್ನೂ ಹೊಣೆ ಮಾಡಲಿಲ್ಲ. ಎಲ್ಲರೂ ತಮ್ಮನ್ನು ಪ್ರೀತಿಯಿಂದಲೇ ಕಂಡರೆಂಬ ಸಮಾಧಾನದಿಂದಲೇ ಬದುಕಿದರು. ಆಪ್ತರಾಗಲಿ - ದೂರದವರಾಗಲಿ, ಮಿತ್ರರಾಗಲಿ - ಶತ್ರುಗಳಾಗಲಿ, ಪರಿಚಿತರಾಗಲಿ - ಹೊಸಬರಾಗಲಿ ಎಲ್ಲರಲ್ಲಿಯೂ ಅವರಿಗಿದ್ದುದು ಒಂದೇ ವಿಶ್ವಾಸ. ಅವರಿಗೆ ತನ್ನದೇ ಎಂಬ ಕುಟುಂಬವಿಲ್ಲ. 'ವಸುದೇವ ಕುಟುಂಬಕಂ' ಎಂಬ ಭಾವನೆಯನ್ನು ಸಾಕ್ಷಾತ್ಕರಿಸಿಕೊಂಡ ವಿಶಾಲ ಹೃದಯ ಅವರದು.

ಸ್ವರಾಜ್ಯ ತಂತ್ರದಲ್ಲಿ ಆದರ್ಶ ಸಮಾಜವನ್ನು ಬೆಳೆಸುವ ಅವರ ಹಂಬಲ ಕನಸಾಗಿಯೇ ಉಳಿಯಿತು. ಆದರೂ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುವ ಸಾಧನವಾದ ರಾಜಕೀಯ ಸ್ವಾತಂತ್ರ್ಯ ಪ್ರಜೆಗಳಿಗೆ ದೊರಕಿತೆಂಬ ಸಂತೃಪ್ತಿ ಮತ್ತು ಒಂದಿಲ್ಲೊಂದು ಕಾಲಕ್ಕೆ ಪ್ರಬುದ್ಧ ರಾಜಕಾರಣದ ಲಾಭ ದೊರೆತು ಆದರ್ಶ ಸಮಾಜ ಏರ್ಪಡುವುದೆಂಬ ಆಶಯದಲ್ಲೇ ಸಿದ್ದಲಿಂಗಯ್ಯನವರು ತಮ್ಮ ಕೊನೆಯ ದಿನಗಳನ್ನು ಕಳೆದು ತಮ್ಮ ಎಂಬತ್ತೆಂಟನೇ ವಯಸ್ಸಿನಲ್ಲಿ ತಾರೀಖು 26.7.1984 ರಂದು ಸ್ವತಂತ್ರ ಭಾರತದ ಕಣಕಣದಲ್ಲಿ ಸೇರಿ ಲೀನವಾದರು.

ಎಲ್ಲರನ್ನೂ ಆಕರ್ಷಿಸುವ ಆತ್ಮೀಯತೆಯನ್ನು ಸೂಸುವ ಮುಗುಳು ನಗೆ ಅವರ ದಿವ್ಯಾಸ್ತ್ರವಾಗಿತ್ತು. ಲೂಯಿಸ್ ಕೆರೋಲ್‌ನ 'ಅದ್ಭುತ ನಾಡಿನಲ್ಲಿ ಏಲೀಸ್' ಕೃತಿಯ ಪಾತ್ರ ಸದಾ ನಗುವನ್ನು ಸೂಸುವ ಚೆಷೈರ್ ಕ್ಯಾಟ್, ನಿಧಾನವಾಗಿ ಮಾಯವಾಗುತ್ತಾ ಬಂದು ಅದರ ಮುಖದ ಛಾಯೆ ಕ್ರಮೇಣ ಅಳಿಸಿಹೋದರೂ ತಿಳಿನಗೆ ಮಾತ್ರ ಗಾಳಿಯಲ್ಲಿ ಉಳಿಯುವಂತೆ ಸಿದ್ದಲಿಂಗಯ್ಯನವರ ದೇಹ ಅಳಿದು ಅವರ ಒಡನಾಟದ ನೆನಪುಗಳು ಮಾಸಿದರೂ ಅಚ್ಚಳಿಯದೇ ಉಳಿಯುವ ಅವರ ಆ ಸ್ನೇಹಮಯ ತೆಳುನಗೆ ಅವರ ಸುಸಂಸ್ಕೃತ ವ್ಯಕ್ತಿತ್ವದ ಕುರುಹಾಗಿ ಕರ್ನಾಟಕದ ಜನಮನದಲ್ಲಿ ನಿಂತಿದೆ. ಸಿದ್ದಲಿಂಗಯ್ಯನವರ ಅಂತರಾತ್ಮದ ಸಂಕಲ್ಪವೂ ಅದೇ ಆಗಿತ್ತೆಂಬುದಕ್ಕೆ ಅವರು ಸದಾ ನೆನೆಯುತ್ತಿದ್ದ ಈ ಶ್ಲೋಕವೇ ಸಾಕ್ಷಿ.

"ಸೃಷ್ಟಿಯ ಎಲ್ಲ ಜೀವಿಗಳು ನನ್ನನ್ನು
ಸ್ನೇಹ ಚಕ್ಷುವಿನಿಂದ ನೋಡುವಂತಾಗಲಿ.
ಈ ಎಲ್ಲ ಜೀವಿಗಳನ್ನು ನಾನು ಸ್ನೇಹ
ಚಕ್ಷುವಿನಿಂದ ನೋಡುವಂತಾಗಲಿ.
ನಾವೆಲ್ಲರೂ ಸ್ನೇಹ ಚಕ್ಷುವಿನಿಂದ ಪರಸ್ಪರ
ಗುರುತಿಸಿಕೊಳ್ಳುವಂತಾಗಲಿ."

(ಯಜುರ್ವೇದ 36-18) (ಗ್ರಂಥಕರ್ತರ ಅನುವಾದ)

ಪರಿಶುದ್ಧ ಹೃದಯರಾದ ಸಿದ್ದಲಿಂಗಯ್ಯನವರ ಈ ಮಹದಾಕಾಂಕ್ಷೆ ಇವರೊಡನಾಡಿದ ಎಲ್ಲ ಸುಹೃದಯರ ಆತ್ಮಾನುಬಂಧಗಳಲ್ಲಿ ಅನುರಣಿತವಾಗಿರುವುದೆಂಬುದಕ್ಕೆ ಈ ಕೆಲವು ಗಣ್ಯಾಭಿಪ್ರಾಯಗಳನ್ನು ತಮ್ಮ ಮುಂದಿಡುತ್ತಿದ್ದೇನೆ.

ನವಕರ್ನಾಟಕದ ಭೂತಪೂರ್ವ ಮುಖ್ಯಮಂತ್ರಿಗಳಾದ ಕೆಂಗಲ್ ಹನುಮಂತಯ್ಯನವರು ಸಿದ್ದಲಿಂಗಯ್ಯನವರನ್ನು 'ನೇತಾರರ ನೇತಾರ' ರೆಂದು ಬಣ್ಣಿಸಿದ್ದರೆ, ಡಿ. ದೇವರಾಜ್ ಅರಸ್ ರವರು ಧೀಮಂತ ದೇಶಾಭಿಮಾನಿ ಎಂದಿದ್ದಾರೆ. ಕಡಿದಾಳ್ ಮಂಜಪ್ಪನವರು ಸುಸಂಸ್ಕೃತ ಶ್ರೇಷ್ಠ ವ್ಯಕ್ತಿ ಎಂದು ಗುಣಗಾನ ಮಾಡಿದ್ದಾರೆ. ಸಮಾಜ ಕಲ್ಯಾಣ ಸಚಿವರಾಗಿದ್ದ ಎಸ್. ರಾಚಯ್ಯನವರು ಶ್ರೀಯುತರಲ್ಲಿ ಹಿಂದುಳಿದ ಜನಾಂಗಗಳ ಅಭ್ಯುದಯಲ್ಲಿ ನಿಷ್ಠೆಯುಳ್ಳ ಜನನಾಯಕನನ್ನು ಕಂಡರೆ ವಿಧಾನಸಭಾ ಅಧ್ಯಕ್ಷಿಣಿಯಾಗಿದ್ದ ಕೆ.ಎಸ್. ನಾಗರತ್ನಮ್ಮನವರು ಇವರಲ್ಲಿ ತನ್ನ ಗುರುವನ್ನೂ ಮಾರ್ಗದರ್ಶಿಯನ್ನೂ ಕಂಡುಕೊಂಡಿದ್ದಾರೆ. ಆರೋಗ್ಯ ಸಚಿವರಾಗಿದ್ದ ಹೆಚ್. ಸಿದ್ದವೀರಪ್ಪನವರು ಇವರನ್ನು ಸ್ಥಿತಪ್ರಜ್ಞ ನೆಂದು ಭಾವಿಸಿದರೆ, ಆಡಳಿತಜ್ಞ ಹಾಗೂ

ಜನನಾಯಕ ಜೆ.ಬಿ. ಮಲ್ಲಾರಾಧ್ಯರು ಮಾನವೀಯ ಹಾಗೂ ಆಧ್ಯಾತ್ಮಿಕ ಮೌಲ್ಯಗಳೆರಡನ್ನೂ ಬದುಕಿನಲ್ಲಿ ಅಳವಡಿಸಿಕೊಂಡ ಸತ್ಯವಾದಿ, ಅಜಾತ ಶತ್ರು ಎಂದು ಮನದಾಳದಿಂದ ಹೊಗಳಿದ್ದಾರೆ.

ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿಯುತ ಸರ್ಕಾರದ ಸಂಸ್ಥಾಪನೆಗಾಗಿ ಯಾರ ಧೋರಣೆಯ ವಿರುದ್ಧ ಸಿದ್ದಲಿಂಗಯ್ಯನವರು ಸೆಣಸಬೇಕಾಯಿತೋ. ಅದೇ ದಿವಾನ್ ಮಿರ್ಜಾರವರು "ನಾಡಿಗಾಗಿ, ಜನತೆಗಾಗಿ ಸಿದ್ದಲಿಂಗಯ್ಯನವರು ಸಲ್ಲಿಸಿದ ಸೇವೆಯ ನಿಷ್ಠೆ, ನಿಸ್ವಾರ್ಥತೆಗಳನ್ನು ಯಾರೂ ಶಂಕಿಸುವಂತಿಲ್ಲ" ಎಂಬ ಪ್ರಶಂಸೆಯನ್ನು ವ್ಯಕ್ತಪಡಿಸಿದ್ದಾರೆ. ಕಾನೂನು ಶಾಸ್ತ್ರಜ್ಞರೂ. ಖ್ಯಾತ ವಕೀಲರೂ ಆಗಿದ್ದ ಎಸ್.ಕೆ. ವೆಂಕಟರಂಗ ಅಯ್ಯಂಗಾರ್ ರವರಿಗೆ ಇವರೊಬ್ಬ ಅನುಭವಿ ಎನಿಸಿದರೆ ಸಾಹಿತಿ ಡಿ.ವಿ. ಗುಂಡಪ್ಪನವರಂತೂ ಸಮಾಜವನ್ನು ತೊಳೆದು ಚೊಕ್ಕಗೊಳಿಸುವ ಪುಣ್ಯ ತೀರ್ಥ ಎಂದೇ ಹೃದಯ ತುಂಬಿ ಸ್ಮರಿಸುತ್ತಾರೆ. ಶ್ರೀ ಎನ್.ಎಸ್. ಹರ್ಡಿಕರರು ತಾವು ಸಿದ್ದಲಿಂಗಯ್ಯನವರ ಬದುಕಿನ ಸಾರವನ್ನೇ ಭಟ್ಟಿ ಇಳಿಸಿ ಹೊರತಂದ ಶ್ರೀಯುತರ 80ನೇ ಹುಟ್ಟುಹಬ್ಬದ ಸ್ಮರಣ ಸಂಚಿಕೆಗೆ ಶುದ್ಧ ಸೇವೆಯ ಸಿದ್ದಲಿಂಗಯ್ಯ ಎಂಬ ಶೀರ್ಷಿಕೆ ಇಟ್ಟು ಅನ್ವರ್ಥಗೊಳಿಸಿದ್ದಾರೆ.

* * * * *

# ಭಾಗ - 2

## ಸಿದ್ದಲಿಂಗಯ್ಯನವರ ರಾಜಕೀಯ ನೀತಿ, ಧೋರಣೆಗಳು

## ಭಾಗ - 2

### ಸಿದ್ದಲಿಂಗಯ್ಯನವರ ರಾಜಕೀಯ ನೀತಿ, ಧೋರಣೆಗಳು

ಗ್ರಂಥದ ಮೂಲಭಾಗದಲ್ಲಿ ಸಿದ್ದಲಿಂಗಯ್ಯನವರ ವೈಯಕ್ತಿಕ ಬದುಕಿನ ಅಂತರಾಳವನ್ನು ಹೊಕ್ಕು ಅವರ ವ್ಯಕ್ತಿ ಪರಿಚಯವನ್ನು ಮಾಡಿಕೊಂಡಾಯಿತು. ಸ್ವಭಾವತಃ ಪರಹಿತಚಿಂತಕರಾದ ಶ್ರೀಯುತರ ಪರಿಸರ, ಸನ್ನಿವೇಶಗಳು ಅವರನ್ನು ಕಾಂಗ್ರೆಸ್ ಚಳುವಳಿಯ ಮೂಲಕವಾಗಿ ಸಮಾಜೋದ್ಧಾರದ ಕಡೆಗೆ ಪ್ರೇರೇಪಿಸಿದುವು. ಆದರೆ ಈ ಹಾದಿ ಸುಗಮವಾಗಿ ಒದಗಿಬರಲಿಲ್ಲ. ಇವರ ಸಾಮಾಜಿಕ ಕಳಕಳಿಯನ್ನು, ತವಕವನ್ನು ಇತರರು ಸುಲಭವಾಗಿ ಅರ್ಥಮಾಡಿಕೊಳ್ಳಲಿಲ್ಲ. ತಮ್ಮ ಕಾರ್ಯನೀತಿಯನ್ನು ಅನುಷ್ಠಾನಗೊಳಿಸುವಲ್ಲಿ ಇವರು ಅನೇಕ ತೆರನ ಪ್ರತಿರೋಧಗಳನ್ನು ಎದುರಿಸಬೇಕಾಯಿತು. ಸ್ಥಳೀಯ ಸನ್ನಿವೇಶಗಳ ಯಥಾ ಪರಿಚಯವಿರದ ರಾಷ್ಟ್ರನಾಯಕರನ್ನು ತಮ್ಮ ನಿಲುವಿಗೆ ತರಲು ಇವರು ನಿಷ್ಠುರವಾದಿಯಾಗುವುದು ಅನಿವಾರ್ಯವಾಯಿತು. ದೇಶೀ ಪ್ರಭುತ್ವಾಡಳಿತ್ವದ ಚುಕ್ಕಾಣಿ ಹಿಡಿದ ಆಡಳಿತಾಧಿಕಾರಿಗಳ ಪೂರ್ವಾಗ್ರಹ ಭಾವನೆಗಳನ್ನೂ ಮತ್ತು ಬ್ರಿಟಿಷರ ವಾರಸುದಾರರಂತೆ ದಮನಕಾರಿಗಳಾಗಿ ವರ್ತಿಸುವ ಪೋಲೀಸರ ಅತಿರೇಕಗಳನ್ನೂ ತೊಡೆದು 'ಕಾಂಗ್ರೆಸ್ ಚಳುವಳಿ' ಮತ್ತು 'ಜವಾಬ್ದಾರಿ ಸರ್ಕಾರ'ಗಳ ಪರಿಕಲ್ಪನೆಯನ್ನು ಮೂಡಿಸುವುದೂ ಶ್ರಮದಾಯಕವಾಗಿ ಪರಿಣಮಿಸಿತು. ಸೀಮೆಯೊಳಗಣ ಈ ವಿಷಮ ಪರಿಸರದಲ್ಲಿ ಸಿದ್ದಲಿಂಗಯ್ಯನವರು ಪ್ರತಿರೋಧಗಳನ್ನೆದುರಿಸಿ ತಮ್ಮ ಸಂಕಲ್ಪವನ್ನು ಸಾಧಿಸಬೇಕಾದ ಕೆಲವು ಘಟನೆಗಳ ಚಿತ್ರಣವನ್ನು ಮೂಡಿಸಲು ಈ ಗ್ರಂಥಭಾಗ ಉದ್ದೇಶಿಸಲ್ಪಟ್ಟಿದೆ.

### ಕಾಂಗ್ರೆಸ್ ಚಳುವಳಿ ಸಂಬಂಧವಾದ ಸರ್ಕಾರದ ಧೋರಣೆ ಕುರಿತು ಪ್ರಜಾಪ್ರತಿನಿಧಿ ಸಭೆ ನಡವಳಿಗಳು

1937ರಲ್ಲಿ ಮೈಸೂರು ರಾಜ್ಯದಲ್ಲಿ ಸಿದ್ದಲಿಂಗಯ್ಯನವರು ಕಾಂಗ್ರೆಸ್ ಚಳುವಳಿಯನ್ನು ಪ್ರಾರಂಭಿಸಿದರೆಂದು ತಿಳಿದೆವಷ್ಟೆ. ಗಾಂಧೀಜಿಯವರ ಅಹಿಂಸಾ ಸತ್ಯಾಗ್ರಹ ಸಂದೇಶವನ್ನು ಜನರಿಗೆ ಮುಟ್ಟಿಸುವುದರ ಜೊತೆಗೆ ಕಾಂಗ್ರೆಸ್‌ನ ಸ್ಥಳೀಯ ಸದಸ್ಯತ್ವವನ್ನು ವೃದ್ಧಿಗೊಳಿಸುವುದು ಹಾಗೂ ಸಂಸ್ಥಾನದಲ್ಲಿ ಜವಾಬ್ದಾರಿಯುತ ಸರ್ಕಾರ ಏರ್ಪಡುವ ಬಗ್ಗೆ ಜನ-ಜಾಗೃತಿಗೊಳಿಸುವುದು ಈ ಚಳುವಳಿಯ ಉದ್ದೇಶವಾಗಿತ್ತು. ಈ ಹಾದಿ ಸುಗಮವಾಗಿರಲಿಲ್ಲ. ಚಳುವಳಿಯನ್ನು ಹತ್ತಿಕ್ಕಲು ಸರ್ಕಾರದ ಫೌಜುಗಳು ಸದಾ ಸಿದ್ಧವಾಗಿರುತ್ತಿದ್ದವು. ಅನೇಕ ಕಡೆ ತಿಳಿದೋ ತಿಳಿಯದೆಯೋ ಚಳುವಳಿಗಾರರ ಮೇಲೆ ಪೊಲೀಸು ದೌರ್ಜನ್ಯಗಳು ನಡೆಯುತ್ತಿದ್ದವು. ಇಂತಹ ಪ್ರಕರಣಗಳು ವಿಪರೀತವಾದಾಗ ಆ ವಿಷಯವಾಗಿ 19.10.1937 ರಂದು ಪ್ರಜಾ ಪ್ರತಿನಿಧಿ ಸಭೆಯಲ್ಲಿ ಮಂಡಿಸಲಾದ ನಿಲುವಳಿ ಸೂಚನೆಯ ಮೇಲಿನ ಚರ್ಚೆಯ ಉದ್ಧೃತ ಭಾಗಗಳನ್ನು ಈ ಮುಂದೆ ನೀಡಲಾಗಿದೆ. ಕಾಂಗ್ರೆಸ್ ಚಳುವಳಿಯಲ್ಲಿ ಸಿದ್ದಲಿಂಗಯ್ಯನವರ ಪಾತ್ರ, ಚಳುವಳಿಯ ಧ್ಯೇಯೋದ್ದೇಶಗಳು ಮತ್ತು ಪ್ರಜೆಗಳ ನ್ಯಾಯಯುತವಾದ ನಾಗರೀಕ ಹಕ್ಕುಗಳಿಗಾಗಿ ನಡೆದ ಸತ್ಯಾಗ್ರಹವನ್ನು ಹತ್ತಿಕ್ಕಲು ಅಂದಿನ ಸರ್ಕಾರ ಕೈಗೊಂಡ ನೀತಿ, ಕಾರ್ಯಾಚರಣೆಯ ನೈಜ ಚಿತ್ರಣವನ್ನು ಒದಗಿಸುವುದು ಇದರ ಉದ್ದೇಶ. ಇದಾದನಂತರದಲ್ಲೇ ತುಲನಾತ್ಮಕವಾಗಿ,

'ಮೈಸೂರು ಕಾಂಗ್ರೆಸ್' ಮತ್ತು 'ಜವಾಬ್ದಾರಿ ಸರ್ಕಾರಕ್ಕಾಗಿ ಚಳುವಳಿ' ಬಗ್ಗೆ ಸಂಸ್ಥಾನ ಸರ್ಕಾರದ ಅಪಕಲ್ಪನೆಯನ್ನು ತೋರಿಸುವ ವರದಿಯ ಭಾಗಗಳನ್ನು ಉದ್ಧರಿಸಲಾಗಿದೆ:

ನಿಲುವಳಿ ಸೂಚನೆ

"ಶ್ರೀ ಭೂಪಾಲಂ ಚಂದ್ರಶೇಖರ ಶೆಟ್ಟಿಯವರು ಈ ಕೆಳಗಿನ ನಿಲುವಳಿ ಸೂಚನೆಯನ್ನು ಮಂಡಿಸಿದರು:-

"ಕಾಂಗ್ರೆಸ್ ಕಾರ್ಯಕ್ರಮಗಳನ್ನು ರಾಜ್ಯ ವಿಧಾಯಿ ಸಭೆಗಳ ಒಳಗೂ ಹೊರಗೂ ಹತ್ತಿಕ್ಕುವ ಸನ್ನಾಹದಲ್ಲಿ ರಾಜ್ಯದ ಹಲವು ಭಾಗಗಳಲ್ಲಿ ಪೋಲೀಸರು ಅತಿರೇಕವನ್ನು ತೋರಿಸಲು ಸಾರ್ವಜನಿಕ ಮಹತ್ವವುಳ್ಳ ಒಂದು ತುರ್ತು ವಿಷಯವನ್ನು ಪರ್ಯಾಲೋಚಿಸುವವರೆಗೆ ಈ ಸದನದ ಕಲಾಪಗಳನ್ನು ನಿಲುಗಡೆ ಮಾಡಗೊಳಿಸಬೇಕು."

.....

.....

"ನಿಲುವಳಿ ಸೂಚನೆಯ ವಿಷಯವನ್ನು ಕುರಿತು ವಿವರಿಸುವ ಮೊದಲು, ಈ ನಿಲುವಳಿ ಸೂಚನೆಯಲ್ಲಿ ಬಳಸಿದ "ಕಾಂಗ್ರೆಸ್ಸಿನ ಚಟುವಟಿಕೆಗಳು" ಎಂಬ ಪದಗಳ ಅರ್ಥವಿವರಣೆ ನೀಡಬಯಸಿದರು. ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಸಮಗ್ರ ರಾಷ್ಟ್ರವನ್ನೇ ಮೇಲಕ್ಕೆತ್ತಬೇಕೆಂಬ ತತ್ವವನ್ನು ಪ್ರತಿಪಾದಿಸುವ ರಾಷ್ಟ್ರದ ಅತ್ಯಂತ ದೊಡ್ಡ ರಾಜಕೀಯ ಸಂಘಟನೆಯ ಹೆಸರೇ "ಕಾಂಗ್ರೆಸ್" ವಿಶ್ವದ ಅಗ್ರಮಾನ್ಯ ವ್ಯಕ್ತಿಯಾದ ಶ್ರೀ ಮಹಾತ್ಮಾಗಾಂಧಿಯವರ ಮಾರ್ಗದರ್ಶನದಲ್ಲಿ ಕಾಂಗ್ರೆಸ್ ಕಾರ್ಯನಿರ್ವಹಿಸುತ್ತದೆ. "ಖುದಾಯಿ ಖಿದ್ಮತ್‌ದಾರ್" (ದೇವರ ಸೇವಕರು) ಎಂಬ ಚಳುವಳಿಯ ಸ್ಥಾಪಕರಾದ ಖಾನ್ ಅಬ್ದುಲ್ ಗಫಾರ್ ಖಾನರು ಇದರ ಇನ್ನೊಬ್ಬ ಮುಖಂಡರಾಗಿದ್ದಾರೆ. ಈ ಮಹಾನ್ ಸಂಘಟನೆಯ ಚಟುವಟಿಕೆಗಳು ಭಾರತದ ಎಲ್ಲ ಭಾಗಗಳಲ್ಲಿಯೂ ಪಸರಿಸಿರುವುದರಿಂದ, ಮೈಸೂರು ಭಾಗದಲ್ಲಿಯೂ ಇದರ ಬೆಂಬಲಿಗರಿದ್ದಾರೆ. ಆದರೆ ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ ಸಂಘಟನೆಯು ಒಂದು ರೀತಿ ವಿಶಿಷ್ಟವಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಮೈಸೂರು ಮಹಾರಾಜರ ಆಶ್ರಯದಲ್ಲಿ ಜವಾಬ್ದಾರಿಯುತ ಸರ್ಕಾರದ ಸ್ಥಾಪನೆ ಮಾಡುವುದು ಇದರ ಮುಖ್ಯ ಗುರಿಯಾಗಿದ್ದು ಈ ಗುರಿಯನ್ನು ಸಾಧಿಸುವುದಕ್ಕಾಗಿ, ನ್ಯಾಯ, ಸತ್ಯ ಹಾಗೂ ಅಹಿಂಸಾ ಮಾರ್ಗಗಳನ್ನು ಅನುಸರಿಸುವುದೇ ನೀತಿಯಾಗಿತ್ತು. ಆ ಗುರಿಯನ್ನು ಸಾಧಿಸುವುದಕ್ಕಾಗಿ ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಸದಸ್ಯರನ್ನು ಹೊಂದಿದ್ದ ಸ್ಥಳೀಯ ಕಾಂಗ್ರೆಸ್ ಸಂಘಟನೆಯು, ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ನಂಬಿಕೆ ಹಾಗೂ ತತ್ವಗಳನ್ನು ಪ್ರಚಾರ ಮಾಡುವ ಮೂಲಕ ಜನತೆಗೆ ಶಿಕ್ಷಣ ನೀಡಬೇಕಾಗಿತ್ತು. ಕಾರ್ಯಕರ್ತರು, ಸಮರ್ಥವಾಗಿ ಹಾಗೂ ಕ್ರಿಯಾತ್ಮಕವಾಗಿ ರಾಜ್ಯದ ಎಲ್ಲೆಡೆಗಳಲ್ಲಿಯೂ ಕೆಲಸ ಮಾಡುವುದಕ್ಕಾಗಿ ಕಾಂಗ್ರೆಸ್ ಸಮಿತಿಗಳನ್ನು ರಚಿಸಲು ಸಂಕಲ್ಪ ಮಾಡಿದ್ದುದರಿಂದ, ಖಾದಿ ಬಳಕೆಯನ್ನು ಉತ್ತೇಜಿಸುವ ಮತ್ತು ಕಾಂಗ್ರೆಸ್ಸಿಗೆ ಜನರನ್ನು ಸದಸ್ಯರನ್ನಾಗಿ

ಜಿಲ್ಲೆಯಲ್ಲಿ ಪ್ರವಾಸ ಕೈಕೊಂಡಿದ್ದರು. ಅವರ ಆ ಪ್ರವಾಸದ ಕಾಲದಲ್ಲಿ ಕಾರ್ಯಕರ್ತರು ಕೆಲಸ ಮಾಡುವಾಗ ಸ್ಥಳೀಯ ಪೋಲೀಸರು ಅನೇಕ ತೊಂದರೆಗಳನ್ನುಂಟು ಮಾಡುತ್ತಿದ್ದರೆಂಬುದನ್ನು ಅವರು ವಿಷಾದದಿಂದ ತಿಳಿಸಿದರು. ಕಾಂಗ್ರೆಸ್ ಸಂಸದೀಯ ಮಂಡಲಿಯ ಅಧ್ಯಕ್ಷರಾಗಿದ್ದ ಹಾಗೂ ಈಗಾಗಲೇ ಆರು ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಕಾಂಗ್ರೆಸ್ಸಿಗೆ ಸದಸ್ಯರನ್ನು ಸೇರಿಸಿಕೊಂಡಿದ್ದ ಶ್ರೀ ಟಿ. ಸಿದ್ದಲಿಂಗಯ್ಯನವರು ಕಾಂಗ್ರೆಸ್ಸಿನ ಪರವಾಗಿ ಪ್ರಚಾರ ಕಾರ್ಯಕ್ಕಾಗಿ ತಮ್ಮ ಜೊತೆಗಾರರೊಡನೆ ಚನ್ನಗಿರಿ ತಾಲ್ಲೂಕಿನಲ್ಲಿ ಪ್ರವೇಶಿಸಿದರು. ರಾಜ್ಯದಲ್ಲಿ ಜವಾಬ್ದಾರಿಯುತ ಸರ್ಕಾರದ ಸ್ಥಾಪನೆಯ ಪರವಾಗಿ ಜನರಲ್ಲಿ ಅಭಿಪ್ರಾಯ ಮೂಡಿಸಲು ಉದ್ದೇಶಿಸಿದರು. ಇದು ರಾಜ್ಯದಲ್ಲಾಗಲಿ ಅಥವಾ ಬೇರೆಡೆಯಲ್ಲಾಗಲೀ ಹೊಸ ಚಳುವಳಿಯಾಗಿರಲಿಲ್ಲ. ಆದರೂ ಕಾಶ್ಮೀರ ಹಾಗೂ ಆಳ್ವಾರ್‌ಗಳಲ್ಲಿ ಆದಂತೆ ಕೆಲವಾರು ಮತೀಯ ಘರ್ಷಣೆಗಳು, ಈ ರಾಜ್ಯದಲ್ಲಿಯೂ ಆಗಬಹುದೆಂಬ ಪೂರ್ವಭಾವಿ ಕಲ್ಪನೆಗೆ ಯಾವುದೇ ಕಾರಣವಿರಲಿಲ್ಲ. "ಶಾಂತಿಯುತ ವಿಧಾನ" ವನ್ನು ಮಾತ್ರವೇ ಕಾಂಗ್ರೆಸ್ ಅಂಗೀಕರಿಸಿತ್ತಾದ್ದರಿಂದ, ಶ್ರೀ ಸಿದ್ದಲಿಂಗಯ್ಯನವರು ಚನ್ನಗಿರಿ ತಾಲ್ಲೂಕಿನ ಸರಹದ್ದಿನಲ್ಲಿ ಪ್ರವೇಶಿಸಿದಾಗ, ಪೊಲೀಸ್ ಇನ್ಸ್‌ಪೆಕ್ಟರ್ ಅವರು ಏಕೆ ಅಂಥ ಕ್ರಮ ಕೈಗೊಂಡರು ಎಂಬುದಕ್ಕೆ ಯಾವ ಕಾರಣವೂ ಇಲ್ಲ. ಅವರು ಚನ್ನಗಿರಿಯನ್ನು ತಲುಪಿದ ಕೂಡಲೇ ಸ್ಥಳೀಯ ಪೊಲೀಸ್ ಇನ್ಸ್‌ಪೆಕ್ಟರ್ ಅವರು ಈ ಮುಂದಿನದಂತೆ ಅವರಿಗೆ ಆದೇಶವನ್ನು ಜಾರಿ ಮಾಡಿದರು.

> "ಚನ್ನಗಿರಿ ತಾಲ್ಲೂಕಿನ ಪರಿಮಿತಿಗಳೊಳಗೆ ರಾಜಕೀಯ ಹಾಗೂ ತೆರಿಗೆಯ ಚಳುವಳಿಯನ್ನು ಪ್ರಾರಂಭಿಸಲು ಕೆಲವು ಕಾಂಗ್ರೆಸ್ ಪ್ರಚಾರಕರು ಉದ್ದೇಶಿಸಿದ್ದಾರೆಂದು ಮತ್ತು ಆ ಉದ್ದೇಶಕ್ಕಾಗಿ ತಾಲ್ಲೂಕಿನ ಪ್ರಮುಖ ಕೇಂದ್ರಗಳಲ್ಲಿ ಸಮಿತಿ ಹಾಗೂ ಉಪ ಸಮಿತಿಗಳನ್ನು ರಚಿಸಲು ಪ್ರಯತ್ನಿಸುತ್ತಿದ್ದಾರೆಂದು ಮತ್ತು ಈ ವಿಷಯದಲ್ಲಿ ಸಾರ್ವಜನಿಕ ಸಹಾನುಭೂತಿಯನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆಂದು ನನಗೆ ತಿಳಿದು ಬಂದಿದೆ. ಮತ್ತು ಇಂತ ಅಪಾಯಕಾರಿ ಚಟುವಟಿಕೆಗಳಿಗೆ ಅನುಮತಿ ನೀಡಿದ್ದಾದರೆ ಇತ್ತೀಚಿನ ಅವರ ಚಟುವಟಿಕೆಗಳಿಂದಾಗಿ ಹೊನ್ನಾಳಿ ಹಾಗೂ ಇತರ ಸ್ಥಳಗಳಲ್ಲಿ ಸಾರ್ವಜನಿಕ ನೆಮ್ಮದಿಗೆ ಅಪಾಯ ಉಂಟಾಗಿರುವುದು ಹಾಗೂ ಶಾಂತಿಪಾಲನೆ ಭಂಗವಾಗಿರುವುದು ಸ್ಪಷ್ಟವಾಗಿರುವುದರಿಂದ, ಚನ್ನಗಿರಿ ತಾಲ್ಲೂಕಿನ ಇನ್ಸ್‌ಪೆಕ್ಟರ್ ಆಫ್ ಪೊಲೀಸ್ ಆದ ನಾನು, ಈ ಸಾಮಾನ್ಯ ಆದೇಶದ ಮೂಲಕ ಅಗತ್ಯಪಡಿಸುವುದೇನೆಂದರೆ, ಚನ್ನಗಿರಿ ತಾಲ್ಲೂಕಿನ ಪರಿಮಿತಿಗಳೊಳಗೆ ಸಾರ್ವಜನಿಕ ಭಾಷಣಗಳನ್ನು ಮಾಡುವ ಅಥವಾ ಏರ್ಪಡಿಸುವ ಅಥವಾ ಸಾರ್ವಜನಿಕ ಸಭೆ ನಡೆಸುವ ಅಥವಾ ಕಾಂಗ್ರೆಸ್ ಧ್ವಜವನ್ನು ಹಾರಿಸುವ ವ್ಯಕ್ತಿಗಳು ಈ ದಿನದಿಂದ ಎಂದರೆ, 19ನೇ ಸೆಪ್ಟೆಂಬರ್ 1937 ರಿಂದ ಎರಡು ತಿಂಗಳ ಅವಧಿಯವರೆಗೆ, ಮೈಸೂರು ಪೊಲೀಸ್ ವಿನಿಯಮಗಳ 44 (1) ಮತ್ತು 46 (1ಎ) ಪ್ರಕರಣಗಳ ಅಡಿಯಲ್ಲಿ, ಸಕ್ಷಮ ಪೊಲೀಸ್ ಅಧಿಕಾರಿಯ ಅನುಮತಿ ಇಲ್ಲದೆ ಅಥವಾ ಸಕ್ಷಮ ಮ್ಯಾಜಿಸ್ಟ್ರೇಟರು ನೀಡಿದ ಲೈಸನ್ಸ್ ಇಲ್ಲದೆ ಹಾಗೂ ಮಾಡತಕ್ಕದ್ದಲ್ಲ".

"ಮೇಲ್ಕಂಡ ಈ ಆದೇಶವು ಪೊಲೀಸ್ ಅಧಿಕಾರಿಯ ಅಧಿಕಾರ ವ್ಯಾಪ್ತಿಗೆ

46ನೇ ಪ್ರಕರಣಗಳ ಅಡಿಯಲ್ಲಿ ಹಿರಿಯ ಪೊಲೀಸ್ ಅಧಿಕಾರಿಗಳು, ಒಂದು ನಿರ್ದಿಷ್ಟ ಗ್ರಾಮದಲ್ಲಿ ಶಾಂತಿಪಾಲನೆಗಾಗಿ ಆದೇಶಗಳನ್ನು ನೀಡಬಹುದೇ ಹೊರತು ಸಮಗ್ರ ತಾಲ್ಲೂಕಿಗೆ ಅಲ್ಲ. ಯಾವುದೇ ಸಂದರ್ಭದಲ್ಲಿಯೂ ಅವರು ಮ್ಯಾಜಿಸ್ಟ್ರೇಟರ ಅಧಿಕಾರಗಳನ್ನು ವಹಿಸಿಕೊಳ್ಳುವಂತಿಲ್ಲ. ಈ ಸನ್ನಿವೇಶದಲ್ಲಿ ಪೊಲೀಸ್ ಅಧಿಕಾರಿಯು, ಪೋಲೀಸ್ ಮ್ಯಾಜಿಸ್ಟ್ರೇಟರ ಪಾತ್ರ ವಹಿಸಿಕೊಂಡಿದ್ದಾರೆ."

"ಪೊಲೀಸ್ ಇನ್ಸ್‌ಪೆಕ್ಟರ್‌ರ ಆದೇಶವು ಅಧಿಕಾರ ವ್ಯಾಪ್ತಿಗೆ ಮೀರಿದ್ದಾಗಿತ್ತೆಂದು ತಿಳಿದಿತ್ತು ಮತ್ತು ಆ ಪೋಲೀಸ್ ಅಧಿಕಾರಿಯು ಸದರಿ ಆದೇಶವನ್ನು ನಿಜವಾಗಿಯೂ ಎಷ್ಟರಮಟ್ಟಿಗೆ ಜಾರಿಗೊಳಿಸುತ್ತಾರೆಂಬುದನ್ನು ನೋಡುವ ಉದ್ದೇಶದಿಂದ ಒಬ್ಬ ಕಾಂಗ್ರೆಸ್ ಕಾರ್ಯಕರ್ತರಾದ, ಶ್ರೀ ಪಾರ್ಥಸಾರಾಯಣ ಪಂಡಿತ ಅವರು ಒಂದು ಕರಪತ್ರವನ್ನು ಲಗತ್ತಿಸಿ ಇನ್ಸ್‌ಪೆಕ್ಟರರಿಗೆ ಒಂದು ಪತ್ರ ಬರೆದು, ಚನ್ನಗಿರಿ ಬಾಲಕಿಯರ ಶಾಲಾ ಕಟ್ಟಡದಲ್ಲಿ ಸಭೆ ನಡೆಸುವುದಕ್ಕಾಗಿ ಅನುಮತಿಯನ್ನು ಕೇಳಿದರು. ತಾಲ್ಲೂಕಿನಲ್ಲಿ ಉಂಟಾಗಿರುವ ಪ್ರಸಕ್ತ ಸನ್ನಿವೇಶಗಳಲ್ಲಿ ಯಾವುದೇ ಭಾಷಣಗಳಿಗೆ ಅಥವಾ ಸಭೆಗಳಿಗೆ ಅನುಮತಿ ನೀಡಲಾಗುವುದಿಲ್ಲವೆಂದು ಅವರು ಉತ್ತರಿಸಿದರು. ಹೊನ್ನಾಳಿಯಲ್ಲಿ ನಡೆದ ಘಟನೆಗಳೇ ಈ ಆದೇಶಕ್ಕೆ ಕಾರಣವಾಗಿವೆ ಎಂದೂ ಇನ್ಸ್‌ಪೆಕ್ಟರ್ ಹೇಳಿದರು. ಆದರೆ ಕಾಂಗ್ರೆಸ್ ಕಾರ್ಯಕರ್ತರು ಆ ಸ್ಥಳಕ್ಕೆ ಭೇಟಿಕೊಟ್ಟಾಗ ಅವರು ಹೇಳಿದ ಅಂಥ ದೊಡ್ಡ ಅನಾಹುತವಾಗಲಿ ಅಥವಾ ಸಾರ್ವಜನಿಕ ಶಾಂತಿಗೆ ಭಂಗ ತರುವ ಸಾಮಾನ್ಯ ಘಟನೆಯಾಗಲಿ ನಡೆದಿರಲಿಲ್ಲವೆಂದು ಸಭಾಧ್ಯಕ್ಷರು ಖಚಿತಪಡಿಸಿದರು. ಮ್ಯಾಜಿಸ್ಟ್ರೇಟರು ಇಂಥ ಸಂಗತಿಗಳಿಗೆ ಹೊಣೆಗಾರರಾಗಿರುತ್ತಾರೆ ಮತ್ತು ಇನ್ಸ್‌ಪೆಕ್ಟರರು ಸದರಿ ಆದೇಶವನ್ನು ಹೊರಡಿಸಿದ್ದಷ್ಟೇ ಅಲ್ಲದೆ ಕಾಂಗ್ರೆಸ್ ಕಾರ್ಯಕರ್ತರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋದಾಗಲೂ ಅವರನ್ನು ಹಿಂಬಾಲಿಸಲು ಒಬ್ಬರು ಸಬ್ ಇನ್ಸ್‌ಪೆಕ್ಟರ್ ಹಾಗೂ ಧಫೇದಾರರನ್ನು ನಿಯೋಜಿಸಿದ್ದರು. ಈ ಅಧೀನ ಅಧಿಕಾರಿಗಳು, ಹಳ್ಳಿ ಹಳ್ಳಿಗೂ ಮತ್ತು ಮನೆ ಮನೆಗೂ ಹೋಗಿ, ಕಾಂಗ್ರೆಸ್ಸಿಗೆ ಸೇರಿಕೊಳ್ಳಕೂಡದೆಂದೂ, ಹಾಗೆ ಮಾಡಿದ್ದಾದರೆ, ಕಾಂಗ್ರೆಸ್ ಕಾರ್ಯಕರ್ತರು ನಿಮ್ಮನ್ನು ಜೈಲಿಗೆ ಕಳುಹಿಸುವರೆಂದೂ ಹಾಗೂ ಅವರು ಪಲವಾರು ಅಪಾಯಗಳಿಗೆ ಅವರನ್ನು ಗುರಿಪಡಿಸುವರೆಂದೂ ಹೇಳುತ್ತ ಕಾಂಗ್ರೆಸ್ ವಿರೋಧಿ ಪ್ರಚಾರ ಮಾಡಿದರು. ಆ ಮೇಲೆ ಶ್ರೀ ಸಿದ್ದಲಿಂಗಯ್ಯ ಅವರು ಸಾಗರಕ್ಕೆ ಬಂದಾಗ, ಅಮಲ್ದಾರ್ ಮ್ಯಾಜಿಸ್ಟ್ರೇಟರು ಅವರ ಮೇಲೆ ನಿರ್ಬಂಧಕ ಆಜ್ಞೆಯನ್ನು ಜಾರಿಗೊಳಿಸಿದರು. ಆ ಆಜ್ಞೆಯನ್ನು ವಾಸ್ತವಿಕವಾಗಿ ಅವರು ಕಾರಿನಲ್ಲಿದ್ದಾಗಲೇ ಜಾರಿಗೊಳಿಸಲಾಗಿತ್ತು. ಕಾರಿನ ಮೇಲಿದ್ದ ಕಾಂಗ್ರೆಸ್ ಧ್ವಜವನ್ನು ಪೊಲೀಸರು ಬಲವಂತವಾಗಿ ಕಿತ್ತುಕೊಂಡರು. ಈ ಸಂದರ್ಭದಲ್ಲಿ ದಿವಾನ್ ಅವರು ಪ್ರತಿನಿಧಿ ಸಭೆಯ ಪ್ರಾರಂಭಿಕ ಭಾಷಣದಲ್ಲಿ ರಾಷ್ಟ್ರಧ್ವಜದ ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರದ ನೀತಿಯನ್ನು ಕುರಿತು ಅವರು ಹೇಳಿದುದನ್ನು ಈ ಸಭೆಗೆ ಸಭಾಧ್ಯಕ್ಷರು ನೆನಪು ಮಾಡಬಯಸಿದರು, ಎಂದರೆ ಕಾಂಗ್ರೆಸ್ ಒಂದು ದೊಡ್ಡ ರಾಜಕೀಯ ಪಕ್ಷವಾಗಿದ್ದು ಆ ಪಕ್ಷದ ನ್ಯಾಯಬದ್ಧ ಚಟುವಟಿಕೆಗಳಿಗೆ ಸಂಬಂಧಿಸಿದ ಸ್ಥಳಗಳಲ್ಲಿ ಹಾಗೂ ಸಂದರ್ಭಗಳಲ್ಲಿ ಅದರ ಚಿಹ್ನೆಯನ್ನು ಪ್ರದರ್ಶಿಸುವುದಕ್ಕೆ ಸರ್ಕಾರವು ಅಡ್ಡಿಪಡಿಸಿತೆಂದು. ಆದರೆ ರಾಜ್ಯದ ಧ್ವಜದ ಗೌರವ ಸೂಚನೆಯ ದ್ಯೋತಕವಾಗಿ ಅದನ್ನು ಪ್ರದರ್ಶಿಸುವುದನ್ನು ಆಕ್ಷೇಪಿಸಲಾಗಿತ್ತು. ಮೈಸೂರಿನಲ್ಲಿ ಕಾಂಗ್ರೆಸ್ ಧ್ವಜವನ್ನು 'ಆಕ್ಷೇಪಣೆ

ಇಲ್ಲದ್ದು' ಎಂದು ದಿವಾನರು ವಿವರಿಸಿದ್ದ ಅರ್ಥದಲ್ಲಿ ಹಾಗೂ ವಿಧಾನದಲ್ಲಿಯೇ ಉಪಯೋಗಿಸಲಾಗಿತ್ತೆಂದು ಸಭಾಧ್ಯಕ್ಷರು ಸ್ಪಷ್ಟಪಡಿಸಿದರು. ಆದರೂ ಸಾಗರದ ಅಮಲ್ದಾರ್ ಮ್ಯಾಜಿಸ್ಟ್ರೇಟರು, ಕಾಂಗ್ರೆಸ್ ಸಂಸದೀಯ ಮಂಡಲಿಯ ಅಧ್ಯಕ್ಷರ ಕಾರಿನ ಮೇಲೆ ರಾಷ್ಟ್ರಧ್ವಜವನ್ನು ಪ್ರದರ್ಶಿಸುವುದನ್ನು ಆಕ್ಷೇಪಿಸಿ ಅಲ್ಲಿ ನೆರೆದಿದ್ದ ಸಾವಿರಾರು ಜನರ ಎದುರಿನಲ್ಲಿಯೇ ಬಲಾತ್ಕಾರವಾಗಿ ಕಿತ್ತುಕೊಳ್ಳಲಾಯಿತು. ಈ ರೀತಿ ಪ್ರಚೋದನೆ ನಡೆಯುತ್ತಿದ್ದಾಗ್ಯೂ, ಕಟ್ಟಾ ಕಾಂಗ್ರೆಸ್ ಅನುಯಾಯಿಗಳಾಗಿ ಶ್ರೀ ಸಿದ್ದಲಿಂಗಯ್ಯನವರು ಆಶ್ಚರ್ಯಕರವಾಗಿ ವಿಚಲಿತರಾಗದೇ ಶಾಂತ ಚಿತ್ತದಿಂದ ಇದ್ದರು. ಜನರು ಅಶಾಂತಿ ಹಾಗೂ ಅಸಮಾಧಾನದಿಂದ ಕುದಿಯುತ್ತಿದ್ದರು. ಪೊಲೀಸರ ಗುಂಡುಗಳಿಗೆ ತಮ್ಮ ಜೀವನವನ್ನು ತೆತ್ತಾದರೂ ರಾಷ್ಟ್ರಧ್ವಜವನ್ನು ರಕ್ಷಿಸುವ ಪಣತೊಟ್ಟಿದ್ದರು. ಇಂಥ ಪರಿಸ್ಥಿತಿಯಲ್ಲಿಯೂ ಶ್ರೀ ಸಿದ್ದಲಿಂಗಯ್ಯ ಅವರು ಮೊಣಕಾಲೂರಿ ಕುಳಿತು, ಜನರು ಕ್ರೋಧಿತರಾಗಬಾರರದೆಂದೂ, ತಾಳ್ಮೆಯಿಂದ ಇರಬೇಕೆಂದು ಹೇಳಿ ಮಹಾತ್ಮಾಗಾಂಧಿಯವರ ಬೋಧನೆಗಳನ್ನು ಅವರಿಗೆ ನೆನಪಿಸಿಕೊಟ್ಟರು ಮತ್ತು ಶಾಂತರಾಗಿರಬೇಕೆಂದು ಮತ್ತು ಪ್ರತಿಯೊಬ್ಬರೂ ರಾಷ್ಟ್ರಧ್ವಜಕ್ಕೆ ನಮಸ್ಕರಿಸುವ ದಿನ ಬಂದೇ ಬರುತ್ತೆಂಬ ದೃಢ ನಂಬಿಕೆಯಿಂದ ಅಹಿಂಸೆಯ ಮಾರ್ಗವನ್ನೇ ಅವಲಂಬಿಸುವಂತೆಯೂ ವಿನಂತಿಸಿಕೊಂಡರು. ಶ್ರೀ ಸಿದ್ದಲಿಂಗಯ್ಯನವರು ಆ ವಿಷಯವನ್ನು ಅಲ್ಲಿಗೇ ಕೈ ಬಿಟ್ಟರು ಹಾಗೂ ಆ ಸಂದರ್ಭದಲ್ಲಿ ಪೊಲೀಸರು ತೆಗೆದುಕೊಂಡು ಹೋಗಿದ್ದ ಧ್ವಜವನ್ನು ಈವರೆಗೂ ಹಿಂದಿರುಗಿಸಿಲ್ಲ. ಈ ಸಂಗತಿಗಳನ್ನು ಸ್ಥಳೀಯ ಕಾಂಗ್ರೆಸ್ ಕಾರ್ಯಕರ್ತರು ಪೊಲೀಸ್ ಸೂಪರಿಂಟೆಂಡೆಂಟರ ಗಮನಕ್ಕೆ ತಂದರು ಮತ್ತು ಇದನ್ನು ವಾರ್ತಾ ಪತ್ರಿಕೆಗಳ ಮೂಲಕ ವ್ಯಾಪಕ ಪ್ರಚಾರ ಮಾಡಿದರು. ನಲ್ಲೂರಿನಲ್ಲಿಯೂ ಇದೇ ಚೆನ್ನಗಿರಿ ಪೊಲೀಸ್ ಇನ್ಸ್‌ಪೆಕ್ಟರು ತಾವಾಗಿಯೇ ಕಾಂಗ್ರೆಸ್ ಸಭೆ ನಡೆಯುತ್ತಿದ್ದ ದೇವಸ್ಥಾನವನ್ನು ಪ್ರವೇಶಿಸಿ ಕಾಂಗ್ರೆಸ್ ಧ್ವಜವನ್ನು ತೆಗೆದುಕೊಂಡುಹೋದರು. ಆ ಸಭೆಯಲ್ಲಿ ಹಾಜರಿದ್ದ ಕಾಂಗ್ರೆಸ್ ಕಾರ್ಯಕರ್ತ ಹಾಗೂ ಇತರ ಜನರು ಹೀಗೆ ಮಾಡುತ್ತಿರುವಿರೆಂದು ಕೇಳಿದಾಗ ಪೊಲೀಸ್ ಕಾಯ್ದೆಯ ನಿರ್ದಿಷ್ಟವಾದ ಪ್ರಕರಣಗಳ ಮೇರೆಗೆ ಹೀಗೆ ಮಾಡುತ್ತಿರುವುದಾಗಿ ಹೇಳಿದರು ಹಾಗೂ ಧ್ವಜವನ್ನು ಮ್ಯಾಜಿಸ್ಟ್ರೇಟರ ನ್ಯಾಯಾಲಯದಲ್ಲಿಡುವುದಾಗಿಯೂ ಹೇಳಿದರು.

"ಹೊಳಲ್ಕೆರೆ ತಾಲ್ಲೂಕಿನ ರಾಮಗಿರಿಯಲ್ಲಿ 12ನೇ ಅಕ್ಟೋಬರ್ 1937ರಂದು ನಡೆದ ಘಟನೆಯಲ್ಲಿ ಪೊಲೀಸರ ದಬ್ಬಾಳಿಕೆ ಇನ್ನೂ ಅತಿರೇಕದ್ದಾಗಿತ್ತು. ಕಾಂಗ್ರೆಸ್ ಕಾರ್ಯಕರ್ತರು ಆ ತಾಲ್ಲೂಕಿಗೆ ಭೇಟಿ ಕೊಟ್ಟಾಗ, ರಾಷ್ಟ್ರೀಯ ಧ್ವಜವನ್ನು ಪ್ರದರ್ಶಿಸುವುದನ್ನು ನಿಷೇಧಿಸಿ ಮ್ಯಾಜಿಸ್ಟ್ರೇಟರು ನೀಡಿದ್ದ ಆಜ್ಞೆಯ ಅವಧಿಯು ಆಗಷ್ಟೇ ಮುಗಿದಿತ್ತು. ಆದರೂ ಆ ಆಜ್ಞೆ ಇನ್ನೂ ಜಾರಿಯಲ್ಲಿದ್ದಿದ್ದರೆ ಹೇಗೋ ಹಾಗೆ ಪೊಲೀಸರು ಕಾರ್ಯನಿರ್ವಹಿಸಿದರು ಹಾಗೂ ಅವರು ಬಹಳ ಉಗ್ರವಾಗಿ ನಡೆದುಕೊಂಡರು. ಈ ಸಂದರ್ಭವನ್ನು "ದೌರ್ಜನ್ಯ ದಿನ" ವಾಗಿ ಆಚರಿಸಲಾಯಿತು. ಆ ದಿನದಂದು ನಡೆದ ಸಭೆ ಅಥವಾ ಮೆರವಣಿಗೆಯನ್ನು ಪ್ರತಿಬಂಧಿಸುವಂಥ ಮ್ಯಾಜಿಸ್ಟ್ರೇಟರ ಆದೇಶ ಯಾವುದೂ ಇರಲಿಲ್ಲ. ಹಾಗಿದ್ದಾಗ್ಯೂ ಪೊಲೀಸರು ತಮಗೆ ಯಾವುದೇ ನಿಯಮ ತಿಳಿದಿಲ್ಲವೆಂದೂ ತಿಳಿಯುವ ಅಗತ್ಯವೂ ಇಲ್ಲವೆಂದು ಹೇಳಿ ಸಭೆ ಹಾಗೂ ಮೆರವಣಿಗೆಗಳನ್ನು ತಡೆದರು. ಹಾಗೆ ಮಾಡುವಾಗ ಅವರು ಕಾಂಗ್ರೆಸ್ ಕಾರ್ಯಕರ್ತರ ಮೇಲೆ ಹಲ್ಲೆ ಮಾಡಿದ್ದಲ್ಲದೇ ಸಭೆ ಸೇರಿದ್ದ ಅನೇಕರಿಗೆ

ಗಾಯಗಳಾಗುವಂತೆ ಡ್ಯಾಗರ್ ಬಳಸಿದರು. ಕಾಂಗ್ರೆಸ್ ಧ್ವಜ ಹಾಗೂ ಮಹಾತ್ಮಾ ಗಾಂಧಿಯವರ ಭಾವಚಿತ್ರಗಳನ್ನು ಕಿತ್ತುಕೊಂಡು ಹೋದರು. ಪೊಲೀಸರಿಂದ ಅವಮಾನ ಹಾಗೂ ಹಿಂಸೆಗೊಳಗಾದರೂ ಸಭೆಯಲ್ಲಿದ್ದವರು ಎಳ್ಳಷ್ಟೂ ವಿಚಲಿತರಾಗಲಿಲ್ಲವೆಂದು ಸಭಾಧ್ಯಕ್ಷರು ಹೆಮ್ಮೆಯಿಂದ ತಿಳಿಸಿದರು. ಪ್ರತಿಯೊಬ್ಬರೂ ಅತ್ಯಂತ ಶಾಂತಿಯಿಂದ ವರ್ತಿಸಿದರು. ಮೈಸೂರು ಸಂಸ್ಥಾನದ ಪ್ರಜೆಗಳ ಮೇಲೆ ಅತ್ಯಂತ ಹೆಚ್ಚು ಪರಿಣಾಮ ಬೀರಿದ ಪ್ರಸಂಗ ಇದಾಗಿತ್ತು. ಈ ಘಟನೆಯನ್ನು ಜಿಲ್ಲಾ ಕಾಂಗ್ರೆಸ್ ಸಮಿತಿಗೆ ವರದಿ ಮಾಡಲಾಯಿತು ಮತ್ತು ವಾರ್ತಾ ಪತ್ರಿಕೆಗಳಲ್ಲೂ ಪ್ರಕಟಿಸಲಾಯಿತು. ಇದನ್ನು ಯಥೋಚಿತವಾಗಿ ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟರಿಗೂ ತಿಳಿಸಲಾಯಿತು. ಸಂಸ್ಥಾನದಲ್ಲಿ ಕಾಂಗ್ರೆಸ್ ಪ್ರತಿನಿಧಿಗಳು ಕೈಕೊಂಡ ಪ್ರಚಾರ ಕಾರ್ಯದಿಂದಾಗಿ ಯಾವುದೇ ವಿಪತ್ತು ಸಂಭವಿಸುವುದಿಲ್ಲವೆಂಬುದನ್ನು ಸರ್ಕಾರಕ್ಕೆ ಮನಗಾಣಿಸಲು ಇದೊಂದು ಸಂದರ್ಭವೇ ಸಾಕಾಗಿತ್ತು. ಮೇಲೆ ಹೇಳಿದ ಘಟನೆ ನಡೆದ ದಿನದಂದು ಸಭೆಯಲ್ಲಿ ಭಾಗವಹಿಸಿದ್ದ ಜನರು ತಮ್ಮ ಕ್ರೋಧವನ್ನು ತೋರ್ಪಡಿಸಲು ಪೋಲೀಸ್ ಅಧಿಕಾರಿಗಳೊಡನೆ ಅಹಿತರಕವಾಗಿ ನಡೆದುಕೊಳ್ಳಲಿಲ್ಲ. ಅವರು ವಿಚಲಿತರಾಗದೆ ಶಾಂತಿಯಿಂದ ಕುಳಿತಿದ್ದರು. ಏಕೆಂದರೆ ಅಹಿಂಸೆಯೇ ಮಂತ್ರವಾಗಿತ್ತು. ಅಲ್ಲದೇ ಪ್ರತಿಯೊಬ್ಬ ಕಾಂಗ್ರೆಸ್ ಕಾರ್ಯಕರ್ತನಿಗೂ ಸತ್ಯ ಹಾಗೂ ಅಹಿಂಸೆಗಳೇ ಮಾರ್ಗದರ್ಶನ ತತ್ವಗಳಾಗಿದ್ದವು. ವಾಸ್ತವಿಕವಾಗಿ ಹೇಳುವುದಾದರೆ, ಸಂಸ್ಥಾನದ ಬಹುತೇಕ ಅನೇಕ ಸಾರ್ವಜನಿಕ ವಿಷಯದಲ್ಲಿ ಇದನ್ನೇ ಹೇಳಬಹುದಾಗಿದೆ ಅದೇ ರೀತಿಯಾಗಿ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರ ವಿಷಯದಲ್ಲಿಯೂ ಅದೇ ಮಾತು ಅನ್ವಯವಾಗುತ್ತದೆ. ಅವರು ಸಂಸ್ಥಾನದ ಎಲ್ಲ ಜನರ ವಿಶ್ವಾಸಗಳಿಸಿದ್ದರು. ಅವರು ಪ್ರಜಾ ಪ್ರತಿನಿಧಿ ಸಭೆಯಲ್ಲಿರಲಿ ಅಥವಾ ಹೊರಗೆ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರಲಿ ಅವರು ಗೌರವದಿಂದ ಹಾಗೂ ಸಂವಿಧಾನಬದ್ಧರಾಗಿ ಸ್ವತಃ ಅವುಗಳಿಗೇ ಬದ್ಧರಾಗಿ ಕಾರ್ಯನಿರ್ವಹಿಸುತ್ತಿದ್ದರು. ಈ ಸದನದ ಸಭಾಧ್ಯಕ್ಷರು, ಈ ಮಣ್ಣಿನ ಮಗನಾಗಿ ಜನರ ಜೊತೆಗೆ ಒಂದಾಗಿ ಇರಬಯಸುತ್ತಿದ್ದರೆಂಬುದು ಸುದೈವದ ಸಂಗತಿಯಾಗಿದೆ. ಆದರೆ ಅವರು ದಿವಾನರಾಗಿ ತಮ್ಮ ಕಾರ್ಯನಿರ್ವಹಿಸುವಾಗ ಅವರ ಹಾಗೂ ಪ್ರಜಾ ಪ್ರತಿನಿಧಿಗಳ ನಡುವೆ ಸ್ವಲ್ಪಮಟ್ಟಿನ ಬಿಗುವಿನ ಹಾಗೂ ತಪ್ಪು ತಿಳುವಳಿಕೆಯಿಂದ ಕೂಡಿದ ಸನ್ನಿವೇಶಗಳು ಉಂಟಾಗುತ್ತಿದ್ದುದು ದುರ್ದೈವದ ಸಂಗತಿಯಾಗಿದೆ. ಆದರೆ ಇಂಥ ಪರಿಸ್ಥಿತಿ ಕ್ಷಣಿಕ ಕಾಲದ್ದೆಂದು ಮತ್ತು ಸುಮಧುರ ಸಂಬಂಧಗಳು ಹಾಗೂ ಪರಸ್ಪರ ವಿಶ್ವಾಸಗಳು ಮತ್ತೆ ಏರ್ಪಾಡಾಗುತ್ತವೆಂಬ ವಿಶ್ವಾಸ ಸಭಾಧ್ಯಕ್ಷರಿಗಿತ್ತು. ಈಗಿರುವ ತಪ್ಪುತಿಳುವಳಿಕೆ ತಾತ್ಕಾಲಿಕವಾಗಿದ್ದರೂ ಇದರ ಪರಿಣಾಮವಾಗಿ, ಒಬ್ಬ ಸದಸ್ಯರೊಡನೆ ಸರಿಯಾದ ರೀತಿಯಲ್ಲಿ ನಡೆದುಕೊಳ್ಳಲಿಲ್ಲ. ಪ್ರತಿನಿಧಿ ಸಭೆಯ ಸದಸ್ಯರಾಗಿ ಮತ್ತು ಸರ್ಕಾರವನ್ನು ಪ್ರತಿನಿಧಿಸುವ ದಿವಾನರ ಪ್ರತಿನಿಧಿಗಳಾಗಿಯೂ ಮೈಸೂರಿಗೆ ಹೋಗಿ ಬಂದರು. ಸನ್ನಿವೇಶ ಹೀಗಿರುವಾಗ ಪ್ರತಿನಿಧಿ ಸಭೆಯ ಅತ್ಯಂತ ಗೌರವಾನ್ವಿತ ಸದಸ್ಯರಾದ ಶ್ರೀ ಕೆ.ಟಿ. ಭಾಷ್ಯಂ ಅಯ್ಯಂಗಾರ್ ಅವರ ನಾಗರಿಕ ಹಕ್ಕಿನಲ್ಲಿ ಮಧ್ಯಪ್ರವೇಶಿಸಲಾಯಿತೆಂದೂ ಮತ್ತು ಅವರನ್ನು ದಸ್ತಗಿರಿ ಮಾಡಲು ಅವಕಾಶ ಕೊಡಲಾಯಿತೆಂದೂ ಮತ್ತು ಪ್ರತಿನಿಧಿಗಳಿದ್ದ ಮನೆಯಿಂದ ಹೊರಗೆ ಕಳುಹಿಸಲಾಯಿತೆಂದೂ ತಿಳಿಸಲು ವಿಷಾದವಾಗುತ್ತದೆ ಎಂದು ಸಭಾಧ್ಯಕ್ಷರು ಹೇಳಿದ್ದರು. ಸಂವಿಧಾನಬದ್ಧವಾದ ಒಂದು ಸಂಸ್ಥೆಯ ಸಭೆಗೆ ಹಾಜರಾಗುವ ನಿರ್ದಿಷ್ಟ ಉದ್ದೇಶಕ್ಕಾಗಿ ದಿವಾನರ ಅತಿಥಿಯಾಗಿ ಅವರು

ಮೈಸೂರಿಗೆ ಹೋಗಿದ್ದರು. ಸಂಕ್ಷಿಪ್ತವಾಗಿ ಹೇಳುವುದಾದರೆ, ಸ್ವಯಂ ದಿವಾನರ ಅತಿಥಿಯಾದ ಒಬ್ಬರು, ಅವರ ಸಹೋದ್ಯೋಗಿಗಳೊಡನೆ ಕರ್ತವ್ಯ ನಿರ್ವಹಿಸುತ್ತಿರುವಾಗ ಅವರನ್ನು ದಸ್ತಗಿರಿ ಮಾಡುವುದಕ್ಕೆ ದಿವಾನರೇ ಅನುಮತಿ ನೀಡಿದಂತಾಯಿತು. ಆ ಅತಿಥಿಯು, ಪ್ರತಿನಿಧಿ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಮುಖಂಡರಾಗಿದ್ದವರು. ಎಲ್ಲ ರೀತಿಯಿಂದ ಅವರ ವಿಶ್ವಾಸಾರ್ಹ ಗಣ್ಯ ವ್ಯಕ್ತಿಗಳಾಗಿದ್ದರೂ ಅವರನ್ನು ಅಂಥ ರೀತಿಯಲ್ಲಿ ನಡೆಸಿಕೊಂಡಿದ್ದು ದುರ್ದೈವದ ಸಂಗತಿ. ಪೊಲೀಸರು ಪ್ರತಿನಿಧಿಗಳಿದ್ದ ಮನೆಯನ್ನು ಅದರ ಮಾಲೀಕರ ಅನುಮತಿ ಇಲ್ಲದೇ ಪ್ರವೇಶಿಸಿ, ಸದಸ್ಯರನ್ನು ದಸ್ತಗಿರಿ ಮಾಡಿದರು ಮತ್ತು ಒಬ್ಬ ಅಪರಾಧಿಯಂತೆ ರಾತ್ರೋರಾತ್ರಿ ಬೆಂಗಳೂರಿಗೆ ಕರೆತಂದರು. ಪೊಲೀಸರ ಈ ಕೃತ್ಯ ಘನತೆ ತರುವಂಥದ್ದಲ್ಲ. ಈ ಅತಿರೇಕವು ಪೊಲೀಸರು ತಮಗೆ ಯಾವುದೇ ಅಂಕುಶವಿಲ್ಲವೆಂದು ತಿಳಿದಿರುವಂತೆ ತೋರುತ್ತದೆ ಮತ್ತು ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ದೇಶಾದ್ಯಂತ ಹಬ್ಬಿದಂಥ ಹೊಸ ಹೊಸ ಚಿಂತನೆಗಳು ಪೊಲೀಸರ ಮನಸ್ಸಿಗೆ ನಾಟಲೇ ಇಲ್ಲ. ಇಂದು ಈ ಮೈಸೂರು ಸಂಸ್ಥಾನವು 1932-33ರ ಬ್ರಿಟಿಷ್ ಇಂಡಿಯಾ ದಂತೆಯೇ ಇದೆ. ಆದರೆ ಬ್ರಿಟಿಷ್ ಇಂಡಿಯಾದಲ್ಲಿ ಉಂಟಾದ ಬದಲಾವಣೆಗಳು ಇಲ್ಲಿಯ ಜನರಿಗೆ ಅದರಲ್ಲಿಯೂ ವಿಶೇಷವಾಗಿ ಪೊಲೀಸ್ ಇಲಾಖೆಗೆ ತಟ್ಟಲೇ ಇಲ್ಲ. ಅದು ಸ್ಥಳೀಯ ಪೊಲೀಸ್ ವ್ಯವಸ್ಥೆಯು, ಜಡ ಸ್ವರೂಪದ ಕುರುಹು ಮಾತ್ರವಾಗಿ ಉಳಿದಿದೆ. ಮನಬಂದಂತೆ ಕೆಲಸ ಮಾಡಲು ಆತುರವಿತ್ತೇ ಹೊರತು ತಮ್ಮ ಅಧಿಕಾರಗಳ ಇತಿಮಿತಿಗಳನ್ನು ಕುರಿತು ವಿವೇಚಿಸುವ ವ್ಯವಧಾನ ಈ ಪೊಲೀಸರಿಗಿರಲಿಲ್ಲ.

"ಈ ವಿಷಯ ಮುಂದುವರೆಸಿ ಶ್ರೀ ಚಂದ್ರಶೇಖರ ಶೆಟ್ಟಿಯವರು ಈ ರೀತಿ ಹೇಳಿದರು, ಸಂಸ್ಥಾನದಲ್ಲಿ ಕಾಂಗ್ರೆಸ್ ಕಾರ್ಯಕರ್ತರ ವರ್ತನೆಗೆ ಸರ್ಕಾರವು ಈಗ ಕೈಕೊಂಡ ಬಿಗುವಿನ ಕ್ರಮವೇ ಕಾರಣವಾಗಿದ್ದಿರಬಹುದು ಆದರೆ ವಾಸ್ತವಿಕವಾಗಿ ಜನತೆಯ ಮೂಲಭೂತ ಹಕ್ಕುಗಳನ್ನು ಮತ್ತು ಕಾನೂನು ಬದ್ಧ ಚಟುವಟಿಕೆಗಳನ್ನು ಮೊಟಕುಗೊಳಿಸುವಲ್ಲಿ ಪೋಲೀಸರು ತೋರಿಸಿದ ಅತ್ಯುತ್ಸಾಹದಿಂದಲೇ ಈ ಎಲ್ಲ ಅತಿರೇಕಗಳಾಗಿವೆ ಎಂದೂ ಅವರು ಹೇಳಿದರು.

"ಈ ನಿಲುವಳಿ ಸೂಚನೆಯನ್ನು ಅನುಮೋದಿಸಿ ಶ್ರೀ ಚಂದ್ರಶೇಖರ ಶೆಟ್ಟಿಯವರು ಈ ರೀತಿ ಸ್ಪಷ್ಟಪಡಿಸಿದ್ದಾರೆ ಎಂದರೆ ದಸ್ತಗಿರಿಯಾದ ಸ್ಥಳೀಯ ಕಾಂಗ್ರೆಸ್ ಪಕ್ಷದ ಮುಖಂಡರು ಹಾಗೂ ಮೈಸೂರಿನ ಇತರ ಕಾಂಗ್ರೆಸ್ ಕಾರ್ಯಕರ್ತರಂತೆ ಮೈಸೂರಿನ ಮಹಾರಾಜರಿಗೆ ವಿಧೇಯರಾದವರು ಮತ್ತೊಬ್ಬರಿಲ್ಲ. ಸಂಸ್ಥಾನದ ಕಾಂಗ್ರೆಸ್ ಕಾರ್ಯಕರ್ತರು ಯಾವಾಗಲೂ ಎಲ್ಲಾ ಜನರಿಂದ ಗೌರವಕ್ಕೆ ಪಾತ್ರರಾಗಿದ್ದಂಥ ವ್ಯಕ್ತಿಗಳು. ಈ ಮೊದಲು ಅವರು ಸರ್ಕಾರದ ಯಾವುವೇ ಆಜ್ಞೆಗಳನ್ನು ಉಲ್ಲಂಘಿಸಿಲ್ಲ. ಈಗಲೂ ಕಾನೂನು ಉಲ್ಲಂಘಿಸುವ ವಿಚಾರವೇ ಅವರಿಗಿರಲಿಲ್ಲ. ಅವರು ಜಿಲ್ಲೆಯಲ್ಲಿ ಪ್ರವಾಸ ಮಾಡುವ ಕಾಲದಲ್ಲಿ ಸರ್ಕಾರದ ವಿರುದ್ಧ ಜನರನ್ನು ಎತ್ತಿಕಟ್ಟಿಲ್ಲ. ಅವರಲ್ಲಿ ಯಾರೊಬ್ಬರೂ ರಾಜದ್ರೋಹಾತ್ಮಕವಾದ ಭಾಷಣ ಮಾಡಿಲ್ಲ ಹಾಗೂ ಕರ ನಿರಾಕರಣೆ ಚಳುವಳಿಯನ್ನೂ ಹೂಡಿಲ್ಲ. ಆದರೂ ಶ್ರೀ ಟಿ. ಸಿದ್ದಲಿಂಗಯ್ಯ ಅವರು ಎಲ್ಲಿಗೆ ಹೋದರೂ ಅವರನ್ನು ಸಿ.ಪಿ.ಡಿ. ಅಧಿಕಾರಿಗಳು ಹಿಂಬಾಲಿಸುತ್ತಿದ್ದರು ಮತ್ತು ಅವರ ಸಮಗ್ರ ಭಾಷಣವನ್ನು ಬರೆದುಕೊಳ್ಳುತ್ತಿದ್ದರಲ್ಲದೆ ಅವುಗಳನ್ನು ತಮ್ಮ ಹಿರಿಯ ಅಧಿಕಾರಿಗಳಿಗೆ ಕಳುಹಿಸಿ ಕೊಡುತ್ತಿದ್ದರು. ಹೀಗೆ ಮಾಡುವುದನ್ನು ಸ್ವತಃ

ಶ್ರೀ ಸಿದ್ದಲಿಂಗಯ್ಯನವರು ಆಕ್ಷೇಪಿಸುತ್ತಿರಲಿಲ್ಲ. ಏಕೆಂದರೆ ಸಮಗ್ರ ಪ್ರಚಾರ ಕಾರ್ಯ ಸಂವಿಧಾನಾತ್ಮಕವಾಗಿ ಹಾಗೂ ಶಾಂತಿಯುತವಾಗಿ ನಡೆಯುತ್ತಿತ್ತು. ಅವರು ಹೊಳಲ್ಕೆರೆ ಗಡಿಯನ್ನು ದಾಟಿ ಚನ್ನಗಿರಿಯ ಗಡಿಯಲ್ಲಿ ಬಂದಕೂಡಲೇ ಪೊಲೀಸರು ಶ್ರೀ ಸಿದ್ದಲಿಂಗಯ್ಯನವರನ್ನು ಅವರು ಇದ್ದಕ್ಕಿದ್ದ ಹಾಗೆ ರಾಜದ್ರೋಹಿಗಳಾಗಿದ್ದಾರೆಂದು ತಮ್ಮಷ್ಟಕ್ಕೆ ತಾವೇ ತಿಳಿದುಕೊಂಡು ಅವರನ್ನು ದಸ್ತಗಿರಿ ಮಾಡಿದರು ಹಾಗೂ ಅಕಾರಣ ಭಯದಿಂದ ದಮನಕಾರಿ ನೀತಿಯನ್ನು ಪೊಲೀಸರು ಅನುಸರಿಸಿದ್ದರು.

"ಕಾಂಗ್ರೆಸ್ ಸಂಸ್ಥೆಯು ಇಡೀ ಭಾರತದಲ್ಲಿಯೇ ಉನ್ನತ ಹಾಗೂ ಉದಾತ್ತ ಧ್ಯೇಯಗಳಿಂದ ಕೂಡಿದ ದೊಡ್ಡ ಸಂಸ್ಥೆಯಾಗಿದ್ದು ಅಂಥ ಸಂಸ್ಥೆಯ ಸ್ಥಳೀಯ ಶಾಖೆಯು ಈ ಸಂಸ್ಥಾನದಲ್ಲಿ ಶಾಂತಿಯುತವಾಗಿ ಹಾಗೂ ಸಂವಿಧಾನಾತ್ಮಕವಾಗಿ ಜವಾಬ್ದಾರಿಯುತ ಸರ್ಕಾರದ ಸ್ಥಾಪನೆಗೆ ಪ್ರಚಾರ ಮಾಡುವಲ್ಲಿ ಆ ಉದಾತ್ತ ಪರಂಪರೆಗೆ ನಿಜವಾಗಿ ಬದ್ಧನಾಗಿರುವ ವಿಷಯ ಸಂಸ್ಥಾನದ ಹಿರಿಯ ಅಧಿಕಾರಿಗಳಿಗೆ ತಿಳಿದೇ ಇದೆ. ಇದರ ಕಾರ್ಯಕರ್ತರಲ್ಲಿ ಯಾರೊಬ್ಬರೂ ಈ ಧ್ಯೇಯ ಸಾಧನೆಯಲ್ಲಿ ಯಾವುದೇ ಹೇಯ ಅಪರಾಧದ ತಪ್ಪಿತಸ್ಥರಾಗಿರಲಿಲ್ಲ. ಅಥವಾ ಬೇಜವಾಬ್ದಾರಿಯುತವಾಗಿ ಪ್ರಚಾರದಲ್ಲಿ ತೊಡಗಿರಲಿಲ್ಲ. ಸ್ಥಳೀಯ ಕಾಂಗ್ರೆಸ್ ಕಾರ್ಯಕರ್ತರು ಕೈಕೊಂಡ ಸರಳ ಹಾಗೂ ರಚನಾತ್ಮಕ ಚಟುವಟಿಕೆಗಳ ಬಗ್ಗೆ ಈ ಅಧಿಕಾರಿಗಳು ಏಕೆ ಸಹಾನುಭೂತಿ ವ್ಯಕ್ತಪಡಿಸಲು ಇಚ್ಛಿಸುತ್ತಿದಲ್ಲವೆಂಬುದೇ ತಿಳಿಯುತ್ತಿಲ್ಲ. ಆದರೆ ಪೊಲೀಸರು ಕಾರ್ಯಕರ್ತರನ್ನು ಯಾವಾಗಲೂ ಸಂಶಯದಿಂದ ಹಾಗೂ ಮಾತ್ಸರ್ಯದಿಂದೇ ನೋಡುತ್ತಿದ್ದರು. ಸರ್ಕಾರದ ಈ ಮನೋಭಾವವನ್ನು ಇಲಾಖೆಯ ಅಧಿಕಾರಿಗಳಿಗೆ ಏಕೆ ಗೊತ್ತುಮಾಡಿರಲಿಲ್ಲ ವೆಂಬ ಬಗ್ಗೆ ಸಭಾಧ್ಯಕ್ಷರು ಆಶ್ಚರ್ಯ ವ್ಯಕ್ತಪಡಿಸಿದರು. ಬೇಗೂರಿನಲ್ಲಿ ಗ್ರಾಮ - ಕಾಂಗ್ರೆಸ್ ಸಮಿತಿಯು ಏರ್ಪಡಿಸಿದ್ದ "ತಿಲಕ್ ದಿನಾಚರಣ" ಯ ಸಂಬಂಧದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಅವರು ರಾಷ್ಟ್ರಧ್ವಜವನ್ನು ಮತ್ತು ಭಗವದ್ಗೀತೆಯ ಒಂದು ಪ್ರತಿಯನ್ನು ಬಲವಂತದಿಂದ ಕಿತ್ತುಕೊಂಡು ತಮ್ಮ ಕಾಲಿನಿಂದ ತುಳಿದುಹಾಕಿದರು. ಪೊಲೀಸರ ಈ ಅತಿರೇಕದ ಕೃತ್ಯ ಪ್ರಚಾರವಾಗದಂತೆ ನೋಡಿಕೊಳ್ಳಲು ಅಮಲ್ದಾರ್ ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್ ಅವರು ಪಂಚಾಯಿತಿ ಸದಸ್ಯರನ್ನು ಕರೆ ಕಳುಹಿಸಿ ಪೊಲೀಸ್ ಇನ್ಸ್‌ಪೆಕ್ಟರ್ ಕೃತ್ಯವನ್ನು ಪ್ರಚಾರ ಮಾಡಿದ್ದಾದರೆ ಆ ಸದಸ್ಯರನ್ನು ಪಂಚಾಯಿತಿಯ ಸದಸ್ಯತ್ವದಿಂದಲೇ ತೆಗೆದುಹಾಕುವುದಾಗಿ ಹೆದರಿಸಿದರು ಮತ್ತು ಹಿರಿಯೂರಿನಲ್ಲಿ "ತಿಲಕ್ ದಿನಾಚರಣೆ"ಯ ಸಂಬಂಧದಲ್ಲಿ ಪ್ರಚಾರ ಮಾಡಲಾಗಿದ್ದ ಸಭೆಗೆ ಆಗಮಿಸಿದವರಲ್ಲಿ ಮೇಲೆ ಹೇಳಿದ ಅಮಲ್ದಾರರೇ ಮೊದಲಿಗರಾಗಿದ್ದರು. ಅವರು ಈ ಮೊದಲು ಮಾಡಿದ್ದಂತೆಯೇ ಕಾಂಗ್ರೆಸ್ ವಿರೋಧಿ ಪ್ರಚಾರದಲ್ಲಿ ತೊಡಗಿದ್ದುದು ಸ್ಪಷ್ಟವಾಗಿದೆ ಮತ್ತು ಸಭೆಯು ನಡೆಯಬೇಕಾಗಿದ್ದ ಸ್ಥಳದಲ್ಲಿ ಅವರು ಈ ರೀತಿ ಹೇಳತೊಡಗಿದರು - ಎಂದರೆ ಯಾರಾದರೂ ಕಾಂಗ್ರೆಸ್ ಕಾರ್ಯಕರ್ತರಿಗೆ ಜಾಗ ನೀಡಿದರೆ ಭೂ ಕಂದಾಯ 'ಕಿಸ್ತ' ಕಂದಾಯ ಪಾವತಿಯಲ್ಲಿ ವಿನಾಯಿತಿ ನೀಡಿಕೆ ಮಾಡಿದ ಕೃತಕದಿಂದ, ಅವರ ಮನೆ ಮುಂತಾದ ಸ್ವತ್ತುಗಳನ್ನು ಕಂದಾಯ ಅಧಿಕಾರಿಗಳು ಹರಾಜು ಮಾಡಿ ವಸೂಲ್ಮಾಡುತ್ತಾರೆಂದೂ ಹೆದರಿಸಿದರು. ಇಂಥ ಪ್ರಚಾರದ ಪರಿಣಾಮವಾಗಿ, ಸಭೆಯ ಸಂಘಟನಾಕಾರರು, ಬೆಳಗಿನ 8 ಗಂಟೆಯಿಂದ ಮಧ್ಯಾಹ್ನದ 11 ಗಂಟೆಯ ವರೆಗೆ ಎಷ್ಟೇ

ಪ್ರಯತ್ನಿಸಿದರೂ ಐದು ಜನರನ್ನು ಸೇರಿಸಲೂ ಆಗಲಿಲ್ಲ. ಬೇಗೂರಿನಲ್ಲಿ ಜನರ ನಾಗರೀಕ ಸ್ವಾತಂತ್ರ್ಯಕ್ಕೆ ಅನಪೇಕ್ಷಿತವಾಗಿ ಸಾಕಷ್ಟು ಅಡ್ಡಿಯುಂಟಾಯಿತು. "ತಿಲಕ್ ದಿನಾಚರಣೆ"ಯ ಮಹತ್ವವು ದೇಶದ ಎಲ್ಲ ಭಾಗಗಳ ಜನರಿಗೆ ತಿಳಿದಿದ್ದರೂ, ಮೈಸೂರಿನ ಮಹಾರಾಜರಿಗೆ ದ್ರೋಹ ಬಗೆದಂತಾಗುತ್ತದೆಂಬಂತೆ ಈ ಒಂದು ಪ್ರಕರಣದಲ್ಲಿ ನಡೆದುಕೊಂಡಿದ್ದು ದಿನಾಚರಣೆಗೆ ಅಡ್ಡಿಯುಂಟಾಗಿತ್ತು. ಮಹಾರಾಜರಿಗೆ ದ್ರೋಹ ಬಗೆಯುವಂಥ ಯಾರೊಬ್ಬರೂ ಇಲ್ಲವೆಂದು ಸಭಾಧ್ಯಕ್ಷರು ಸ್ಪಷ್ಟಪಡಿಸಿದರು. ವಾಸ್ತವವಾಗಿ, ಕಾಂಗ್ರೆಸ್ ಕಾರ್ಯಕರ್ತರೂ ಸೇರಿದಂತೆ ಪ್ರತಿಯೊಬ್ಬರೂ ಮೈಸೂರು ಸಂಸ್ಥಾನದ ಘನತೆಯು ನೂರುಪಟ್ಟು ವೃದ್ಧಿಯಾಗಬೇಕೆಂದು ಮತ್ತು ಈ ಸಂಸ್ಥಾನವು ಪ್ರತಿಯೊಂದು ಕ್ಷೇತ್ರದಲ್ಲಿ ಒಂದು ಮಾದರಿಯಾದರೆ ಸಾಲದು ಅದು ಇಡೀ ವಿಶ್ವಕ್ಕೆ ಮಾದರಿಯಾಗಬೇಕೆಂದು ಬಯಸಿದ್ದರು. ಪರಿಸ್ಥಿತಿ ಹೀಗಿರುವಾಗ ಮೇಲೆ ಹೇಳಿದಂತೆ ಸ್ಥಳೀಯ ಅಧಿಕಾರಿಗಳು ಏಕೆ ಹೀಗೆ ನಡೆದುಕೊಂಡರೆಂಬುದು ತಿಳಿಯುವುದೇ ಕಷ್ಟ. ಸಂಸ್ಥಾನದ ಘನತೆಯನ್ನು ಹೆಚ್ಚಿಸುವ ವಿಷಯದಲ್ಲಿ ತಮ್ಮ ಹೊಣೆಗಾರಿಕೆಯನ್ನು ಮನಗಾಣಲಿಲ್ಲವೆಂಬುದನ್ನು ಇದು ತೋರಿಸುತ್ತದೆ. ಈ ಅಧಿಕಾರಿಗಳು ಮೂಲಭೂತ ನಿಯಮಗಳನ್ನಾಗಲೀ ಆಡಳಿತ ತತ್ವಗಳನ್ನಾಗಲೀ ತಿಳಿದಿರಲಿಲ್ಲ. ಹೀಗಾಗಿ ಅವರು ಇಂಥ ಎಲ್ಲ ಅತಿರೇಕಗಳಿಗೆ ಕಾರಣರಾದರು. ಅನೇಕ ಅಧಿಕಾರಿಗಳು ಕೈಕೊಂಡ ಎಲ್ಲ ದಮನಕಾರಿ ಕ್ರಮಗಳನ್ನು ಸರ್ಕಾರದ ಪರವಾಗಿಯೇ ಕೈಕೊಳ್ಳಲಾಗಿತ್ತೆಂದು ಅವರು ಭಾವಿಸುವುದಿಲ್ಲ. ಪ್ರತಿನಿಧಿ ಸಭೆಯನ್ನು ಉದ್ದೇಶಿಸಿ ದಿವಾನರು ಮಾಡಿದ ಭಾಷಣದಿಂದ ಕಾಂಗ್ರೆಸಿನ ರಚನಾತ್ಮಕ ಕಾರ್ಯಕ್ರಮಗಳ ಬಗ್ಗೆ ಸರ್ಕಾರಕ್ಕೆ ಸಹಾನುಭೂತಿ ಇದೆ ಎಂದು ಮತ್ತು ಸರ್ಕಾರವು ಅಂಥವೇ ಕಾರ್ಯಕ್ರಮಗಳನ್ನು ಕೈಕೊಳ್ಳುತ್ತಿದೆ ಎಂದು ಸ್ಪಷ್ಟವಾಗುತ್ತದೆ. ಅಧಿಕಾರಿಗಳು ಸ್ಥಳೀಯ ಮುಖಂಡರ ವಿರುದ್ಧ ಭದ್ರತಾ ಕ್ರಮಗಳನ್ನು ಕೈಕೊಂಡು ಅವರನ್ನು ಜೈಲುಗಳಲ್ಲಿ ಬಂಧಿಸಿಟ್ಟಿರುವುದೂ ಅಷ್ಟೇ ಆಶ್ಚರ್ಯಕರ ಸಂಗತಿಯಾಗಿದೆ ಎಂದೂ ರಾಜದ್ರೋಹ ಕೃತ್ಯಗಳಲ್ಲಿ ತೊಡಗಿರದಿದ್ದಂಥ ವ್ಯಕ್ತಿಗಳ ಮೇಲೆ ರಾಜದ್ರೋಹದ ಆರೋಪಮಾಡಿರುವುದು ಮತ್ತು ತಮ್ಮ ಕರ್ತವ್ಯಗಳ ಬಗ್ಗೆ ಅರಿವೇ ಇರದಿದ್ದ ಪ್ರಜೆಗಳ ಸ್ವಾತಂತ್ರ್ಯದಲ್ಲಿ ಅನಗತ್ಯವಾಗಿ ಹಸ್ತಕ್ಷೇಪ ಮಾಡಿದ ಹಾಗೂ ತಮ್ಮ ಸರ್ಕಾರದ ವಿಚಾರಗಳು ಹಾಗೂ ಪ್ರೇರಣೆಗಳನ್ನು ತಿಳಿದಿರದಿದ್ದ ಪೋಲೀಸರು ಸರ್ಕಾರಕ್ಕೆ ತಪ್ಪು ಮಾಹಿತಿ ನೀಡಿರುವುದು ಇನ್ನೂ ಆಶ್ಚರ್ಯಕರ ಸಂಗತಿಯಾಗಿದೆ. ಆದ್ದರಿಂದ ಅವರು ಪೋಲೀಸರ ದಬ್ಬಾಳಿಕೆಯನ್ನು ಖಂಡಿಸುವಲ್ಲಿ ಹಿಂಜರಿಯಲಿಲ್ಲ. ಅಂಥ ಸಂದರ್ಭದಲ್ಲಿ ಅತ್ಯುತ್ಸಾಹದಿಂದ ಕೆಲಸ ಮಾಡಿದ್ದಾದರೆ ತಮ್ಮ ವೈಯಕ್ತಿಕ ಉದ್ದೇಶ ಹಾಗೂ ಹಿತಾಸಕ್ತಿಯನ್ನು ಇನ್ನೂ ಹೆಚ್ಚಿಗೆ ಬೆಳಸಿಕೊಳ್ಳಬಹುದೆಂದು ಕೆಲವು ಅಧಿಕಾರಿಗಳು ನಿಜವಾಗಿಯೂ ನಂಬಿದ್ದರೆಂಬುದು ಕಂಡುಬರುತ್ತದೆ. ಶ್ರೀ ಸಿದ್ದಲಿಂಗಯ್ಯ ಹಾಗೂ ಶ್ರೀ ಭಾಷ್ಯಂ ಅಯ್ಯಂಗಾರರಂಥ ಮುಖಂಡರನ್ನು ಬಂಧಿಸಿದ ಪೋಲೀಸ್ ಇನ್ಸ್‌ಪೆಕ್ಟರರು ಶೀಘ್ರದಲ್ಲಿಯೇ ಜಿಲ್ಲಾ ಸೂಪರಿಂಟೆಂಡೆಂಟರಾಗಿ ಪದೋನ್ನತಿಗೇರುತ್ತಾರೆಂದೇ ಭಾವಿಸಿದ್ದರು. ಅಲ್ಲದಿದ್ದರೆ ನೀತಿ ನಿಯಮಗಳನ್ನು ಗಾಳಿಗೆ ತೂರಿ ತಮಗಿಷ್ಟಬಂದಂತೆ ಕಾರ್ಯನಿರ್ವಹಿಸುತ್ತಿರಲಿಲ್ಲ. ಈಗಷ್ಟೇ ಸರ್ಕಾರ ಹಾಗೂ ಜನರ ನಡುವೆ ಹದಗೆಟ್ಟಿರುವ ಸಂಬಂಧಗಳನ್ನು ಈಗಲೂ ಪೂರ್ವಸ್ಥಿತಿಗೆ ತರಬಹುದಾದರೆ, ಸರ್ಕಾರವು ಕಾಂಗ್ರೆಸ್ಸಿನ ಬಗೆಗಿರುವ ತನ್ನ ಮನೋಭಾವವನ್ನು ಸ್ಪಷ್ಟಪಡಿಸಿ ಬಂಧಿಸಲಾಗಿರುವ ಮುಖಂಡರನ್ನು ಕೂಡಲೇ ಬಿಡುಗಡೆ ಮಾಡಬೇಕಾಗುತ್ತದೆ. ಇದೇ ರೀತಿ ಮದ್ರಾಸ್ ಹಾಗೂ ಭಾರತದ ಇತರ

ಪ್ರಾಂತ್ಯಗಳಲ್ಲಿ ಮಾಡಲಾಗಿದೆ. ಈವರೆಗೂ ಈ ಪ್ರಾಂತ್ಯಗಳಲ್ಲಿ ಅದೇ ರೀತಿಯಾಗಿ ಅಥವಾ ಇನ್ನೂ ಕೀಳಾಗಿ ವರ್ತಿಸಿದ್ದ ಪೋಲೀಸರು ಈಗ ಗಾಂಧಿ ಟೋಪಿಗೆ ವಂದನೆ ಸಲ್ಲಿಸುತ್ತಿದ್ದಾರೆ ಮತ್ತು ಕಾಂಗ್ರೆಸ್ ಮಂತ್ರಿಗಳ ಆದೇಶಗಳನ್ನು ಪಾಲಿಸುತ್ತಿದ್ದಾರೆ. ಪೋಲೀಸರು ಸಾರ್ವಜನಿಕರ ಸೇವಕರಾಗಿರುವರೇ ಹೊರತು ಅವರ ಯಜಮಾನರಲ್ಲ ಎಂಬುದನ್ನು ಅವರಿಗೆ ಮನವರಿಕೆ ಮಾಡಿದಾಗ ಮಾತ್ರ ಇದು ಸಾಧ್ಯವಾಗುತ್ತದೆ. ಈ ಸಂಸ್ಥಾನದ ಬಗ್ಗೆ ಹೇಳುವುದಾದರೆ ಪೋಲೀಸ್ ಇಲಾಖೆಯ ಮುಖ್ಯಸ್ಥರು ವಿದೇಶೀಯರಾಗಿರುವವರೆಗೆ, ಸರ್ಕಾರ ಮತ್ತು ಜನತೆಯ ನಡುವೆ ಉತ್ತಮ ಸಾಮರಸ್ಯ ಏರ್ಪಡುವುದಿಲ್ಲವೆಂದು ಸದಸ್ಯರು ಅಭಿಪ್ರಾಯಪಟ್ಟರು. ಸಂಸ್ಥಾನದ ಬಗ್ಗೆ ಸಹಜವಾದ ಗೌರವ ಮತ್ತು ಸಹಾನುಭೂತಿಗಳಿರುವ, ಈ ನೆಲದಲ್ಲಿಯೇ ಜನಿಸಿದ ವ್ಯಕ್ತಿಯೊಬ್ಬರು ಇಲಾಖೆಯ ಮುಖ್ಯಸ್ಥರಾದಾಗ ಮಾತ್ರ ಅದು ಸಾಧ್ಯವಾಗುವುದು.

"ನಿಲುವಳಿ ಸೂಚನೆಯನ್ನು ಸಮರ್ಥಿಸಿ ಶ್ರೀ ಹೆಚ್.ಕೆ. ವೀರಣ್ಣಗೌಡ ಅವರು ಈ ಮುಂದಿನಂತೆ ತಿಳಿಸಿದರು. ಎಂದರೆ ಮೈಸೂರು ಸಂಸ್ಥಾನದ ಪೊಲೀಸರು, ಸಾರ್ವಜನಿಕ ಕಾರ್ಯಕರ್ತರು ಈ ಒಂದು ವರ್ಗದೊಡನೆ ವ್ಯವಹರಿಸುವಲ್ಲಿ ಅತಿರೇಕದಿಂದ ವ್ಯವಹರಿಸಿದ್ದರಲ್ಲದೇ ಪ್ರತಿಯೊಂದು ಸಂದರ್ಭದಲ್ಲಿಯಲ್ಲೂ ಕಿರುಕುಳಕೊಟ್ಟಿದ್ದಾರೆ. ತಮ್ಮ ಸ್ವಂತ ಅನುಭವಕ್ಕೆ ಬರದ ಒಂದು ಪ್ರಸಂಗವನ್ನು ಈ ರೀತಿ ವಿವರಿಸಿದರು. ಅವರು ಲೋಕಲ್ ಸ್ಕೂಲ್ ಬೋರ್ಡ್‌ನ ಮತ್ತು ಜಿಲ್ಲಾ ಬೋರ್ಡಿನ ಸದಸ್ಯರು ಮತ್ತು ಮದ್ದೂರು ಪುರಸಭೆಯ ಸದಸ್ಯರಾಗಿದ್ದರೂ ಅವರು ತಮ್ಮ ಚಲನ ವಲನಗಳ ಬಗ್ಗೆ ಪ್ರತಿದಿನ ಪೊಲೀಸರಿಗೆ ತಿಳಿಸುವಂತೆ ಒತ್ತಾಯಪಡಿಸಲಾಗಿತ್ತೆಂದು ತಿಳಿಸಿದರು. ಇದಕ್ಕೆ ಕಾರಣವೆಂದರೆ ಅವರು ಮನೆ ಮನೆಗೆ ಹೋಗಿ ಕಾಂಗ್ರೆಸ್ಸಿನ ಸದಸ್ಯರಾಗಬಯಸುವವರ ಹೆಸರನ್ನು ಸದಸ್ಯರ ಪಟ್ಟಿಗೆ ಸೇರಿಸಿಕೊಳ್ಳುವುದು ಮತ್ತು ಖಾದಿ ಉಪಯೋಗಿಸುವಂತೆ ಪ್ರಚಾರ ಮಾಡುತ್ತಿದ್ದುದೇ ಆಗಿದೆ. ಅವರು ಯಾವ ಸಭೆಯನ್ನೂ ನಡೆಸುತ್ತಿರಲಿಲ್ಲ ಹಾಗೂ ಭಾಷಣಗಳನ್ನು ಮಾಡುತ್ತಿರಲಿಲ್ಲ, ಆದರೂ ಪೊಲೀಸರ ಮೊಂಡುತನದಿಂದಾಗಿ ಅವರ ಚಲನವಲನಗಳ ಮೇಲೆ ನಿಗಾ ಇಡಲಾಯಿತು ಮತ್ತು ಅವರು ಯಾವುದೇ ಪಟ್ಟಣಕ್ಕೆ ಅಥವಾ ಗ್ರಾಮಕ್ಕೆ ಬಂದಾಗ ಅಥವಾ ಅಲ್ಲಿಂದ ಹೊರಗೆ ಹೋದಾಗ ಆಗಲಿ ಸ್ಥಳೀಯ ಅಧಿಕಾರಿಗಳ ನಡುವೆ ದೂರವಾಣಿ ಅಥವಾ ತಂತಿ ಸಂದೇಶಗಳ ವಿನಿಮಯವಾಗುತ್ತಿತ್ತು. ಇದು ಬಹಳ ದಿನಗಳಿಂದಲೂ ನಡೆದುಕೊಂಡೇ ಬಂದಿದೆ. ವಾಸ್ತವಿಕವಾಗಿ ಹೇಳುವುದಾದರೆ ಎರಡು ವರ್ಷಗಳ ಕೆಳಗೆ ಒಂದು ಸಲ ಮೈಸೂರು ನಗರದೊಳಗೆ ಸಭಾಧ್ಯಕ್ಷರು ಆಗಮಿಸಿದ್ದ ಬಗ್ಗೆ ಸಂಬಂಧಪಟ್ಟ ಪೋಲೀಸ್ ಪೇದೆಯೊಬ್ಬನು ವರದಿ ಮಾಡಲಿಲ್ಲವೆಂಬ ಕಾರಣಕ್ಕಾಗಿ ಅವನನ್ನು ಸೇವೆಯಿಂದಲೇ ವಜಾಮಾಡಲಾಗಿತ್ತು. ಗೊಂದಲ ಅಥವಾ ಅಸಮಾಧಾನವನ್ನುಂಟುಮಾಡುವುದು ಅವರ ಉದ್ದೇಶವಾಗಿರಲಿಲ್ಲವಾದ್ದರಿಂದ ಇದನ್ನೆಲ್ಲವನ್ನು ಪತ್ರಿಕೆಯಲ್ಲಿ ಬರೆಯಲಿಲ್ಲ. ಆದರೂ ಈ ಸಂದರ್ಭದಲ್ಲಿ ಅವರು ಹೇಳಲು ಉದ್ದೇಶಿಸಿದ್ದೆಂದರೆ ಒಬ್ಬ ರೌಡಿ ಅಥವಾ ಪುಂಡ ಅಥವಾ ಕೇಡಿಯಾಗಿರದ ಒಬ್ಬ ಬಡಪಾಯಿಯನ್ನು ಅವನು ಹೋದಕಡೆಗಳಲ್ಲೆಲ್ಲ ಹಿಂಬಾಲಿಸುವುದು ಪೋಲೀಸರಿಗೆ ರೂಢಿಯಾಗಿಬಿಟ್ಟಿತ್ತು. ಸಂಬಂಧಪಟ್ಟವರೆಲ್ಲರಿಗೂ ಇದು ಅಗೌರವ ತರುವಂಥದ್ದೆಂದು ಅವರು

ಅಭಿಪ್ರಾಯಪಟ್ಟರು. ಇಂಥ ದುರ್ಭಾಗ್ಯ ಒದಗಿದ್ದುದು ಅಧ್ಯಕ್ಷರಿಗಷ್ಟೇ ಸೀಮಿತವಾಗಿರಲಿಲ್ಲ. ಕಾಂಗ್ರೆಸಿನಲ್ಲಿ ನೇರವಾಗಿ ಯಾವುದೇ ರೀತಿ ಭಾಗವಹಿಸುವ ಪ್ರತಿಯೊಬ್ಬರೂ ಇಂಥ ಕಠಿಣ ಪರೀಕ್ಷೆಗೊಳಗಾಗಬೇಕಾಗಿತ್ತು. ತೀರ ಇತ್ತೀಚೆಗೆ ಮಂಗಳೂರಿಗೆ ಪ್ರಯಾಣಿಸುತ್ತಿದ್ದ ಶ್ರೀಮತಿ ಕಮಲಾದೇವಿಯವರು ಕೆಲವು ಗಂಟೆಗಳ ಕಾಲ ಪ್ರವಾಸವನ್ನು ನಿಲ್ಲಿಸಿ ಶ್ರೀರಂಗಪಟ್ಟಣದಲ್ಲಿ ತಂಗಿದ್ದರು. ಅಲ್ಲಿ ಅವರು ಯಾವುದೇ ಭಾಷಣ ಮಾಡುವ ಉದ್ದೇಶವಿಲ್ಲವೆಂದು ಸ್ಪಷ್ಟಪಡಿಸಿದ್ದಾಗ್ಯೂ ಅವರಿಗೆ ನೋಟೀಸನ್ನು ಜಾರಿಮಾಡಲಾಯಿತು ಮತ್ತು ಅವರಿದ್ದ ಕೊಠಡಿಯ ಕೋಣೆಯೊಳಗೆ ಮೇಲಿಂದ ಮೇಲೆ ಇಣುಕಿ ನೋಡುತ್ತಿದ್ದ ಪೋಲೀಸರ ವರ್ತನೆಯು ಇಂಥ ಒಬ್ಬ ಗೌರವಾನ್ವಿತ ಮಹಿಳೆಯ ವಿಷಯದಲ್ಲಿ ಗೌರವ ತರುವಂಥದ್ದಲ್ಲ. ಆ ಸಂದರ್ಭದಲ್ಲಿ ಪೊಲೀಸರು ಏನು ಮಾಡಿದರು ಮತ್ತು ಏನೇನು ನಡೆಯಿತೆಂಬುದನ್ನು ಇನ್ನಷ್ಟು ವಿವರಿಸಿ ಹೇಳುವುದು ಘನತೆ ಹಾಗೂ ಸಭ್ಯತೆಯ ದೃಷ್ಟಿಯಿಂದ ಸೂಕ್ತವಾದುದಲ್ಲವೆಂದು ಅವರು ಹೇಳಿದರು."

.....

.....

"ಆ ತರುವಾಯ ಸಭಾಧ್ಯಕ್ಷರು ಶ್ರೀ ಕೆ.ಟಿ. ಭಾಷ್ಯಂ ಅಯ್ಯಂಗಾರ್ ಅವರ ಬಂಧನದ ಬಗ್ಗೆ ತಿಳಿಸುತ್ತಾ ಈ ರೀತಿ ಹೇಳಿದರು ಪ್ರತಿನಿಧಿ ಸಭೆಯ ಕೆಲಸದ ಸಂಬಂಧದಲ್ಲಿ ಯಾರ ರಕ್ಷಣೆಯಲ್ಲಿ ಪ್ರತಿಯೊಬ್ಬ ಸದಸ್ಯರು ಮೈಸೂರಿನಲ್ಲಿರಬೇಕೆಂದು ನಿರೀಕ್ಷಿಸಲಾಗಿತ್ತೋ ಅಂಥ ಸಭಾಧ್ಯಕ್ಷರ ಅನುಮತಿ ಇಲ್ಲದೇ ಪ್ರತಿನಿಧಿ ಸಭೆಯ ಸದಸ್ಯರ ಬಂಧನ ಮಾಡಿದ್ದುದು ಪೊಲೀಸರ ಬಹಳ ದೊಡ್ಡ ತಪ್ಪು. ಅಧ್ಯಕ್ಷರ ಅನುಮತಿಯೊಡನೆ ಸದಸ್ಯರನ್ನು ದಸ್ತಗಿರಿಮಾಡಿಸಿ ಮಧ್ಯರಾತ್ರಿಯೇ ಜೈಲಿಗೆ ಹಾಕುವಂತೆ ಮಾಡಲು ಅಧ್ಯಕ್ಷರಿಗೆ ಅಧಿಕಾರ ಇತ್ತೇ ಎಂದು ಸ್ಪೀಕರ್ ಅವರು ಕೇಳಿದರು. ಅನುಮತಿಯಿಂದ ಹೀಗೆ ಮಾಡಿದ್ದಾದರೆ, ಇನ್ನುಮುಂದೆ ಅತಿಥಿಗಳು ಅಧ್ಯಕ್ಷರ ರಕ್ಷಣೆಯನ್ನು ಎಷ್ಟರಮಟ್ಟಿಗೆ ನಂಬಬಹುದು ಎಂದೂ ಅವರು ಕೇಳಿದರು. ಇಂಥ ಸಂದರ್ಭಗಳಿಂದ ಸಾರ್ವಜನಿಕರ ವಿಶ್ವಾಸ ತೀವ್ರ ಕ್ಷೋಭೆಗೊಳಗಾಗಿದೆ ಎಂದು ಒಂದೇಮಾತಿನಲ್ಲಿ ಹೇಳಲು ಪ್ರಯತ್ನಿಸಿದರು.

"ವಿಷಯವನ್ನು ಮುಂದುವರಿಸುತ್ತ ಶ್ರೀ ವೀರಣ್ಣಗೌಡ ಅವರು ಈ ರೀತಿ ಆಕ್ಷೇಪವೆತ್ತಿದ್ದಾರೆ, ಎಂದರೆ, ಅಧೀನ ಪೊಲೀಸ್ ಅಧಿಕಾರಿಗಳು, ಕಾಂಗ್ರೆಸ್ ಕಾರ್ಯಕರ್ತರ ಆರ್ಥಿಕ ವಿಷಯದಲ್ಲಿಯೂ ಹಸ್ತಕ್ಷೇಪ ಮಾಡುತ್ತಿದ್ದರು. ಸ್ಥಳೀಯ ಕಾಂಗ್ರೆಸ್ ಮಂಡಳಿಯ ಸದಸ್ಯರಾಗಿದ್ದ ಸಭಾಧ್ಯಕ್ಷರಿಗೆ ಕಾಂಗ್ರೆಸ್ ಸದಸ್ಯರ ಹೆಸರನ್ನು ನೋಂದಾಯಿಸಿಕೊಳ್ಳುವ ಕೆಲಸವನ್ನು ವಹಿಸಲಾಗಿತ್ತು. ಹೀಗೆ ಮಾಡುವುದರಿಂದ ಈ ಸದಸ್ಯರು ನಿಮ್ನ ವರ್ಗಗಳ ಜನರ ಪ್ರಗತಿಗಾಗಿ ಕಾರ್ಯನಿರ್ವಹಿಸಲು ಮತ್ತು ಆರ್ಥಿಕ ಪ್ರಗತಿಯ ಸಂಕೇತವಾದ "ಚಕ್ರ"ದ ಬಳಕೆಯನ್ನು ಜನಪ್ರಿಯಗೊಳಿಸುವುದಕ್ಕಾಗಿ ಅವರನ್ನು ನಿಯೋಜಿಸಲಾಗಿತ್ತು. ಇಂಥ ಕಾರ್ಯಗಳಿಗೂ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಹಾಗೂ ಅವರ ಸಿಬ್ಬಂದಿಯವರು ಅಡ್ಡಿಯನ್ನುಂಟು ಮಾಡುತ್ತಿದ್ದರು. ಅವರು ಸದಸ್ಯರನ್ನು ನೋಂದಾಯಿಸಿಕೊಳ್ಳಲು ಊರುಗಳಿಗೆ ಹೋದಕೂಡಲೇ ಪೊಲೀಸರು ಅದೇ

ಗ್ರಾಮಕ್ಕೆ ಹೋಗಿ ಜನರನ್ನು ಹೆದರಿಸುತ್ತಿದ್ದರು ಮತ್ತು ಕಾಂಗ್ರೆಸಿಗೆ ಸೇರದಂತೆ ಪ್ರೇರೇಪಿಸುತ್ತಿದ್ದರೆಂದು ತಿಳಿದುಬಂದಿದೆ. ಇವೆಲ್ಲವೂ ಮಹಾರಾಜರ ಪ್ರಜೆಗಳ ಜೀವ ಹಾಗೂ ಸ್ವತ್ತುಗಳ ರಕ್ಷಣೆಗಾಗಿ ಪೊಲೀಸರು ಮಾಡಬೇಕಾಗಿದ್ದ ಮೂಲ ಕರ್ತವ್ಯಕ್ಕೆ ಹೊರತಾದ ಕೃತ್ಯಗಳಾಗಿದ್ದವು ಇವುಗಳನ್ನು ಬಲವಾಗಿ ತಡೆಗಟ್ಟಿದಾಗ, ಅವರು ಗೌರವಾನ್ವಿತವಾದ ಈ ಸಂಸ್ಥಾನದಲ್ಲಿ ಕ್ರೂರವಾಗಿ ವರ್ತಿಸಲಾರರೆಂದು ಅವರು ಹಾರೈಸಿ, ಹಾಗೆಯೇ ಆಗಬೇಕೆಂದು ಪ್ರಾರ್ಥಿಸಿದರು.

"ಆ ತರುವಾಯ ಮಾತನಾಡಿದ ಶ್ರೀ ಸಿ.ಎನ್. ನರಸಿಂಗರಾವ್ ಅವರು ಈ ಮುಂದಿನಂತೆ ಸ್ಪಷ್ಟಪಡಿಸಿದ್ದಾರೆ. ಹಿಂದಿನ ವರ್ಷಗಳಲ್ಲಿ ಪೊಲೀಸರ ವಿರುದ್ಧ ಯಾವುದೇ ದೂರುಗಳಿದ್ದರೂ ಅವು ಸಣ್ಣಪುಟ್ಟ ವಿಷಯಗಳಿಗಷ್ಟೇ ಸಂಬಂಧಪಟ್ಟಿದ್ದವು. ಆದರೆ ಪ್ರಸಕ್ತ ಸಂದರ್ಭದ ಸೂಚನೆ ಹಾಗೂ ಅದರ ಮೇಲಿನ ಚರ್ಚೆ ಮೈಸೂರು ಪೊಲೀಸರಿಗೆ ಸಂಬಂಧಿಸಿದಂತ, ಈಗ ಅವರ ಬಗ್ಗೆ ಕ್ಷಮೆ ಕೇಳಬೇಕಾದ ಪರಿಸ್ಥಿತಿ ಉಂಟಾಗಿದೆ. ಪೊಲೀಸರು ಮಾಡಿದ ದಬ್ಬಾಳಿಕೆಯ ವಿರುದ್ಧ ಆರೋಪಿಸಿ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ. ಆದರೂ ಅಂಥ ಆರೋಪಗಳನ್ನು ಮಾಡಿದ್ದುದು ಪರಿಸ್ಥಿತಿ ಒಳ್ಳೆಯದಾಗಿರಲಿಲ್ಲ ಹಾಗೂ ಇಂಥ ವಿಷಯಗಳನ್ನು ಸರ್ಕಾರದ ಗಮನಕ್ಕೆ ತರುವುದು ಸದಸ್ಯರಿಗೆ ಅನಿವಾರ್ಯವಾಗಿತ್ತು. "ಕಾಂಗ್ರೆಸ್" ಎಂಬ ಹೆಸರು ಕೇಳಿದ ಕೂಡಲೇ ಸರ್ಕಾರದ ಶತ್ರುವೆಂದೇ ಪೋಲೀಸರು ಭಾವಿಸುತ್ತಿದ್ದರು. ಆದ್ದರಿಂದ ಈ ಪ್ರತಿಯೊಬ್ಬರೂ ಮಹಾರಾಜರಿಗೆ ಅಸಮಾಧಾನವನ್ನುಂಟು ಮಾಡುವ ಕಾರ್ಯಗಳಲ್ಲಿ ತೊಡಗುತ್ತಾರೆಂದು ಮತ್ತು ಪೊಲೀಸರು ಮಾತ್ರವೇ ಮಹಾರಾಜರಿಗೆ ಅತ್ಯಂತ ನಿಷ್ಠರಾದ ಪ್ರಜೆಗಳೆಂದು ಪೊಲೀಸರು ಭಾವಿಸಿ ಎಲ್ಲ ಪ್ರಾಮಾಣಿಕ ಕಾರ್ಯಕರ್ತರ ಕಾರ್ಯಗಳಿಗೆ ಅಡ್ಡಿಯುಂಟು ಮಾಡುತ್ತಿದ್ದರು. ತಮ್ಮ ಕರ್ತವ್ಯಗಳ ಮಹತ್ವದ ಬಗ್ಗೆ ತಮ್ಮದೇ ಆದ ರೀತಿಯಲ್ಲಿ ತಪ್ಪಾಗಿ ಹಾಗೂ ಅತಿಶಯೋಕ್ತಿಯಾದ ಕಲ್ಪನೆ ಮಾಡಿಕೊಂಡಿದ್ದರು. ಇಂಥ ಭಾವನೆಯಿಂದ ರಚನಾತ್ಮಕ ಕಾರ್ಯಗಳಿಗೆ ತಮ್ಮನ್ನೇ ಸಮರ್ಪಿಸಿಕೊಂಡಿದ್ದ ಕಾರ್ಯಕರ್ತರ ಎಲ್ಲ ಚಟುವಟಿಕೆಗಳಿಗೆ ಅಡ್ಡಿಯುಂಟುಮಾಡುವ ಹಾಗೂ ಅವುಗಳನ್ನು ವಿರೋಧಿಸುವ ಹೊಣೆ ತಮ್ಮದೆಂದೇ ಪೋಲೀಸರು ಭಾವಿಸಿದ್ದರು. ಅವರು ಭಾವಿಸಿದ್ದ ಇಂಥ ಕಾನೂನು ಹಾಗೂ ಸುವ್ಯವಸ್ಥೆ ಪಾಲನೆ ಮಾಡುವ ಉತ್ಸಾಹದಿಂದ ಸಾಮಾನ್ಯ ನಾಗರಿಕರ ನ್ಯಾಯ ಸಮ್ಮತ ಹಕ್ಕು ಹಾಗೂ ಸ್ವಾತಂತ್ರ್ಯಗಳನ್ನು ಪೊಲೀಸರು ಅನೇಕ ಸಲ ಅತಿಕ್ರಮಿಸಿದರು. ರಾಷ್ಟ್ರಧ್ವಜಕ್ಕೆ ಅಗೌರವ ಉಂಟುಮಾಡುವಂಥ ಒಂದೇ ಒಂದು ಪ್ರಸಂಗವಾಗಲಿ ಇಡೀ ರಾಷ್ಟ್ರಕ್ಕೆ ಕಿಚ್ಚು ಹಚ್ಚಲು ಸಾಕಷ್ಟಾಗುತ್ತದೆಂಬ ಸಂಗತಿಯನ್ನು ಅವರು ಮರೆತುಬಿಟ್ಟಿದ್ದರು. ಈಗ ಪೊಲೀಸರ ಈ ಕೃತ್ಯಗಳನ್ನು ಖಂಡಿಸಲೇಬೇಕಾಗುತ್ತದೆಂದು ಸಭಾಧ್ಯಕ್ಷರು ಅಭಿಪ್ರಾಯಪಟ್ಟರು.

.....

.....

"ನಿಲುವಳಿ ಸೂಚನೆಯ ಮೇಲೆ ಮಾತನಾಡುತ್ತಾ ಶ್ರೀ ಚನ್ನಬಸಪ್ಪ ಅವರು ಈ ರೀತಿ ಹೇಳಿದರು, ಎಂದರೆ, ಜನರ ಮುಖಂಡರು, ಸರ್ಕಾರ ಮತ್ತು ಜನರ ನಡುವಿನ ಸಂಬಂಧಕ್ಕೆ ಸಂಬಂಧಪಟ್ಟಂತೆ ಮತ್ತು ಯಾವ ಬಗ್ಗೆ ಸರ್ಕಾರವು ಅತ್ಯುತ್ತಮವಾಗಿ ಜನರ ಹಿತಾಸಕ್ತಿಯನ್ನು

ಕಾಪಾಡುತ್ತದೆ ಎಂಬ ಬಗ್ಗೆ ಸಂಸ್ಥಾನದ ಉದ್ದಗಲಕ್ಕೂ ಸಾರ್ವಜನಿಕ ಅಭಿಪ್ರಾಯವನ್ನು ತಿಳಿಯಲು ಪ್ರಯತ್ನಿಸುತ್ತಿದ್ದ ಕಾಲದಲ್ಲಿ, ಪೊಲೀಸರು ಪ್ರತಿಯೊಂದು ಹಂತದಲ್ಲಿ ಅಡ್ಡಿಯನ್ನುಂಟು ಮಾಡುತ್ತಿದ್ದರು."

.....

.....

"ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ (ಶ್ರೀ ಎಫ್.ಎ. ಹ್ಯಾಮಿಲ್ಟನ್) ಅವರು - ಮಹಾಸ್ವಾಮಿಗಳೇ, ನಾನು ಕನ್ನಡದಲ್ಲಿ ಮಾತನಾಡಲಾರೆ ಅದಕ್ಕಾಗಿ ಕ್ಷಮಿಸಬೇಕು - ನಾನು ನನ್ನದೇ ಆದ ಭಾಷೆಯಲ್ಲಿ ಹೇಳುತ್ತೇನೆ,-

.....

.....

"ಕೆಲವು ಪ್ರಕರಣಗಳು ಇದೇ ದಿನ ಮೊದಲಬಾರಿಗೆ ನನ್ನ ಗಮನಕ್ಕೆ ಬಂದಿವೆ. ಇತರ ಘಟನೆಗಳನ್ನು ಕುರಿತು ಅವುಗಳ ಬಗ್ಗೆ ಆರೋಪಮಾಡಿದ ಸದನದ ಸದಸ್ಯರು ಎಷ್ಟು ಅನುಮೋದನೆ ನೀಡುತ್ತಾರೋ ಅಷ್ಟೇ ಅನುಮೋದನೆಯನ್ನು ನಾನು ನೀಡುತ್ತೇನೆ. ಸಾಗರ ಮತ್ತು ಚನ್ನಗಿರಿಗೆ ಸಂಬಂಧಿಸಿದ ಘಟನೆಗಳ ಕುರಿತು ನಾನು ಪ್ರಸ್ತಾಪಿಸುತ್ತೇನೆ. ಈ ಕೃತ್ಯಗಳಿಗೆ ಸಂಬಂಧಿಸಿದ ಅಧಿಕಾರಿಗಳ ನಡತೆಯನ್ನು ಈಗಾಗಲೇ ಖಂಡಿಸಲಾಗಿದೆ. ಈ ಅಧಿಕಾರಿಗಳು ತಪ್ಪು ಮಾಡಿದ್ದಾರೆ ಎಂದು ಒಪ್ಪಿಕೊಂಡರೂ, ಅವರು ಯಾವುದು ತಮ್ಮ ಕರ್ತವ್ಯವೆಂದು ನಂಬಿದ್ದರೋ ಆ ಕರ್ತವ್ಯ ನಿರ್ವಹಣೆಯಲ್ಲಿ ಸದ್ಭಾವನೆಯಿಂದ ತಪ್ಪು ಮಾಡಿದ್ದಾರೆ ಎಂದು ನಾನು ಭಾವಿಸುತ್ತೇನೆ.

.....

.....

"ನಂತರ ಶ್ರೀ ಚಂದ್ರಶೇಖರ ಶೆಟ್ಟಿಯವರು, ತಮ್ಮ ಪಕ್ಷದ ಆಜ್ಞೆಯ ಮೇರೆಗೆ ತಮ್ಮ ಸೂಚನೆಯನ್ನು ಹಿಂದಕ್ಕೆ ಪಡೆಯುವುದಾಗಿ ಹೇಳಿದರು.

ನಿಲುವಳಿ ಸೂಚನೆಯನ್ನು ಅನುಮತಿಯಿಂದ ಹಿಂದಕ್ಕೆ ಪಡೆಯಲಾಯಿತು."

**ಮೈಸೂರು ಕಾಂಗ್ರೆಸ್ ಮತ್ತು ಜವಾಬ್ದಾರಿ ಸರ್ಕಾರಕ್ಕಾಗಿ ಚಳುವಳಿ ವಿರುದ್ಧ ಮೈಸೂರು ಸಂಸ್ಥಾನದ ಸರ್ಕಾರದ ಧೋರಣೆ**

ಶಿವಪುರ ಸತ್ಯಾಗ್ರಹ ಮತ್ತು ವಿದುರಾಶ್ವತ್ಥದ ಘಟನೆಗಳು ಜರುಗಿದ ಫಲವಾಗಿ ಕಾಂಗ್ರೆಸ್ ಮತ್ತು ಸಂಸ್ಥಾನ ಸರ್ಕಾರದ ನಡುವೆ ಒಂದು ರಾಜಕೀಯ ಒಪ್ಪಂದ ಏರ್ಪಟ್ಟು ರಾಜಕೀಯ ಸುಧಾರಣಾ ಸಮಿತಿ ನೇಮಕಗೊಂಡುದನ್ನು ಹಿಂದೆ ತಿಳಿದುಕೊಂಡಿದ್ದೇವೆ. ಈ ರಾಜಕೀಯ ಒಪ್ಪಂದವನ್ನು ಸರ್ಕಾರ ಪಾಲಿಸಲಿಲ್ಲವೆಂಬುದು ಸಿದ್ದಲಿಂಗಯ್ಯನವರ ವಾದ. ರಾಜಕೀಯ ಸುಧಾರಣಾ ಸಮಿತಿಯ ರಚನೆ ದಿವಾನ್ ಮಿರ್ಜಾರವರ ಕೃತ್ರಿಮ ಆಡಳಿತ ಕೌಶಲದ ಒಂದು ಮಜಲಾಗಿತ್ತೆಂದು ಸಿದ್ದಲಿಂಗಯ್ಯನವರು ಅಭಿಪ್ರಾಯಪಟ್ಟಿದ್ದಾರೆ. ಈ ರಾಜಕೀಯ ಸುಧಾರಣಾ

ಸಮಿತಿ 'ಮೈಸೂರು ಕಾಂಗ್ರೆಸ್'ನ ಸ್ಥಾನಮಾನವನ್ನೂ 'ಜವಾಬ್ದಾರಿ ಸರ್ಕಾರ'ದ ಕಾಂಗ್ರೆಸ್ ಪರಿಕಲ್ಪನೆಯನ್ನೂ ಹೇಗೆ ಅಪಾರ್ಥಮಾಡಿಕೊಂಡಿತ್ತೆಂಬುದರ ಚಿತ್ರಣವನ್ನು ಸದರಿ ಸಮಿತಿಯ ವರದಿ (1939) ಯಿಂದ ಉದ್ಧರಿಸಿ ಇಲ್ಲಿ ಹೇಳಲಾಗಿದೆ:

.....

.....

"82. ಆ ತರುವಾಯ ನಡೆದಿರುವ ಘಟನೆಗಳನ್ನು ನೋಡಿದರೆ, ಬಹುಶಃ ಎರಡು ಪಕ್ಷಗಳು ಏರ್ಪಡಬಹುದೆಂಬ ವಿಶ್ವೇಶ್ವರಯ್ಯ ಸಮಿತಿಯವರ ನಿರೀಕ್ಷೆ ಏನೂ ನೆರವೇರಲಿಲ್ಲ ಎಂದರೆ, ಉದಾಹರಣಾರ್ಥವಾಗಿ ಪೂರ್ವ ಸಂಪ್ರದಾಯ ಪರವಾದ ಮಂದಗಾಮಿ ಪಕ್ಷವೆಂದು, ಪ್ರಗತಿ ಸಾಧನೆಯ ಪರವಾದ ತೀವ್ರಗಾಮಿ ಪಕ್ಷವೆಂದು 'ಅವುಗಳಲ್ಲಿ ಒಟ್ಟು ಸಂಸ್ಥಾನದ ಧನಿಕರ, ಅನುಭವಸ್ಥರ ಮತ್ತು ಸುಸಂಸ್ಕೃತರ ಪ್ರತಿನಿಧಿಗಳು ಸೇರಿರುವಂತೆ' ಏರ್ಪಡಬಹುದೆಂಬ ನಿರೀಕ್ಷೆ ಏನೂ ನೆರವೇರಲಿಲ್ಲ. 1917ನೆಯ ಇಸವಿಯಲ್ಲಿ 'ಪ್ರಜಾ ಮಿತ್ರ ಮಂಡಲಿ' ಎಂಬ ಹೆಸರಿನ ಒಂದು ಸಂಘವು ಏರ್ಪಟ್ಟಿತು. 'ಪ್ರಜಾ ಪಕ್ಷ' ಎಂಬ ಪಂಗಡವೆಂದು 1930ನೆಯ ಇಸವಿಯ ಸುಮಾರಿನಲ್ಲಿ ಏರ್ಪಟ್ಟು ಜವಾಬ್ದಾರಿ ಸರ್ಕಾರ ಸ್ಥಾಪನೆಯೇ ಮುಂತಾದವುಗಳು ತನ್ನ ಧ್ಯೇಯವೆಂದು ಉದ್ಘೋಷಿಸಿತು. 1935ನೇ ಇಸವಿಯ ಸುಮಾರಿನಲ್ಲಿ ಇವೆರಡೂ ಒಟ್ಟುಗೂಡಿ ಪ್ರಜಾ ಸಂಯುಕ್ತ ಪಕ್ಷವು (Peoples Federation) ಏರ್ಪಟ್ಟಿತು. ಇವುಗಳ ಜೊತೆಗೆ ಮತ್ತೊಂದು ಸಣ್ಣ ಪಕ್ಷವು ಏರ್ಪಟ್ಟಿದ್ದಿತು. ಅದೇ ಮೈಸೂರು ಕಾಂಗ್ರೆಸ್ ಪಕ್ಷ. ಈ ಪಕ್ಷದವರು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ನವರು ಅನುಸರಿಸತಕ್ಕ ಖಾದಿ ಪ್ರಚಾರ ಮುಂತಾದ 'ದೇಶೋನ್ನತಿ ಸಾಧನೆಯ ಕಾರ್ಯಕ್ರಮ'ವೇ ತಮ್ಮ ಧ್ಯೇಯವೆಂದು ಹೇಳುತ್ತಾ ಕೆಲಸ ಮಾಡುತ್ತಿದ್ದರು. ಪ್ರಜಾ ಸಂಯುಕ್ತ ಪಕ್ಷದ ಕೆಲವು ಮಂದಿ ಸದಸ್ಯರು, 1937ನೇ ಇಸವಿಯಲ್ಲಿ ನಡೆದ ಪ್ರಜಾ ಪ್ರತಿನಿಧಿ ಸಭೆಯ ಮತ್ತು ನ್ಯಾಯ ವಿಧಾಯಕ ಸಭೆಯ ಸದಸ್ಯರ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷದ ಉಮೇದುವಾರಿಗೆ ವಿರೋಧವಾಗಿ ಸಹ ನಿಂತು ಅವರು ಅವುಗಳ ಸದಸ್ಯರಾಗಿ ಚುನಾವಣೆಯಾಗದಂತೆ ಮಾಡಿ ತಾವೇ ಜಯಶೀಲರಾದರು. 1937ನೇ ಇಸವಿ ಜುಲೈ ತಿಂಗಳಲ್ಲಿ ಅನೇಕ ಬ್ರಿಟೀಷ್ ಇಂಡಿಯಾ ಪ್ರಾಂತ್ಯಗಳಲ್ಲಿ ಅಲ್ಲಿಯ ಕಾಂಗ್ರೆಸ್ ಸದಸ್ಯರ ಮಂತ್ರಿ ಮಂಡಲವೇರ್ಪಟ್ಟವು. ಒಡನೆಯೇ ಪ್ರಜಾ ಸಂಯುಕ್ತ ಪಕ್ಷದವರ (ಪೀಪಲ್ಸ್ ಫೆಡರೇಷನ್) ಒಲವು ಕಾಂಗ್ರೆಸ್ ಪಕ್ಷದ ಮೇಲೆ ಬಂದಂತೆ ತೋರುತ್ತದೆ. ಒಡನೆಯೇ 'ಮೈಸೂರು ಕಾಂಗ್ರೆಸ್' ಪಕ್ಷವೆಂಬ ಹೊಸ ಪಕ್ಷ ಒಂದು ಏರ್ಪಟ್ಟಿತು. ಅದು ಇಂಡಿಯನ್ ನ್ಯಾಷನಲ್ ಕಾಂಗ್ರೆಸಿಗೆ ಅಧೀನವಾದ ಪಕ್ಷವೆಂದು ಉದ್ಘೋಷಿಸಿತು ಅಥವಾ ಅದು ಇಂಡಿಯನ್ ನ್ಯಾಷನಲ್ ಕಾಂಗ್ರೆಸಿನ ಒಂದು ಶಾಖೆಯಾಗಿಯೇ ಕೆಲಸ ಮಾಡಲಾರಂಭಿಸಿತೆಂದು ಹೇಳಿದರೂ

ಹೇಳಬಹುದಾಗಿದೆ. ಅದರ ಹೆಸರಿನಲ್ಲಿ ಹೊರಗಿನ ಸಹಾಯದಿಂದ ತುಂಬಾ ಚಳುವಳಿಯೂ ಮತ್ತು ಕ್ರಮವಾದ ವ್ಯವಸ್ಥೆಯ ಪ್ರಚಾರ ಕಾರ್ಯವೂ ಪ್ರಾರಂಭಿಸಲ್ಪಟ್ಟು ಮುಂದುವರೆಸಲ್ಪಟ್ಟಿತು. ಕೆಲವು ಸಂದರ್ಭಗಳಲ್ಲಿ ಅದು ಆಡಳಿತಗಾರರ ಶಿಸ್ತನ್ನು ಉಲ್ಲಂಘಿಸುವ ವರ್ತನೆಯಿಂದಲೂ ಕೂಡಿತ್ತು. ರಾಜದ್ರೋಹದ ಭಾಷಣಗಳನ್ನು ಮಾಡಿದವರೆಂದು ಕಂಡುಬಂದ ಕೆಲವರ ಮೇಲೆ ಸರ್ಕಾರದವರು ಕ್ರಮ ಜರುಗಿಸಿದರು. ಮೈಸೂರು ಕಾಂಗ್ರೆಸ್ ಪಕ್ಷವೆಂಬ ಈ ಹೊಸ ಪಂಗಡವು ಏರ್ಪಟ್ಟ ಬಳಿಕ ಅದು ನಡೆಯಿಸಿದ ಮೊಟ್ಟ ಮೊದಲನೆಯ ಕೆಲಸವೆಂದರೆ, 1937ನೇ ಇಸವಿ ಅಕ್ಟೋಬರ್ ತಿಂಗಳಿನಲ್ಲಿ ನಡೆದ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಏರ್ಪಡಿಸಿದ ಸಭಾ ಪರಿತ್ಯಾಗ. ಆ ಪಂಗಡದವರು ಸರ್ಕಾರದವರ ದಬ್ಬಾಳಿಕೆಯ ಕಾರ್ಯನೀತಿ ಎಂಬುದಕ್ಕೆ ಪ್ರತಿಭಟಿಸುವ ಸಲುವಾಗಿ ಅದನ್ನು ತಾವು ಏರ್ಪಡಿಸಿದಂತೆ ಸೂಚಿಸಿದರು. ದಿವಾನರವರಾದ ಸರ್ ಮಿರ್ಜಾ ಇಸ್ಮಾಯಿಲ್ ಅವರು ಆ ಅಧಿವೇಶನದ ಆರಂಭ ಭಾಷಣದಲ್ಲಿ ಸದಸ್ಯರೆಲ್ಲರೂ ಸೌಹಾರ್ದದಿಂದ ಸಹಕರಿಸಬೇಕೆಂದು ವಿಶೇಷರೀತಿಯಲ್ಲಿ ಭಿನ್ನ ಮಾಡಿಕೊಂಡಿದ್ದರು. ಆ ಬಳಿಕಲಂತು, ಘಟನೆಗಳು ತಟಕ್ಕನೆ ವಿಪರೀತಕ್ಕಿಟ್ಟವು. 1937ನೆಯ ಇಸವಿ ಅಕ್ಟೋಬರು ತಿಂಗಳಿನಲ್ಲಿ ಬೆಂಗಳೂರು ನಗರದಲ್ಲಿ ಪ್ರಜಾ ನೆಮ್ಮದಿಗೆ ಭಂಗವುಂಟಾಯಿತು. ಸಂಸ್ಥಾನದ ಇನ್ನು ಕೆಲವು ಪ್ರದೇಶಗಳಲ್ಲಿ ಕೂಡ ಪ್ರಜಾ ನೆಮ್ಮದಿಗೆ ಭಂಗವುಂಟಾಗುವ ಶಂಕೆಯು ತೋರಿತು. ಆದಕಾರಣ, ಅಲ್ಲಿಯ ಮ್ಯಾಜಿಸ್ಟ್ರೇಟರುಗಳು ಪ್ರತಿಬಂಧಕದ ಆಜ್ಞೆಗಳನ್ನು ಸಾದರುಮಾಡಬೇಕಾಯಿತು. ಅದರ ಪರಿಣಾಮವಾಗಿ, ನ್ಯಾಯವಿಧಾಯಕ ಸಭೆಯಲ್ಲಿ ಸದಸ್ಯರಾಗಿದ್ದ ಕೆಲವು ಮಂದಿ ಕಾಂಗ್ರೆಸ್ ಪಕ್ಷದವರು 1938ನೆಯ ಇಸವಿ ಜನವರಿ ಅಧಿವೇಶನಕ್ಕೆ ಸ್ವಲ್ಪ ಮುಂಚಿತವಾಗಿ ತಮ್ಮ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಕೊಟ್ಟರು. ಆ ಅಧಿವೇಶನವು ಮುಖ್ಯವಾದುದು. ರಾಜ್ಯಾಂಗ ರಚನೆಗೆ ಸಂಬಂಧಪಟ್ಟ ಮೂರು ನಿರ್ಣಯಗಳು ಸೂಚಿತವಾಗಿ ವಿಶದವಾಗಿ ಚರ್ಚೆಯಾದುವು. ಮೈಸೂರು ಸಂಸ್ಥಾನದಲ್ಲಿ ಮತ್ತಷ್ಟು ರಾಜಕೀಯ ಸುಧಾರಣೆಗಳನ್ನು ಕೊಡುವ ವಿಚಾರವನ್ನು ಕುರಿತು ಪರ್ಯಾಲೋಚಿಸುವುದಕ್ಕಾಗಿ ಒಂದು ಸಮಿತಿಯನ್ನು ನೇಮಕಮಾಡುವುದು ಅವಶ್ಯಕವೆಂಬ ಅಂಶವು ಅವುಗಳಲ್ಲೆರಡು ನಿರ್ಣಯಗಳಲ್ಲಿ ಸೂಚಿತವಾಗಿದ್ದಿತು. ಅವುಗಳಲ್ಲಿ ಒಂದು ನಿರ್ಣಯವನ್ನು, ಅದು ಚರ್ಚೆಯಾದ ನಂತರ, ಸೂಚಕರು ವಾಪಸ್ಸು ತೆಗೆದುಕೊಂಡರು; ಮತ್ತೊಂದನ್ನು ಸರ್ಕಾರದವರು ಅಂಗೀಕರಿಸಿದರು. ಅಖಿಲ ಭರತಖಂಡಕ್ಕಾಗಿ ಏರ್ಪಡುವ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಗೆ (ಫೆಡರೇಷನ್ನಿಗೆ) ಮೈಸೂರು ಸಂಸ್ಥಾನವು ಸೇರುವುದರ ಸಾಧಕ ಬಾಧಕ ಪರಿಣಾಮಗಳನ್ನು ಕುರಿತು ಪರ್ಯಾಲೋಚಿಸಿ ಸಲಹೆ ಹೇಳುವುದಕ್ಕಾಗಿ ಒಂದು ಸಮಿತಿಯನ್ನು ನೇಮಕ ಮಾಡಬೇಕೆಂಬ ನಿರ್ಣಯವನ್ನೂ ಸರ್ಕಾರದವರು ಅದೇ ರೀತಿ ಅಂಗೀಕರಿಸಿದರು. ಹೀಗೆ ಸರ್ಕಾರದವರು ಅವುಗಳನ್ನು ಅಂಗೀಕರಿಸಿದುದನ್ನು

ದಿವಾನ್‌ರವರು ಫೆಬ್ರವರಿ ತಿಂಗಳಿನಲ್ಲಿ ಮತ್ತೆ ಬಹಿರಂಗವಾಗಿ ಸೂಚಿಸಿ ಭರವಸೆ ಕೊಟ್ಟರು. ಆ ಮೇರೆಗೆ ಸಮಿತಿಗಳನ್ನು ನೇಮಕಮಾಡಲು ಸರ್ಕಾರದವರು ಶೀಘ್ರವಾಗಿ ಕ್ರಮ ಜರುಗಿಸಿದರು. ಕಾಂಗ್ರೆಸ್ ಪಕ್ಷದ ಸದಸ್ಯರಲ್ಲಿ ಬಹುಮಂದಿ ರಾಜೀನಾಮೆಯನ್ನು ಕೊಟ್ಟು ಅಧಿವೇಶನಕ್ಕೆ ಬಂದಿಲ್ಲದಿದ್ದೂ ಕೂಡ ನ್ಯಾಯವಿಧಾಯಕ ಸಭೆಯಲ್ಲಿ ಆ ನಿರ್ಣಯಗಳು ಮಂಜೂರಾದುದೂ ಮತ್ತು ಸರ್ಕಾರದವರು ಒಡನೆಯೇ ಅವುಗಳನ್ನು ಅಂಗೀಕರಿಸಿದುದೂ ಗಮನಾರ್ಹವಾದ ಸಂಗತಿಗಳು. ಆ ನಂತರ ಸ್ವಲ್ಪ ಕಾಲದಲ್ಲಿಯೇ, ರಾಜಕೀಯ ಕಾರಣಗಳ ಸಲುವಾಗಿ ಸೆರೆಮನೆಗೆ ಸೇರಿದ್ದವರೆಲ್ಲರನ್ನೂ ಬಿಡುಗಡೆ ಮಾಡಿಸಿದರು; ಅಲ್ಲದೆ ರಾಜಕೀಯ ಗಲಭೆಗಳ ಸಂಬಂಧದಲ್ಲಿ ನಡೆಯುತ್ತಿದ್ದ ಪ್ರಾಸಿಕ್ಯೂಷನ್ ವ್ಯವಹರಣೆಗಳನ್ನೆಲ್ಲಾ ವಾಪಸ್ಸು ತೆಗೆದುಕೊಳ್ಳುವಂತೆ ಅಪ್ಪಣೆಮಾಡಿದರು.

83. ಈ ಮಧ್ಯದಲ್ಲಿ 1938ನೆಯ ಇಸವಿ ಫೆಬ್ರವರಿ ತಿಂಗಳಿನಲ್ಲಿ ಹರಿಪುರದಲ್ಲಿ ನಡೆದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ನಿರ್ಣಯದ ಮೇರೆಗೆ ಸಂಸ್ಥಾನಗಳ ವಿಷಯದಲ್ಲಿ ಕಾಂಗ್ರೆಸ್ಸಿನ ವರ್ತನೆಯು ಹೇಗಿರಬೇಕೆಂಬ ಅಂಶವು ಪುನರಾಲೋಚನೆಯಾಯಿತು; ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನವರು ಸಂಸ್ಥಾನಗಳ ರಾಜಕೀಯ ವಿಚಾರಕ್ಕೆ ಪ್ರವೇಶಿಸದೆ ತಟಸ್ಥರಾಗಿರುವುದೇ ಅವರು ಅನುಸರಿಸಬೇಕಾದ ಕಾರ್ಯನೀತಿಯೆಂದು ವ್ಯವಸ್ಥೆಯಾಯಿತು. ಆದಾದ ಒಡನೆಯೇ ಮೈಸೂರು ಕಾಂಗ್ರೆಸ್ ಪಕ್ಷದ ರಚನೆಯಲ್ಲಿ ಮಾರ್ಪಾಟು ಉಂಟಾಗಲು ಅವಕಾಶವಾಯಿತು. ಅದು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಒಂದು ಶಾಖೆಯಂತಿದ್ದ ತನ್ನ ಪ್ರತ್ಯಕ್ಷ ಸಂಬಂಧವನ್ನೇ ಬಿಡುಗಡೆ ಮಾಡಿಕೊಂಡಿತು. ಅಲ್ಲದೆ ತಾನೇ ಒಂದು ಸ್ವತಂತ್ರ ವ್ಯವಸ್ಥೆಯಾಗಿ ಏರ್ಪಟ್ಟಿದ್ದಂತೆ ಕೆಲಸ ಮಾಡಲುಪಕ್ರಮಿಸಿತು. ಹಾಗಿದ್ದೂ ಅದರ ಸದಸ್ಯರಲ್ಲಿ ಪ್ರತಿಯೊಬ್ಬರೂ ಮೊದಲು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಸದಸ್ಯರಾಗಿ ಸೇರಬೇಕೆಂಬ ನಿರ್ಬಂಧವೂ ಇದ್ದಿತು. ಶಿವಪುರದಲ್ಲಿ ಮೈಸೂರು ಕಾಂಗ್ರೆಸ್ಸಿನ ಮೊದಲನೆಯ ಸಭೆಯು ನಡೆಯಿತು; ಚಳುವಳಿಯು ಧ್ವಜ ಸತ್ಯಾಗ್ರಹ ರೂಪವನ್ನು ತಾಳಿತು; ಇದರ ದೆಸೆಯಿಂದ ಅನೇಕರ ದಸ್ತಗಿರಿಗಳಾಗಿ ಶಿಕ್ಷೆಯಾಗಬೇಕಾಯಿತು. ಚಳುವಳಿಯು ಮತ್ತಷ್ಟು ಪ್ರಬಲವಾಗಿ ವಿದುರಾಶ್ವತ್ಥದ ಗಲಭೆಯಲ್ಲಿ ಪರ್ಯವಸಾನ ಹೊಂದಿತು.

84. ವಿಶ್ವೇಶ್ವರಯ್ಯ ಸಮಿತಿಯವರ ವರದಿಯು ಒಪ್ಪಿಸಲ್ಪಟ್ಟ ಮೇಲೆ ಸರಿಯಾಗಿ ಹತ್ತು ವರ್ಷಗಳ ತರುವಾಯ ರಾಮೇಶಂ ಸಮಿತಿಯವರ ವರದಿಯು ಬಂದಿತು. ಆ ವರದಿಯು ಆಗಿನ ರಾಜಕೀಯ ಸನ್ನಿವೇಶವನ್ನು ಅಧಿಕಾರವಾಣಿಯಿಂದ ವಿವರಿಸಿ ಅಭಿಪ್ರಾಯವು ಸೂಚಿತವಾಗಿರುವ ಪ್ರಮಾಣ ಪತ್ರದಂತಿದೆ. ಮೇಲಿನ ಎರಡು ಪ್ಯಾರಾಗಳಲ್ಲಿ ನಾವು ಈಚಿನ ರಾಜಕೀಯ ವಿದ್ಯಮಾನಗಳನ್ನು ಕುರಿತು ಸೂಚಿಸುವುದರಲ್ಲಿ ಸ್ವಲ್ಪಮಟ್ಟಿಗೆ ಆ ವರದಿಯನ್ನೂ ಆಧಾರವಾಗಿಟ್ಟುಕೊಂಡು

ಪ್ರದರ್ಶಿಸಿದ್ದೇವೆ. ಈಗ ನಮ್ಮ ಸಮಿತಿಯಲ್ಲಿ ನಮ್ಮ ಸಹೋದ್ಯೋಗಿಗಳಲ್ಲೊಬ್ಬರಾಗಿರುವ ಡಾಕ್ಟರ್ ಎಫ್.ಎಕ್ಸ್. ಡಿಸೌಜಾ ಅವರು ಆ ಸಮಿತಿಯ ಸದಸ್ಯರಲ್ಲೊಬ್ಬರಾಗಿದ್ದವರು. ತಾವು ಪ್ರತ್ಯೇಕವಾಗಿ ಒಪ್ಪಿಸಿದ ಟಿಪ್ಪಣಿಯ ರೂಪದ ಲೇಖನದಲ್ಲಿ ಅವರು ಸರ್ಕಾರದ ಕಾರ್ಯ ನೀತಿಯನ್ನು (ಎಂದರೆ 'ಪಾಲಿಸಿ' ಯನ್ನು) ಕುರಿತು ಪ್ರಸ್ತಾಪಿಸಿ ಭಾಷಣಗಳು, ಸಭೆಗಳು ಮುಂತಾದುವು ನಡೆಯಲು ನಿರ್ಬಂಧವನ್ನು ಕಲ್ಪಿಸಿ ಸಾದರಾದ ಪ್ರತಿಬಂಧಕ ಸ್ವಭಾವದ ಹುಕುಮುಗಳ ವಿಷಯವು ಆಕ್ಷೇಪಿಸಲ್ಪಟ್ಟಿವೆ. ಆದರೆ ಪ್ರಜಾ ನೆಮ್ಮದಿಗೆ ಅವಶ್ಯಕವಾದಷ್ಟಕ್ಕಿಂತಲೂ ಹೆಚ್ಚಾಗಿ ಈ ಹುಕುಮುಗಳು ಸಾದರಾದುವೆಂದೇನೂ ನಾನು ಹೇಳಲಾರದವನಾಗಿದ್ದೇನೆ. ಇಷ್ಟಕ್ಕೂ ಮೈಸೂರು ಸರ್ಕಾರದವರು ಕಾಂಗ್ರೆಸ್ಸಿನ ಚಳುವಳಿಯ ವಿಚಾರದಲ್ಲಿ ಅನುಸರಿಸಿರುವ ಕಾರ್ಯನೀತಿಯು ವಿಶೇಷ ಸಮಾಧಾನಕರವಾಗಿದೆ. ಚಳುವಳಿಯ ಪರಿಸ್ಥಿತಿಯು ತೀರ ಉತ್ಕಟವೆನಿಸುವಷ್ಟು ಬಿಕ್ಕಟ್ಟಾಗಿ ಪರಿಣಮಿಸಿದಾಗ ಕೂಡ ಹಲವು ಸಮಯಗಳಲ್ಲಿ ಸರ್ಕಾರದವರು ಶಾಂತಿಸ್ಥಾಪನೆಯ ಮನೋಧರ್ಮವನ್ನೇ ವ್ಯಕ್ತಗೊಳಿಸಿದ್ದಾರೆ. ಶಿಕ್ಷೆಯಾಗಿದ್ದವರಿಗೆ ಕೂಡ ಅವರು ಕ್ಷಮಾದಾನ ಮಾಡಿ ಜೈಲುಗಳಿಂದ ಬಿಡುಗಡೆ ಮಾಡಿಸಿದರು. ರಾಜಕೀಯ ಸುಧಾರಣೆಗಳ ಸಂಬಂಧವಾಗಿ, ಜವಾಬ್ದಾರಿ ಸರ್ಕಾರದ ವಿಷಯವನ್ನು ಕೂಡ ಪರ್ಯಾಲೋಚಿಸಬಹುದೆಂಬ ಅನುಮತಿಯನ್ನು ಕೊಟ್ಟು, ಒಂದು ಆಲೋಚನಾ ಸಮಿತಿಯನ್ನು ನೇಮಕ ಮಾಡುವುದಾಗಿ ಅವರು ತೀರ್ಮಾನಿಸಿ ಪ್ರಕಟಿಸಿದರು. ಹೀಗೆ ಅವರು ಪ್ರದರ್ಶಿಸಿದುದಕ್ಕೆ ಪ್ರತಿಯಾಗಿ ಉಗ್ರರೂಪದ ಚಳುವಳಿಯು ನಡೆದು ವಿದುರಾಶ್ವತ್ಥದ ಗಲಭೆಯಲ್ಲಿ ಪರ್ಯವಸಾನ ಹೊಂದಿತು' ಎಂದು ಸೂಚಿಸಿದ್ದಾರೆ. ವಿದುರಾಶ್ವತ್ಥದ ಗಲಭೆಯ ವಿಚಾರದಲ್ಲಂತೂ ಆ ಸಮಿತಿಯವರು ಸರ್ವಾನುಮತದಿಂದ ಸೂಚಿಸಿದ ಅಭಿಪ್ರಾಯವೇನೆಂದರೆ ಕಾಂಗ್ರೆಸ್ ಭಾಷಣಕಾರರುಗಳು ನಡೆಯಿಸಿದ ದೋಷಾರೋಪಣೆಗಳ ಮತ್ತು ದ್ವೇಷದ ಕೆಟ್ಟ ಪ್ರಚಾರ ಕಾರ್ಯದಿಂದ ಹೆಚ್ಚು ತಿಳುವಳಿಕೆಯಿಲ್ಲದ ಗ್ರಾಮಸ್ಥರು ಕೆರಳಿದರು. ಅಲ್ಲದೆ ಸರ್ಕಾರಿ ಅಧಿಕಾರಿಗಳಿಗೂ ಮತ್ತು ಕಾಂಗ್ರೆಸ್ ಮುಂದಾಳುಗಳಿಗೂ ಪದೇ ಪದೇ ವಿರೋಧವು ಕೈಗಟ್ಟಿತು. ಇದೆಲ್ಲದರ ಪರಿಣಾಮ ಫಲವಾಗಿ ಸಂಸ್ಥಾನದಲ್ಲಿ ತುಂಬ ಬಿಕ್ಕಟ್ಟಿನ ಪರಿಸ್ಥಿತಿಯುಂಟಾಯಿತು. ಕೊನೆಗೆ ಇದು ವಿದುರಾಶ್ವತ್ಥದಲ್ಲಿ ಜನಸಾಮಾನ್ಯರ ಗಲಭೆಯ ರೂಪದಲ್ಲಿ ಪರ್ಯವಸಾನ ಹೊಂದಿತು.'

85. ಮೇಲಿನ ಪ್ಯಾರಾದ ಕೊನೆಯಲ್ಲಿ ವಿದುರಾಶ್ವತ್ಥದ ಗಲಭೆಯ ವಿಚಾರಣಾ ಸಮಿತಿಯ ಸದಸ್ಯರ ಸರ್ವಾನುಮತದ ಅಭಿಪ್ರಾಯವು ಕೆಲವು ವಾಕ್ಯಗಳು ಉದ್ಧೃತವಾಗಿವೆಯಷ್ಟೇ. ಕಳೆದ ಎರಡು ವರ್ಷಗಳಿಂದ ಮೈಸೂರು ಸಂಸ್ಥಾನದಲ್ಲಿ ನಡೆದಿರುವ ಕಾಂಗ್ರೆಸ್ ಚಳುವಳಿಯ ಪ್ರಚಾರ ಕಾರ್ಯವು ನಡೆಯುವಲ್ಲಿ 'ಸತ್ಯ'ಕ್ಕೂ 'ಅಹಿಂಸೆ'ಗೂ ಎಲ್ಲ ಸನ್ನಿವೇಶಗಳಲ್ಲಿಯೂ ಗಮನಕೊಟ್ಟು

ತದನುಸಾರವಾಗಿ ಕಾಂಗ್ರೆಸ್ ಪಕ್ಷದವರು ವರ್ತಿಸಿಲ್ಲವೆಂದು ಸೂಚಿಸುವುದಾದರೆ ಅದೇನು ಅನ್ಯಾಯವಾದ ಗ್ರಹಿಕೆಯಾಗಲಾರದು. ಇಂತಹ ಚಳುವಳಿಗಳ ವಿಷಯವನ್ನು ಪ್ರಸ್ತಾಪಿಸಿ 'ಇಂಡಿಯನ್ ಸ್ಟ್ಯಾಚುಟರಿ ಕಮಿಷನ್' ಸಮಿತಿಯವರು ಹೇಳಿರುವಂತೆ 'ಇಂತಹ ಚಳುವಳಿಗಳಲ್ಲಿ ಬಹಳವಾಗಿ ಬೇರೆ ಬೇರೆಯಾಗಿರುವ ಉದ್ದೇಶದ ಗುರಿಗಳು ಕಾರ್ಯವಿಧಾನಗಳು ಇರತಕ್ಕಂತಹ ಜನರು ಸೇರುವುದು' ತಪ್ಪುವಹಾಗಿಲ್ಲ. ಅಲ್ಲದೆ ಬಗೆ ಬಗೆಯ ಸುಧಾರಣೆಗಳಲ್ಲಿ ಉತ್ಸುಕರಾಗಿರುವವರೆಲ್ಲರೂ ಒಟ್ಟುಗೂಡಿ, ಅದೇ ಸಮಿತಿಯವರು ಹೇಳಿರುವಂತೆ 'ಬೇರೆ ಬೇರೆ ಕಾರಣಗಳಿಂದ ಅತೃಪ್ತರಾಗಿರತಕ್ಕವರನ್ನೆಲ್ಲ ಸೆಳೆದು ತಾವು ಟೀಕೆ ಮಾಡುವ ಸಮಸ್ತ ಕುಂದು ಕೊರತೆಗಳಿಗೂ ಸರ್ಕಾರಿ ಆಡಳಿತವು ಪ್ರಜೆಗಳ ಕೈಗೆ ಬಂದಿಲ್ಲದಿರುವುದೇ ಹೊಣೆಯೆಂದು' ವಾದಿಸುವ ಸಂಭವವು ತಪ್ಪುವಹಾಗೆಯೇ ಇಲ್ಲ. ಮೈಸೂರು ಕಾಂಗ್ರೆಸ್ ಪಕ್ಷದ ಕಾರ್ಯಕಲಾಪಗಳಿಂದಲೂ ಇದೇ ಬಗೆಯ ಫಲಿತಾಂಶಗಳುಂಟಾಗದೇ ಹೋಗಿಲ್ಲವೆಂದು ನಾವು ಹೇಳಿದಲ್ಲದೆ ಯತ್ನವಿಲ್ಲ. ಬ್ರಿಟಿಷ್ ಇಂಡಿಯಾದಲ್ಲಿ ರಾಷ್ಟ್ರೀಯ ಪಕ್ಷವೇರ್ಪಟ್ಟು ಕೆಲಸ ನಡೆದುದು ಅಲ್ಲಿಯ ಇತಿಹಾಸದ ಪರಿಣಾಮ ಫಲ. ಅಲ್ಲಿ ರಾಷ್ಟ್ರೀಯ ಪಕ್ಷವಾದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಪಕ್ಷದವರು ಅನುಸರಿಸಿದ ಕಾರ್ಯವಿಧಾನಕ್ಕೂ ಅವರು ವಿದೇಶೀಯ ಆಡಳಿತಾರರಿಗೆ ವಿರುದ್ಧವಾಗಿ ಅದನ್ನು ಪ್ರಯೋಗಿಸಿದುದಕ್ಕೂ ಕಾರಣಗಳೇನೇ ಆಗಿರಲಿ, ಅನುಚಾನವಾಗಿ ಬಂದಿರುವ ಸತ್ ಸಂಪ್ರದಾಯಗಳಿಂದ ಕೂಡಿರುವ ಮೈಸೂರು ಸಂಸ್ಥಾನದಂತಹ ಸಂಸ್ಥಾನದಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ ನಡೆದುದನ್ನು ಅನುಕರಣ ಮಾಡುವುದರಲ್ಲಿ ಅರ್ಥವೇ ಇಲ್ಲ.

ಮೇಲಿನ ಪ್ಯಾರಾಗಳಲ್ಲಿ ಸೂಚಿಸಿರುವ ಅಂಶಗಳಿಂದ, ಮೈಸೂರು ಸಂಸ್ಥಾನದಲ್ಲಿ ರಾಜಕೀಯ ಪ್ರಗತಿಯು ನಿಧಾನವಾಗಿ ಮುಂದುವರೆದಿದ್ದರೂ ಅದು ಏಕ ಪ್ರಕಾರವಾಗಿ ಕ್ರಮವಾಗಿ ಮುಂದುವರೆದಿದೆ ಎಂದು ಕಂಡು ಬರುತ್ತದೆ. ಮೊದಲು ಮೊದಲು ಇದ್ದ ರಾಜಕೀಯ ಆಶೋತ್ತರಗಳೆಲ್ಲ, ಮುಖ್ಯವಾಗಿ ಸಂಸ್ಥಾನದ ಸರ್ಕಾರಿ ಹುದ್ದೆಗಳಲ್ಲಿ ಸಮಸ್ತ ಕೋಮುಗಳವರಿಗೂ ಯುಕ್ತ ಪ್ರಮಾಣಗಳಲ್ಲಿ ಪ್ರಾತಿನಿಧ್ಯ ದೊರೆಯಬೇಕೆಂಬಷ್ಟಕ್ಕೆ ಮಾತ್ರವೇ ಸಂಬಂಧಪಟ್ಟಿದ್ದವು; ಅದುವರೆಗೆ ಆ ರೀತಿ ಯುಕ್ತವಾದ ಪ್ರಾತಿನಿಧ್ಯ ದೊರೆಯದೇ ಹೋಗಿದ್ದ ಕೋಮುಗಳವರು ಸರ್ಕಾರಕ್ಕೆ ಒತ್ತಾಸೆ ಕೊಡುತ್ತಿದ್ದುದು ಸಹಜವಾಗಿಯೇ ಇದ್ದಿತು. 1924ನೆಯ ಇಸವಿಯ ರಾಜಕೀಯ ಸುಧಾರಣೆಗಳು ಬಂದ ತರುವಾಯ ಸಂಸ್ಥಾನದ ರಾಜಕೀಯ ಮನೋಧರ್ಮವು ಬಹುಮಟ್ಟಿಗೆ ಸಂಪೂರ್ಣವಾಗಿಯೇ ಈ ಮಾರ್ಗವಾಗಿ ತಿರುಗಿ ಈ ಮಾರ್ಗದಲ್ಲಿಯೇ ಬಲವನ್ನು ಪಡೆದಿದ್ದಿತು. ಈಗೇನೋ ಕಾಂಗ್ರೆಸ್ ಪಕ್ಷದವರು ತಮ್ಮ ಪ್ರಚಾರ ಕಾರ್ಯದಲ್ಲಿ ಕೋಮುವಾರು ಭಾವನೆಯ ಮನೋಧರ್ಮವು ಉಚಿತವಲ್ಲವೆಂದು ಖಂಡಿಸುತ್ತಿರುವುದು ನಿಜವಾದರೂ, ನಮ್ಮೆದುರಿಗೆ ಹೇಳಿಕೆ ಕೊಟ್ಟ

ಸಾಕ್ಷಿಗಳಲ್ಲೊಬ್ಬರು ಸಂಸ್ಥಾನದಲ್ಲಿ ಕೋಮುವಾರು ಭಾವನೆ ಅಳಿದು ಹೋಗಿದೆಯೆಂದು ಹೇಳಿದ ಮಾತನ್ನು ಒಪ್ಪುವುದು ನಮಗೆ ಸಾಧ್ಯವಿಲ್ಲದೇ ಹೋಗಿದೆ. ಪೂರ್ಣ ಜವಾಬ್ದಾರಿ ಸರ್ಕಾರವು ಒಡನೆಯೇ ದೊರೆಯಬೇಕೆಂದು ಒತ್ತಾಯ ಪಡಿಸುತ್ತಿರುವವರು, ಆ ಬಗೆಯ ಸರ್ಕಾರವು ಏರ್ಪಟ್ಟೊಡನೆಯೇ ಕೋಮುವಾರು ಸಮಸ್ಯೆಯು ಸಮರ್ಪಕವಾಗಿ ಬಗೆಹರಿದು ಶೀಘ್ರವಾಗಿ ಸರಿಹೋಗುವುದೆಂದು ನಂಬಿದ್ದಾರೆ. ನಮ್ಮ ಅಭಿಪ್ರಾಯದಲ್ಲಿ, ಬಹುಸಂಖ್ಯಾತ ಪಕ್ಷದವರೇ ತಪ್ಪದೆ ಅಧಿಕಾರ ಮಾಡುತ್ತಾ ಇತರರಿಗೆ ಅವಕಾಶವೇ ಇಲ್ಲದಂತಾಗುವ ಪರಿಸ್ಥಿತಿಗೆ ಕಾರಣವಾಗುವಂತೆ ಪೂರ್ಣ ಜವಾಬ್ದಾರಿ ಸರ್ಕಾರ ವ್ಯವಸ್ಥೆಯೇ ಉಪಯೋಗಿಸಲ್ಪಡುವ ಸಂಭವವು ಸಹ, ಅದೇ ಮೇರೆಗೆ ಅಷ್ಟರಮಟ್ಟಿಗೆ ಇದೆಯೆಂದು ತೋರುತ್ತದೆ. ಹಾಗೆ ಆಗುವ ಪಕ್ಷದಲ್ಲಿ, ಬಹು ಸಂಖ್ಯಾತ ಪಂಗಡಗಳವರೇ ಬಹು ಸಂಖ್ಯಾತ ಪಕ್ಷದಲ್ಲಿರುವಂತಾಗುವ ಕಾರಣ, ಈಗಿನ ಬಹು ಸಂಖ್ಯಾತ ಪಕ್ಷದ ಪೂರ್ಣ ಜವಾಬ್ದಾರಿ ಸರ್ಕಾರವೆಂದರೆ ಬಹು ಸಂಖ್ಯಾತ ಪಂಗಡಗಳ ಆಡಳಿತವೇ ಆಗುತ್ತದೆಂಬುದು ನಮ್ಮ ಅಭಿಪ್ರಾಯ.

86. 'ಜವಾಬ್ದಾರಿ ಸರ್ಕಾರ' ಎಂಬುದರ ಅರ್ಥವು ಎಲ್ಲಿಗಿಳಿಯುವುದೆಂಬುದನ್ನು ಈಗ ಪರಿಶೀಲಿಸೋಣ. ಈಚೀಚಿಗೆ ಸಾರ್ವಜನಿಕ ಕ್ಷೇತ್ರಗಳಲ್ಲಿ ಈ ಪದವು ಉಪಯೋಗಿಸಲ್ಪಡುತ್ತಿರುವಷ್ಟು ಮೇಲಿಂದ ಮೇಲೆ ಇತರ ಯಾವ ಪದವೂ ಉಪಯೋಗಿಸಲ್ಪಡುತ್ತಿಲ್ಲ. ಅಲ್ಲದೆ ಹಲವರು ಹಲವು ವಿಧವಾಗಿ ಅರ್ಥವನ್ನಿಟ್ಟು ಈ ಪದವನ್ನು ಪ್ರಯೋಗ ಮಾಡುತ್ತಿದ್ದಾರೆ. ಅಷ್ಟು ಬಗೆಗಳ ಅರ್ಥಗಳಿಂದ ಇತರ ಯಾವ ಪದವನ್ನೂ ಅವರು ಉಪಯೋಗಿಸುತ್ತಿಲ್ಲ. ರಾಜಕೀಯ ಸುಧಾರಣಾ ಸಮಿತಿಯನ್ನು ನೇಮಕಮಾಡುವ ವಿಷಯದಲ್ಲಿ ಸಾದರಾದ ಸರ್ಕಾರಿ ಹುಕುಮಿನಲ್ಲಿ, ಸಮಿತಿಯವರ ಪರ್ಯಾಲೋಚನೆಗೆ ಒಪ್ಪಿಸಿರತಕ್ಕ ವಿಷಯಗಳೆಂಬುದಾಗಿ ಸರ್ಕಾರದವರು ನಮೂದಿಸಿದ್ದ ವಿಷಯಗಳ ವಿಚಾರದಲ್ಲಿ ಮೈಸೂರು ಕಾಂಗ್ರೆಸ್ ಪಂಗಡಗಳವರು ಮಾಡಿದ ಮೊಟ್ಟ ಮೊದಲನೆಯ ಆಕ್ಷೇಪಣೆಯೆಂದರೆ, ಆ ವಾಕ್ಯಗಳಲ್ಲಿ ಜವಾಬ್ದಾರಿ ಸರ್ಕಾರ ಎಂಬ ಮಾತನ್ನು ಸೇರಿಸಿಲ್ಲವೆಂಬುದೆ. ಸಮಿತಿಯವರು ಪರ್ಯಾಲೋಚಿಸಬೇಕಾದ ವಿಷಯಗಳೆಂಬುದಾಗಿ ಆ ಸರ್ಕಾರಿ ಹುಕುಮಿನಲ್ಲಿ ಸೂಚಿತವಾದ ವಿಷಯಗಳು ಜವಾಬ್ದಾರಿ ಸರ್ಕಾರದ ವಿಚಾರವನ್ನೂ ಒಳಗೊಂಡಿರುವಷ್ಟು ವ್ಯಾಪ್ತಿಯುಳ್ಳವಾಗಿವೆ ಎಂಬುದಾಗಿ ಎಷ್ಟು ಸೂಚಿಸಿದ್ದಾಗ್ಯೂ ಪ್ರಯೋಜನವಿಲ್ಲದೇ ಹೋಯಿತು. ಆದುದರಿಂದ ಅನಾವಶ್ಯಕವಾಗಿ ಅಪತಿಳುವಳಿಕೆಗೆ ಅವಕಾಶ ಕೊಡಬಾರದೆಂಬ ಭಾವನೆಯಿಂದ ಸರ್ಕಾರದವರು, ಸಮಿತಿಯವರು ಪರ್ಯಾಲೋಚಿಸಬೇಕಾದ ವಿಷಯಗಳ ಪೈಕಿ ಜವಾಬ್ದಾರಿ ಸರ್ಕಾರದ ವಿಷಯವೂ ಸೇರಿರಬೇಕೆಂಬ ಅಂಶವನ್ನು ನಿರ್ದಿಷ್ಟವಾಗಿ ನಮೂದಿಸುವುದಾಗಿ ಒಪ್ಪಿಕೊಂಡರು. ಆದರೆ 'ಜವಾಬ್ದಾರಿ ಸರ್ಕಾರ' ಎಂಬುದಕ್ಕೆ ಎಲ್ಲ ಜನಗಳು ಒಂದೇ ರೀತಿಯಾಗಿ ಅರ್ಥಮಾಡಿಕೊಂಡಿಲ್ಲ. ವರ್ತಮಾನ ಪತ್ರಿಕೆಗಳಲ್ಲಿಯೂ, ಸಾರ್ವಜನಿಕ

ಭಾಷಣಗಳಲ್ಲಿಯೂ ಮತ್ತು ಪರಸ್ಪರ ಸಂಭಾಷಣೆಗಳಲ್ಲಿಯೂ ಜನರು ಈ ಪದವನ್ನು ನಿರ್ದಿಷ್ಟವಾದ ಯಾವುದೊಂದು ಅರ್ಥದಲ್ಲಿ ಮಾತ್ರವೇ ಉಪಯೋಗಿಸದೆ ಹಲವು ಬಗೆಯ ಅರ್ಥಗಳಿಂದ ಪ್ರಯೋಗ ಮಾಡಿದ್ದಾರೆ. ಈ ಪದಕ್ಕೆ ಇದೇ ಸರಿಯಾದ ಅರ್ಥವೆಂಬ ನಿರ್ದಿಷ್ಟ ಭಾವನೆ ಇಲ್ಲದೆ, ಕೆಲವರು ಜವಾಬ್ದಾರಿ ಸರ್ಕಾರವೆಂದರೆ ಗ್ರೇಟ್ ಬ್ರಿಟನ್ ರಾಜ್ಯದಲ್ಲಿ ಆಚರಣೆಯಲ್ಲಿರುವ ಸರ್ಕಾರಿ ಆಡಳಿತದ ಶಿಸ್ತೆಂಬುದಾಗಿಯೂ ಕೆಲವರು ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳಲ್ಲಿ 'ಪ್ರಾಂತೀಯ ಆಡಳಿತ ಸ್ವಾತಂತ್ರ್ಯ' ಎಂಬ ಹೆಸರಿನಿಂದ ಈಗ ಆಚರಣೆಗೆ ಬಂದಿರುವ ಸರ್ಕಾರಿ ಶಿಸ್ತೆಂಬುದಾಗಿಯೂ ಮತ್ತೆ ಕೆಲವರು ಕೊಚ್ಚಿ ಮುಂತಾದ ಕೆಲವು ಸಂಸ್ಥಾನಗಳಲ್ಲಿ ಈಚೆಗೆ ಆಚರಣೆಗೆ ತಂದ ಸುಧಾರಣೆಯ ಏರ್ಪಾಡುಗಳೇ ಜವಾಬ್ದಾರಿ ಸರ್ಕಾರದ ಏರ್ಪಾಡುಗಳೆಂಬುದಾಗಿಯೂ ವಿವೇಚನೆಯಿಲ್ಲದೆ ಉಪಯೋಗಿಸಿದ್ದಾರೆ. ಇನ್ನು, ಕೆಲವು ವರ್ತಮಾನ ಪತ್ರಿಕೆಗಳವರಂತೂ ಯಾವುದಾದರೂ ಭಾರತೀಯ ಸಂಸ್ಥಾನದವರು ಆಡಳಿತ ಕ್ರಮದಲ್ಲಿ ಯಾವುದಾದರೂ ಅಲ್ಪ ಸ್ವಲ್ಪ ಸುಧಾರಣೆಯು ನಡೆದರೂ 'ಜವಾಬ್ದಾರಿ ಸರ್ಕಾರ ಸ್ಥಾಪನೆ' ಎಂಬ ಶಿರನಾಮೆಯಲ್ಲಿ ಅದನ್ನು ಪ್ರಕಟಿಸುತ್ತಾರೆ. ಅಲ್ಲಿಯ ಒಂದು ಸ್ಥಳೀಯ ಸಂಸ್ಥೆಯಲ್ಲಿ ಅಥವಾ ಮುನಿಸಿಪಲ್ ಸಭೆಯಲ್ಲಿ ಚುನಾಯಿತ ಸದಸ್ಯರ ಸಂಖ್ಯೆಯು ಸ್ವಲ್ಪ ಹೆಚ್ಚಾಗಿರುವಂತೆ ಮಾಡಿದರೂ ಸಾಕು. ಫಲಾನ ಸಂಸ್ಥಾನದಲ್ಲಿ 'ಜವಾಬ್ದಾರಿ ಸರ್ಕಾರದ ಸ್ಥಾಪನೆ' ಎಂಬ ಶಿರನಾಮೆಯನ್ನು ದೊಡ್ಡ ದೊಡ್ಡ ಅಕ್ಷರಗಳಲ್ಲಿ ಮುದ್ರಿಸಿ ವರ್ತಮಾನ ಪತ್ರಿಕೆಗಳವರು ಅನೇಕವೇಳೆ ಸಂಗತಿಗಳನ್ನು ಪ್ರಕಟಿಸುತ್ತಾರೆ. ಈಗ್ಗೆ ಕೆಲವು ವರ್ಷಗಳ ಹಿಂದೆ ಎಂದರೆ, ಸುಮಾರು ಶೀಲ್ ಸಮಿತಿಯವರು ಪರ್ಯಾಲೋಚನೆ ನಡೆಸುತ್ತಿದ್ದ ಕಾಲದಲ್ಲಿ ತುಂಬ ಮಾತನಾಡುವಾಗ ಜವಾಬ್ದಾರಿ ಸರ್ಕಾರ ಎಂಬ ಪದವನ್ನು ಪದೇ ಪದೇ ಉಪಯೋಗಿಸುತ್ತಿದ್ದರೆಂದೂ, ಮಂತ್ರಾಲೋಚನಾ ಸಭೆಯಲ್ಲಿ (ಎಂದರೆ ಎಕ್ಸಿಕ್ಯುಟಿವ್ ಕೌನ್ಸಿಲ್) ಸಭೆಯಲ್ಲಿ ಖಾಸಗಿ ದೊಡ್ಡ ಮನುಷ್ಯರೊಬ್ಬರನ್ನು ಸಚಿವರನ್ನಾಗಿ ನೇಮಕ ಮಾಡಬೇಕೆಂಬ ಅಭಿಪ್ರಾಯದಿಂದಲೇ ಎಂದು ನಮ್ಮ ಮುಂದೆ ಬಾಯಿ ಮಾತಿನಲ್ಲಿ ಹೇಳಿಕೆ ಕೊಟ್ಟಿರತಕ್ಕ ಕೆಲವರು ತಿಳಿಸಿರುತ್ತಾರೆ. ಈ ರೀತಿಯಾಗಿ ನಿರ್ದಿಷ್ಟವಾದ ಒಂದು ಅರ್ಥವಿಲ್ಲದೆಯೇ ಜನಗಳು ಈ ಪದವನ್ನು ಉಪಯೋಗಿಸುತ್ತಿದ್ದಾರೆ ಮತ್ತು ಈ ಕಾಲದಲ್ಲಿ ಜನರ ರಾಜಕೀಯ ಆಶೋತ್ತರಗಳೆಲ್ಲವೂ ಜವಾಬ್ದಾರಿ ಸರ್ಕಾರದ ಸಂಬಂಧವಾದುದೇ ಆಗಿವೆ ಎಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಆದುದರಿಂದ ಮೈಸೂರು ಸಂಸ್ಥಾನದ ವಿಷಯದಲ್ಲಿ ಅನ್ವಯಿಸುವುದರಲ್ಲಿ 'ಜವಾಬ್ದಾರಿ ಸರ್ಕಾರ' ಎಂಬುದರ ಸರಿಯಾದ ಅರ್ಥವೇನೆಂಬುದನ್ನು ವಿಶದಪಡಿಸಲು ಈಗ ಪ್ರಯತ್ನಿಸಲಾಗುವುದು.

.....

.....

112. ಕೆಲವು ಭಾರತೀಯ ಸಂಸ್ಥಾನಗಳಲ್ಲಿ, ಕಾನೂನಿಗನುಸಾರವಾಗಿ ಆಡಳಿತ ನಡೆಯುವ ಶಿಸ್ತು ಈಗೀಗ ಆಚರಣೆಗೆ ಬರುತ್ತಿದೆ. ಈ ರೀತಿಯಾದ ಶಿಸ್ತನ್ನು ಆಚರಣೆಗೆ ತರುವುದೇ ಭಾರತೀಯ ಸಂಸ್ಥಾನಗಳಲ್ಲಿ ಕೈಗೊಳ್ಳತಕ್ಕ ರಾಜಕೀಯ ಅಭಿವೃದ್ಧಿ ಸಾಧನೆಯ ಏರ್ಪಾಡುಗಳ ಮೊಟ್ಟ ಮೊದಲನೆಯ ಧ್ಯೇಯವಾಗಿರಬೇಕೆಂಬುದಾಗಿ ಗಾಂಧೀಜಿಯವರು ಈಚೆಗೆ (ಜೂನ್ 1939) ಕೊಟ್ಟಿರತಕ್ಕ ಒಂದು ಹೇಳಿಕೆಯಲ್ಲಿ ಸೂಚಿಸಿರುತ್ತಾರೆ. ಈ ಶಿಸ್ತು ಅನೇಕ ಸಂಸ್ಥಾನಗಳಲ್ಲಿ ಈಗೀಗ ಆಚರಣೆಗೆ ಬರುತ್ತಿರುವಲ್ಲಿ ಈ ಶಿಸ್ತು ಸುಮಾರು ಒಂದು ಶತಮಾನದ ಹಿಂದೆಯೇ ಮೈಸೂರು ಸಂಸ್ಥಾನದಲ್ಲಿ ಆಚರಣೆಗೆ ಬಂದಿತು. 1881ನೇ ಇಸವಿಯಲ್ಲಿ ಬ್ರಿಟಿಷ್ ಸರ್ಕಾರದವರು ಸಂಸ್ಥಾನದ ಆಡಳಿತವನ್ನು ಶ್ರೀಮಾನ್ ಮಹಾರಾಜರವರಿಗೆ ಒಪ್ಪಿಸಿಕೊಟ್ಟಾಗಿನಿಂದಲೂ ಸಂಸ್ಥಾನದಲ್ಲಿ ಸಾಂಕುಶ ಪ್ರಭುತ್ವವು ನೆಲೆಗೊಂಡಿದೆ. ಈ ಸುಯೋಗವು ನಮಗೆ ಲಭಿಸಿರುವುದಕ್ಕಾಗಿ ನಾವು ಹೆಮ್ಮೆ ಪಡಬಹುದಾಗಿದೆ. ನಮ್ಮ ಸಂಸ್ಥಾನದ ಪ್ರಭುಗಳಾದ ಶ್ರೀಮಾನ್ ಮಹಾರಾಜರವರ ಖಾಸಾ ಬೊಕ್ಕಸಕ್ಕೆ ಸಂಸ್ಥಾನದ ಹುಟ್ಟುವಳಿಯಿಂದ ಸಂದಾಯವಾಗತಕ್ಕ ಮೊತ್ತವು ಇಷ್ಟೆ - ಎಂದು ಕಡ್ಡಾಯವಾಗಿ ಪರಿಮಿತಿಗೊಳಿಸಲ್ಪಟ್ಟಿದೆ. ಶ್ರೀಮಾನ್ ಮಹಾರಾಜರವರ ನ್ಯಾಯ ವಿಮರ್ಶಾ ವಿಚಕ್ಷಣೆಯು ಆಧುನಿಕ ಕ್ರಮಗಳಿಗನುಸಾರವಾಗಿವೆ ಮತ್ತು ವ್ಯವಹಾರ ಶಾಸ್ತ್ರದಲ್ಲಿ ಮತ್ತು ಕಾನೂನಿನ ನಿಯಮ ನಿಬಂಧನೆಗಳಲ್ಲಿಯೂ ಸುಶಿಕ್ಷಿತರಾದವರಿಗೆ ನ್ಯಾಯ ವಿಮರ್ಶೆಯ ಕಾರ್ಯವೂ ವಹಿಸಲ್ಪಟ್ಟಿವೆ. ಪ್ರಜಾ ಕ್ಷೇಮ ಸಾಧನೆಯೇ ಶ್ರೀಮಾನ್ ಮಹಾರಾಜರವರಿಗಿರತಕ್ಕ ಏಕ ಮಾತ್ರ ಧ್ಯೇಯವಾಗಿದೆ. ಶ್ರೀಮಾನ್ ಮಹಾರಾಜರವರು ಸುಸ್ಥಾಪಿತವಾಗಿ ಅಂಗೀಕೃತವಾಗಿರತಕ್ಕ ರಾಜ್ಯಾಂಗ ವ್ಯವಸ್ಥೆಯ ಮೂಲಕ ವ್ಯವಹರಿಸುತ್ತಾರೆಯೇ ಹೊರತು ಸ್ವತಂತ್ರವಾಗಿ ಎಂದಿಗೂ ವರ್ತಿಸುವುದಿಲ್ಲ. ಈ ಬಗ್ಗೆಯ ಸಾಂಕುಶ ಪ್ರವರ್ತನೆಯುಳ್ಳ ಶ್ರೀಮಾನ್ ಮಹಾರಾಜರವರ ಪ್ರಭುತ್ವವು ಮೈಸೂರು ಸಂಸ್ಥಾನದಲ್ಲಿ ನೆಲೆಗೊಂಡಿದೆ. 'ಜವಾಬ್ದಾರಿ ಸರ್ಕಾರ' ಎಂದರೆ, ಸರ್ಕಾರದವರ ಕಾರ್ಯನೀತಿಯೂ ಮತ್ತು ಸಂಸ್ಥಾನದ ಹಣಗಳನ್ನು ಖರ್ಚು ಮಾಡುವ ಕ್ರಮವೂ ಬಹುಮಟ್ಟಿಗೆ ಪ್ರಜಾಪ್ರತಿನಿಧಿ ಸಭೆಗಳಲ್ಲಿಯೂ ಮತ್ತು ನ್ಯಾಯ ವಿಧಾಯಕ ಸಭೆಗಳಲ್ಲಿಯೂ ಪ್ರಜೆಗಳಿಂದ ಚುನಾಯಿತರಾಗಿ ಬಂದಿರತಕ್ಕ ಸದಸ್ಯರುಗಳ ಅಭಿಪ್ರಾಯಾನುಸಾರವಾಗಿರಬೇಕೆಂಬುದೇ ಆದ ಪಕ್ಷದಲ್ಲಿ, ಮೈಸೂರು ಸಂಸ್ಥಾನದಲ್ಲಿ ಬಂದಿತವಾಗಿಯೂ ಈಗಾಗಲೇ ಜವಾಬ್ದಾರಿ ಸರ್ಕಾರವು ಸ್ಥಾಪಿತವಾಗಿದೆಯೆಂದು ಹೇಳಬಹುದು.

.....

.....

116. ಬ್ರಿಟಿಷ್ ಇಂಡಿಯಾದಲ್ಲಿ 'ಜವಾಬ್ದಾರಿ ಸರ್ಕಾರವು' ಇಂಗ್ಲೆಂಡಿನ ಪಾರ್ಲಿಮೆಂಟರಿ ಶಿಸ್ತಿನ ಮಾದರಿಯಲ್ಲಿ ಕೆಲಸ ಮಾಡುವಂತೆ ಅಭಿವೃದ್ಧಿಗೊಳ್ಳುವುದು ಸಾಧ್ಯವೇ ಎಂಬುದನ್ನು ಈಗಿನ ಪರಿಸ್ಥಿತಿಯಲ್ಲಿ ಖಂಡಿತವಾಗಿ ಹೇಳುವುದು ಕಷ್ಟ. ಬ್ರಿಟಿಷ್ ಮಾದರಿಯ ಶಿಸ್ತನ್ನು ಇತರ ಅನೇಕ ದೇಶಗಳವರು ಅನುಸರಿಸದಾಗ್ಯೂ ಸಹ, ಇಂಗ್ಲೆಂಡ್ ದೇಶದಲ್ಲಿರುವಂತೆ, ಪಂಗಡ ಭೇದವಿಲ್ಲದೆ ಸಾರ್ವತ್ರಿಕ ಹಿತಸಾಧನೆಯ ಸಂಬಂಧದ ಮೂಲ ವಿಚಾರಗಳಲ್ಲಿ ಏಕಾಭಿಪ್ರಾಯವುಳ್ಳವುಗಳಾಗಿದ್ದು ಅವುಗಳಿಗೆ ಸಂಬಂಧಪಟ್ಟ ಸಾಧನ ಕ್ರಮಗಳ ವಿಷಯದಲ್ಲಿ ಮಾತ್ರ ಭಿನ್ನಾಭಿಪ್ರಾಯವುಳ್ಳವಾಗಿರುವ ಎರಡು ದೊಡ್ಡ ರಾಜಕೀಯ ಪಕ್ಷಗಳು ಏರ್ಪಟ್ಟಿರುವ ದೇಶಗಳಲ್ಲಿ ಮಾತ್ರ ಆ ಶಿಸ್ತು ಸುಗಮವಾಗಿ ನಡೆದು ಬಂದಿದೆ. ಅನೇಕ ಸಣ್ಣ ಪಂಗಡಗಳಿದ್ದು, ಸರ್ವದಾ ಬದಲಾವಣೆ ಹೊಂದುತ್ತಿರುವ ಬೇರೆ ಬೇರೆ ಪಂಗಡಗಳು ಹೇಗೆ ಕಲೆತು ಬಹು ಸಂಖ್ಯಾತ ಪಕ್ಷ ರೂಪಕ್ಕೆ ಬಂದರೆ ಹಾಗೆ ಮಂತ್ರಿ ಮಂಡಲವು ಏರ್ಪಟ್ಟು ಸರ್ಕಾರವು ನಡೆಯಬೇಕಾದ ವ್ಯವಸ್ಥೆಯು ಇರತಕ್ಕ ದೇಶಗಳಲ್ಲಿ ಬ್ರಿಟಿಷ್ ಮಾದರಿಯ ಶಿಸ್ತು ಅಷ್ಟು ಸುಸೂತ್ರವಾಗಿ ನಡೆದು ಬಂದಿಲ್ಲ. ಅಂಥ ದೇಶಗಳಲ್ಲಿ ಪ್ರಜಾಸ್ವಾತಂತ್ರ್ಯದ ಆಶಯಕ್ಕೇನೂ ಭಂಗವಿಲ್ಲ. ಆದರೆ ಸರ್ಕಾರದ ಸ್ಥಿರತೆಗೆ ಕೊರತೆಯಿರುತ್ತದೆ. ಏಕೆಂದರೆ ಬಹು ಬೇಗ ಬೇರೆ ಬೇರೆ ಅಧಿಕ ಸಂಖ್ಯಾತ ಪಂಗಡಗಳು ಏರ್ಪಡುತ್ತ ಆಯಾ ಪಂಗಡದ ಸದಸ್ಯ ಮಂಡಲವು ಅಧಿಕಾರ ಸ್ಥಾನಕ್ಕೆ ಬಂದಿದ್ದು ಅದನ್ನು ಆ ಸ್ಥಾನದಿಂದ ತಪ್ಪಿಸುವುದು ಸಾಧ್ಯವೇ ಇಲ್ಲದಿರುವಂಥ ಪರಿಸ್ಥಿತಿಯುನ್ನುಳ್ಳ ದೇಶಗಳಲ್ಲಿ ಬ್ರಿಟಿಷ್ ಮಾದರಿಯ ಶಿಸ್ತು ನಿಷ್ಫಲವಾಗಿ ಪರಿಣಮಿಸಿರುತ್ತದೆ. ಇಟಲಿ ದೇಶವೂ ಮತ್ತು ಯೂರೋಪಿನ ಇತರ ಕೆಲವು ದೇಶಗಳೂ ಇದಕ್ಕೆ ನಿದರ್ಶನವಾಗಿದೆ. ಭರತಖಂಡದಲ್ಲಿ ಜನಗಳು ಬಹಳ ಮಟ್ಟಿಗೆ ಅನಕ್ಷರಸ್ತರರಾಗಿರುವುದರಿಂದಲೂ, ಸಾಮಾಜಿಕ ಪರಿಸ್ಥಿತಿಯೇ ಒಂದು ಮಾದರಿಯಾಗಿರುವುದರಿಂದಲೂ, ಇಲ್ಲ ಈ ಶಿಸ್ತನ್ನು ಹಾಗೆಯೇ ಆಚರಣೆ ತರುವುದರಲ್ಲಿ ಭಾಧಕಗಳು ಇನ್ನೂ ಹೆಚ್ಚು. ಮೈಸೂರು ಸಂಸ್ಥಾನದ ಪರಿಸ್ಥಿತಿಯೂ ಅದೇ ರೀತಿಯಾಗಿದೆ. ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳಲ್ಲಿ ಪ್ರಾಂತ ಆಡಳಿತ ಸ್ವಾತಂತ್ರ್ಯದ ಶಿಸ್ತಿನಂತೆ ಕೆಲಸ ಮಾಡುತ್ತಿರುವುದರ ಅನುಭವದಿಂದ ನಾವು ಕಲಿಯಬಹುದಾದ ಒಂದು ವಿಷಯವೇನೋ ಇದೆ. ಅದೇನೆಂದರೆ, ಸನ್ನಿವೇಶಗಳು ಅನುಕೂಲವಿಲ್ಲದಿರುವಾಗ, ಬ್ರಿಟಿಷ್ ಮಾದರಿಯ ಜವಾಬ್ದಾರಿ ಸರ್ಕಾರದ ಶಿಸ್ತನ್ನು ಅನುಸರಿಸುವುದು ನಿಷ್ಪ್ರಯೋಜಕವಾದುದೆಂಬುದೇ ಆ ವಿಷಯ. ಆ ಶಿಸ್ತನ್ನು ಅನುಸರಿಸುವುದಕ್ಕೆ ಸಮೀಚೀನವಾದ ಕಾಲ ಒದಗುವುದಕ್ಕೆ ಮುಂಚಿತವಾಗಿಯೇ ಅದನ್ನು ಆಚರಣೆಗೆ ತರುವುದರಿಂದ ಒಂದೇ ಒಂದು ಪ್ರಬಲವಾದ ಪಂಗಡದವರು ಕೈಯಲ್ಲೇ ಅಧಿಕಾರವೆಲ್ಲವೂ ಇರುವಂತಾಗುವ ಸಂಭವವೂ ಬಹಳವಾಗಿರುತ್ತದೆ. ಹೀಗೆ ಒಂದೇ ಪಂಗಡದವರು – ಅವರು ಕೋಮುವಾರು ಭಾವನೆಯ ಆಧಾರದ ಮೇಲೆ

ಏರ್ಪಟ್ಟ ಪಂಗಡದವರಾಗಿರಲಿ ಅಥವಾ ಇತರ ಯಾವುದಾದರೂ ಆಧಾರದ ಮೇಲೆ ಏರ್ಪಟ್ಟ ಪಂಗಡದವರಾಗಿರಲಿ – ಪ್ರಬಲವಾಗಿರುವುದಾದರೆ ಅದು ವಾಸ್ತವವಾದ ಪ್ರಜಾಸತ್ತಾತ್ಮಕ ವಿಧಾನಗಳಲ್ಲಿ "ಪಾರ್ಲಿಮೆಂಟರಿ" ಶಿಸ್ತನ್ನು ಸರಿಯಾಗಿ ಅನುಸರಿಸಿ ಕೆಲಸ ಮಾಡುವುದಕ್ಕೆ ಸಾಧಕವಾಗಿರುವುದಿಲ್ಲ. ಆದಕಾರಣ, ಮೈಸೂರು ಸಂಸ್ಥಾನದಲ್ಲಿ, ಅಲ್ಲಿಯ ಸನ್ನಿವೇಶಗಳಿಗನುಗುಣವಾದ ರೀತಿಯಲ್ಲಿ ರಾಜಕೀಯ ಅಭ್ಯುದಯ ಸಾಧನೆಯನ್ನು ಪಡೆಯುತ್ತಾ, ಬರುವಂತೆ ಸಾವಧಾನವಾಗಿ ಕ್ರಮಶಃ ಮುಂದುವರಿಯುತ್ತ ಬರುವುದು ವಿವೇಕಯುತವಾದ ಮಾರ್ಗವಾಗಿದೆಯೆಂದು ನಮಗೆ ತೋರುತ್ತದೆ."

ವರದಿಯ ಕಂಡಿಕೆ 112ರ ಭಾಗದಲ್ಲಿ ಮೈಸೂರು ಸರ್ಕಾರ ಬ್ರಿಟಿಷರ ಪ್ರಭುತ್ವಕ್ಕೆ ಒಳಗಾಗಿರುವ ವಿಚಾರದಲ್ಲಿ ಸಂತೃಪ್ತಿ, ಹೆಮ್ಮೆ ವ್ಯಕ್ತಪಟ್ಟಿರುವ ಧೋರಣೆಯನ್ನು ವಾಚಕರು ಗಮನಿಸಬೇಕು. ಅಷ್ಟೇ ಅಲ್ಲ 'ಮೈಸೂರು ಕಾಂಗ್ರೆಸ್' ಪಕ್ಷದ ಹುಟ್ಟು, ಧ್ಯೇಯೋದ್ದೇಶಗಳ ಬಗ್ಗೆ ಹಾಗೂ 'ಜವಾಬ್ದಾರಿ ಸರ್ಕಾರ'ದ ಪರಿಕಲ್ಪನೆ ಮತ್ತು ಕಾರ್ಯಾಚರಣೆ ಬಗ್ಗೆ ಸಮಿತಿ ತಪ್ಪು ಕಲ್ಪನೆಯನ್ನು ಮತ್ತು ಪೂರ್ವಗ್ರಹ ಭಾವನೆಯನ್ನು ತಳೆದಿತ್ತೆಂಬುದಕ್ಕೆ ಈ ವರದಿ ಸ್ಪಷ್ಟ ಸಾಕ್ಷಿಯಾಗಿದೆ. ಸಮಿತಿ ಕುಹಕತರ್ಕ ಸೂತ್ರಗಳನ್ನುದ್ಧರಿಸಿ ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಏರ್ಪಡುವುದನ್ನು ತಪ್ಪಿಸುವ ಸಲುವಾಗಿ ಬಳಸು ಯತ್ನ ಮಾಡಿರುವುದು ಗಮನಾರ್ಹ.

## ರಜಾಕಾರರ ಸಮಸ್ಯೆಯ ಬಗ್ಗೆ ಟಿ. ಸಿದ್ದಲಿಂಗಯ್ಯನವರ ನಿಲುವು ಮತ್ತು ಸಾಧನೆ

1947ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಾಗಲೂ ಹೈದ್ರಾಬಾದ್ ಸಂಸ್ಥಾನದ ನೈಜಾಮರ ಆಡಳಿತ ಹೊಟ್ಟೆಯೊಳಗಿನ ಹುಣ್ಣಾಗಿ ಸಂಭವಿಸಿತ್ತು. ಕಾರಣ ಹೈದ್ರಾಬಾದ್ ನಿಜಾಮರು ರಹಸ್ಯವಾಗಿ ಪಾಕಿಸ್ತಾನದ ಪರ ಧೋರಣೆಯುಳ್ಳವರಾಗಿದ್ದರು. ನಿಜಾಮರ ದಂಡಬಲದ ಸಚೇತಕನಾಗಿದ್ದ ಖಾಸಿಂ ರಜ್ವಿ ನೇತೃತ್ವದಲ್ಲಿ ರಜಾಕಾರರು ಎಂಬ ಆತಂಕವಾದಿ ಪಂಗಡ ಇಡೀ ದೇಶದಲ್ಲಿ ಲೂಟಿ, ದರೋಡೆ, ಭಯೋತ್ಪಾದಕತೆ ಮುಂತಾದ ಚಟುವಟಿಕೆಗಳಲ್ಲಿ ತೊಡಗಿದ್ದಿತು. ಹಿಂದಿನ ಹೈದ್ರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ಇವರು ಮುಗ್ಧ ಹಳ್ಳಿಗರನ್ನು ಲೂಟಿ ಮಾಡುವುದು ಕಿರುಕುಳಕ್ಕೊಳಗುಮಾಡುವುದು ಅವ್ಯಾಹತವಾಗಿ ನಡೆದಿತ್ತು.

ಕಾಂಗ್ರೆಸ್ ಚಳುವಳಿಯನ್ನು ಮೈಸೂರು ಸಂಸ್ಥಾನದ ಹೊರಗೂ ಹಬ್ಬುವಂತೆ ಮಾಡಿದ ಸಿದ್ದಲಿಂಗಯ್ಯನವರಿಗೆ ಈ ನೆರೆ ರಾಜ್ಯಗಳ ಸ್ನೇಹ ಲಭ್ಯವಾಗಿತ್ತು. ಹೈದ್ರಾಬಾದ್ ಪ್ರದೇಶದವರಾದ ಶ್ರೀರಂಗಾಚಾರ್, ಡಾ: ಮೇಲುಕೋಟೆ, ರಾಯಚೂರು ಸ್ವಾಮಿ, ಜನಾರ್ಧನ ದೇಸಾಯಿ ಮುಂತಾದವರು ಈ ಸಮಸ್ಯೆಯನ್ನು ಮೈಸೂರು ಕಾಂಗ್ರೆಸಿನ ಮುಂದೆ ಒಡ್ಡಿ ಪರಿಹಾರವನ್ನು ನಿರೀಕ್ಷಿಸಿದರು.

ಈ ರಜಾಕಾರರು ಬೆಂಗಳೂರು ನಗದರಲ್ಲೂ ದುಷ್ಕೃತ್ಯಗಳಲ್ಲಿ ತೊಡಗಿದ್ದರು. ಹೆಚ್ಚಾಗಿ ಮುಸ್ಲಿಂ ಜನಸಂಖ್ಯೆಯಿದ್ದ ನರಸಿಂಹರಾಜ ರಸ್ತೆಯ ಅಕ್ಕಪಕ್ಕದ ಪ್ರದೇಶ ಅವರ ಚಟುವಟಿಕೆಯ ಕೇಂದ್ರವಾಗಿತ್ತು. ಇಲ್ಲಿ ರಾತ್ರಿ ಇಡೀ ತೆರೆದಿರುತ್ತಿದ್ದ ಸಣ್ಣ ಸಣ್ಣ ಟೀ ಅಂಗಡಿಗಳಲ್ಲಿ ಪಾಕಿಸ್ತಾನ ರೇಡಿಯೋ ಸುದ್ದಿಗಳು ನಿರಂತರ ಪ್ರಸಾರವಾಗುತ್ತಿದ್ದವು. ಪಾಕಿಸ್ತಾನಕ್ಕೆ ಪ್ರತ್ಯೇಕವಾಗಿ ಸ್ವಾತಂತ್ರ

ದೊರೆತ ಸುದ್ದಿ ಈ ಪ್ರದೇಶದಲ್ಲಿ ಹಬ್ಬದ ವಾತಾವರಣವನ್ನುಂಟು ಮಾಡಿತ್ತು. 'ಹೈದ್ರಾಬಾದಿನ ಖಾಸಿಂ ರಜ್ವಿ ಮೈಸೂರು ಸಂಸ್ಥಾನದ ಮೇಲೆ ಆಕ್ರಮಣ ನಡೆಸಿ ಸ್ವಾಧೀನಪಡಿಸಿಕೊಳ್ಳಲಿರುವ ಸಂಚು ದಟ್ಟವಾಗಿ ಹಬ್ಬಿತ್ತು.'

ಸರ್ಕಾರ ಕೆ.ಎಂ. ಮುನ್ಷಿ ಯವರನ್ನು ರಜಾಕಾರರ ಚಟುವಟಿಕೆಗಳನ್ನು ಗಮನಿಸಿ ಸರ್ಕಾರಕ್ಕೆ ವರದಿ ಮಾಡಲು ಸ್ಥಳೀಯ ಪ್ರತಿನಿಧಿಯಾಗಿ ನೇಮಿಸಿತ್ತು. ಸಿದ್ದಲಿಂಗಯ್ಯನವರು ಬೆಂಗಳೂರು ಅರಳೆಪೇಟೆಯಲ್ಲಿದ್ದ ಕಾಂಗ್ರೆಸ್ ಕಛೇರಿಯಿಂದ ಲಾಂಗ್ ಫರ್ಡ್ ಗಾರ್ಡನ್ಸ್‌ನಲ್ಲಿದ್ದ ತಮ್ಮ ಮನೆಗೆ ಪ್ರತಿದಿನ ನಡೆದುಕೊಂಡು ಹೋಗುವಾಗ ನರಸಿಂಹರಾಜ ರಸ್ತೆ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದರು. ದಿನೇ ದಿನೇ ಹೆಚ್ಚುತ್ತಿದ್ದ ಈ ಚಟುವಟಿಕೆಗಳ ಬಗ್ಗೆ ಮುನ್ಷಿಯವರೊಂದಿಗೆ ವಿಚಾರ ಮಾಡಿದರು. ಮುನ್ಷಿಯವರು ಸರ್ದಾರ್ ಪಟೇಲ್‌ರೊಂದಿಗೆ ಆಲೋಚಿಸುವಂತೆ ಸಿದ್ದಲಿಂಗಯ್ಯನವರಿಗೆ ಸೂಚನೆ ನೀಡಿದರು. ಸಿದ್ದಲಿಂಗಯ್ಯ 1948ರ ಸೆಪ್ಟೆಂಬರ್ 7ರಂದು ಪಾರ್ಲಿಮೆಂಟ್ ಭವನದಲ್ಲಿ ಉಪ ಪ್ರಧಾನಿಗಳ ಕಛೇರಿಯಲ್ಲಿ ಸರ್ದಾರ್ ಪಟೇಲರನ್ನು ಭೇಟಿಯಾದ ಸಂದರ್ಭದಲ್ಲಿ ಉಭಯತ್ರರಿಗೂ ನಡೆದ ಸಂವಾದದ ತುಣುಕನ್ನು ಸಿದ್ದಲಿಂಗಯ್ಯನವರ ಸ್ಮರಣ ಲೇಖನದಿಂದ ಆಯ್ದು ಇಲ್ಲಿ ಉದ್ಧರಿಸಲಾಗಿದೆ:

" . . . . .

. . . . .

ಸಿದ್ದಲಿಂಗಯ್ಯ: "ಸರ್ದಾರರೆ, ನೀವು ತಪ್ಪುಗಳ ಸರಮಾಲೆಯನ್ನೇ ಕಟ್ಟುತ್ತಿದ್ದೀರಿ."

ಸರ್ದಾರ್ ಪಟೇಲ್: "ಅವು ಯಾವುವು ?"

ಸಿದ್ದಲಿಂಗಯ್ಯ: "ಮೊದಲನೆಯದಾಗಿ ದೇಶದ ವಿಭಜನೆ"

ಸರ್ದಾರ್ ಪಟೇಲ್: "ಅದಾಗದಿದ್ದರೆ ಬ್ರಿಟಿಷರು ದೇಶ ಬಿಟ್ಟು ಹೋಗುತ್ತಿರಲಿಲ್ಲ. ನಮಗೆ ಸ್ವಾತಂತ್ರ್ಯವೂ ಇಲ್ಲ : ಮತ್ತೇನು ?"

ಸಿದ್ದಲಿಂಗಯ್ಯ: "ಕಾಶ್ಮೀರ ಸಮಸ್ಯೆಯ ಬಗ್ಗೆ ತಪ್ಪು ಮಾಡಿದಿರಿ"

ಸರ್ದಾರ್ ಪಟೇಲ್: "ಅದು ಜವಾಹರರ ತಪ್ಪು, ನನ್ನದಲ್ಲ, ಅವರನ್ನೇ ಕೇಳು"

ಸಿದ್ದಲಿಂಗಯ್ಯ: "ಈಗ ನೀವು ಇನ್ನೊಂದು ತಪ್ಪು ಮಾಡುತ್ತಿದ್ದೀರಿ : ರಜಾಕಾರರ ಚಟುವಟಿಕೆಗಳು ಇಡೀ ದಕ್ಷಿಣದಲ್ಲಿ ಬಿಸಿಯನ್ನುಂಟು ಮಾಡುತ್ತಿವೆ. ದಕ್ಷಿಣದಲ್ಲೊಂದು ಪಾಕಿಸ್ತಾನ ಸೃಷ್ಟಿಯಾಗುವುದಕ್ಕೆ ನೀವೇ ಹೊಣೆಗಾರರಾಗುತ್ತೀರಿ."

ಈ ಮಾತಿಗೆ ಸರ್ದಾರ್ [illegible] ಸಿದ್ದಲಿಂಗಯ್ಯನವರನ್ನು ಮೈಸೂರಿನ [illegible] [illegible]. ಅಲ್ಲಿಂದ [illegible] (ಸರ್ದಾರರ ಮಗಳು) ಸಿದ್ದಲಿಂಗಯ್ಯನವರಿಗೆ ಸದ್ಯಕ್ಕೆ ಅಲ್ಲಿಂದ [illegible] ಮತ್ತೆ [illegible] ಸೂಚನೆ ನೀಡಿದ್ದರು. ಮತ್ತೆ ಮಣಿಬೆನ್ ಭಾನುವಾರದ ದಿನ ತಮ್ಮ ಮನೆಯಲ್ಲಿ ಭೇಟಿಯಾಗುವಂತೆ ಹೇಳಿಕಳುಹಿಸಿದರು. ಸಿದ್ದಲಿಂಗಯ್ಯ ತಮ್ಮೊಡನೆ ಮೈಸೂರು ಕಾಂಗ್ರೆಸ್‌ನ ಕಾರ್ಯದರ್ಶಿಯಾಗಿದ್ದ ಎ.ಜಿ. ರಾಮಚಂದ್ರ ರಾಯರನ್ನು ಕರೆತರಲು ಅನುಮತಿ ಪಡೆದುಕೊಂಡು ಭಾನುವಾರ ಸರ್ದಾರರ ಮನೆಗೆ ಹೋದರು.

ಆ ಮನೆಯ ವರಾಂಡದಲ್ಲಿ ಸುತ್ತಲೂ ಸುಮಾರು 30 ಜನ ರಾಜಕುಮಾರರು ರತನ್ ಕುರ್ಚಿಗಳಲ್ಲಿ ಸರ್ದಾರರ ಕರೆಗಾಗಿ ಕಾಯುತ್ತಾ ಕುಳಿತಿದ್ದರು. ಸಿದ್ದಲಿಂಗಯ್ಯ ಮತ್ತು ರಾಮಚಂದ್ರ ರಾಯರನ್ನು ಒಳಗೆ ಕರೆದೊಯ್ಯಲಾಯಿತು. ಸರ್ದಾರರು ತಮ್ಮ ಮಂಚದ ಮೇಲೆ ಕುಳಿತಿದ್ದರು. ಅಲ್ಲಿ ಒಂದು ರತನ್ ಕುರ್ಚಿ ಮಾತ್ರವಿತ್ತು. ಸಿದ್ದಲಿಂಗಯ್ಯ ಪಟೇಲರ ಮಂಚದ ಮೇಲೆ ಕುಳಿತರು. ರಾಮಚಂದ್ರ ರಾವ್ ರತನ್ ಕುರ್ಚಿಯ ಮೇಲೆ ಕುಳಿತರು.

ಸರ್ದಾರ್ ಸಂತೋಷತುಂದಿಲರಾಗಿದ್ದು ಮುಖದಲ್ಲಿ ಮುಗುಳ್ನಗೆ ಸೂಸುತ್ತಿತ್ತು. ಚಹಾ ಉಪಚಾರವಾದನಂತರ ಸುಮಾರು ಹತ್ತು ನಿಮಿಷ ಕಾಲ ಕುಶಲಮಾತುಕತೆಯಾಯಿತು. ಪಟೇಲರು ಸಿದ್ದಲಿಂಗಯ್ಯನವರನ್ನು ಕುರಿತು ಕೇಳಿದರು.

ಸರ್ದಾರ್: "ನೀನು ಊರಿಗೆ ಯಾವಾಗ ಹೊರಡುವವನಿದ್ದೀಯ ?"

ಸಿದ್ದಲಿಂಗಯ್ಯ: "ನನಗಿಲ್ಲೇನೂ ಬೇರೆ ಕೆಲಸವಿಲ್ಲ. ನಿಮ್ಮ ಪುತ್ರಿ ನಿಲ್ಲಲು ಹೇಳಿದ್ದರಿಂದ ನಾನಿಲ್ಲಿ ಉಳಿದೆನಷ್ಟೆ"

ಸರ್ದಾರ್: "ಎಲ್ಲವೂ ವ್ಯವಸ್ಥೆಯಾಗಿದೆ. ನೀನಿನ್ನು ಹೊರಡಬಹುದು"

ಇಬ್ಬರೂ ಮುಂಬಯಿಗೆ ಹೊರಟು ಬಂದರು. ಮಾರನೇ ದಿನವೇ ಹೈದರಾಬಾದಿನಲ್ಲಿ ಪೊಲೀಸ್ ಕಾರ್ಯಾಚರಣೆ ಜರುಗಿದ ಸುದ್ದಿ ಜನಜನಿತವಾಗಿತ್ತು.

ಸಿದ್ದಲಿಂಗಯ್ಯನವರ ದಿಟ್ಟತನಕ್ಕೆ ಈ ಪ್ರಸಂಗ ಒಂದು ಸ್ಪಷ್ಟ ಉದಾಹರಣೆಯಾಗಿದೆ. ಇವರ ಸಹವರ್ತಿಗಳಾಗಿದ್ದ ಆರ್.ಆರ್. ದಿವಾಕರ್‌ರವರು ಹೇಳುವಂತೆ ಇತರರಿಗೆ ಸೂಚ್ಯವಾಗದ ಪರಿಣಾಮಗಳನ್ನು ಮೊದಲೇ ಅರಿಯುವ ತೀಕ್ಷ್ಣಬುದ್ಧಿ ಸಿದ್ದಲಿಂಗಯ್ಯನವರಲ್ಲಿತ್ತು.

## ಧ್ವಜ ಸತ್ಯಾಗ್ರಹದ ಬಗ್ಗೆ ಪಂಡಿತ್ ನೆಹ್ರೂ ಮತ್ತು ಮಹಾತ್ಮಾಜೀಯವರೊಂದಿಗೆ

ಸಿದ್ದಲಿಂಗಯ್ಯನವರ ಸ್ವಾತಂತ್ರ್ಯ ಸಂಗ್ರಾಮ ಎರಡು ಆಯಾಮಗಳುಳ್ಳದ್ದಾಗಿತ್ತು. ಒಂದು ಬ್ರಿಟಿಷರಿಂದ ದೇಶದ ಸ್ವಾತಂತ್ರ ಮತ್ತೊಂದು ದೇಶೀ ರಾಜರಿಂದ ಸಂಸ್ಥಾನಗಳ ಪ್ರಜೆಗಳ ಸ್ವಾತಂತ್ರ. ಇವೆರಡು ಒಂದಕ್ಕೊಂದು ಪೂರಕವೆಂಬುದನ್ನು ಸಿದ್ದಲಿಂಗಯ್ಯನವರು ಚೆನ್ನಾಗಿ ಮನಗಂಡಿದ್ದರು. ರಾಷ್ಟ್ರಧ್ವಜ ಈ ಎರಡನೇ ತೆರನ ದಾಸ್ಯಮುಕ್ತಿಗಾಗಿ ಸಾಧಿಸಬೇಕಾದ ಪ್ರಜಾ ಸ್ವಾತಂತ್ರದ ಕುರುಹಾಗಿತ್ತು. ಅಂತೆಯೇ ಮೈಸೂರು ಧ್ವಜ ಸಾಂಸ್ಥಾನಿಕ ಅರಸೊತ್ತಿಗೆಯ ಸರ್ವಾಧಿಕಾರದ ನಿಶಾನೆಯಾಗಿತ್ತು. ಮೈಸೂರು ಧ್ವಜದೊಂದಿಗೆ ತಿವರ್ಣ ಧ್ವಜವನ್ನು ಹಾರಿಸುವುದು ಅರಸರ ದೃಷ್ಟಿಯಲ್ಲಿ ಘೋರಾಪರಾಧ. ಆದರೆ, ಸರ್ಕಾರ ಸಂಸ್ಥಾನದ ಪ್ರಜೆಗಳಿಗೆ ಜವಾಬ್ದಾರಿಯುತವಾಗಿರಬೇಕೆಂಬುದು ಪ್ರಜೆಗಳ ಮೂಲಭೂತ ನಾಗರೀಕ ಹಕ್ಕಿನ ವಿಚಾರ.

ಮೈಸೂರಿನ ಶ್ರೀಮಾನ್ ಮಹಾರಾಜರು ವ್ಯಕ್ತಿಶಃ ದಯಾಳುಗಳು ಪ್ರಜಾಹಿತಪರರು. ಈ ಗುಣಗಳಿಂದಾಗಿ ಮಹಾತ್ಮಗಾಂಧೀಜಿಯವರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದರು. ಅಂತಹವರ ವಿರುದ್ಧ ಹೋರಾಟ ಏಕೆಂಬ ಪ್ರಶ್ನೆ ಅನೇಕರ ಮನಸ್ಸನ್ನು ಕಾಡಬಹುದು. ಆರ್.ಆರ್. ದಿವಾಕರರು ಗ್ರಹಿಸಿದ್ದಂತೆ ಇತರರಿಗೆ ಇದೇ ಸುಯೋಗ ಎನ್ನುವಷ್ಟು ಅಭ್ಯಾಸವಾಗಿ ಹೋಗಿದ್ದ ವ್ಯವಸ್ಥೆಯಲ್ಲಿ ದಾಸ್ಯದ ಎಳೆಗಳನ್ನು ಗುರುತಿಸಿದ ಸೂಕ್ಷ್ಮಮತಿಯಾಗಿದ್ದರು ಸಿದ್ದಲಿಂಗಯ್ಯ.

2165-6

ಮಹಾರಾಜರಿಗೂ ಪ್ರಜೆಗಳಿಗೂ ನಡುವೆ ಕಂದಕವಾಗಿ ಪರಿಣಮಿಸಬಹುದಾದ ದಿವಾನರ ಮಧ್ಯವರ್ತಿ ಆಳ್ವಿಕೆಯ ಪಿಡುಗನ್ನು ಬಹುಶಃ ಜನರು ಗ್ರಹಿಸಲಾರರು. ಸಿದ್ದಲಿಂಗಯ್ಯನವರಿಗೆ ಇದು ಮಹಾರಾಜರ ಅಥವಾ ದಿವಾನರ ವೈಯಕ್ತಿಕ ಗುಣಸ್ವಭಾವಗಳ ಪ್ರಶ್ನೆಯಾಗಿರಲಿಲ್ಲ. ಒಂದು ವ್ಯವಸ್ಥೆಯ ಪ್ರಶ್ನೆಯಾಗಿತ್ತು. ಯಾವುದೇ ಸಂದರ್ಭದಲ್ಲಿ ಸರ್ಕಾರ ಪ್ರಜಾ ಶೋಷಕವಾಗಿ ಪರಿಣಮಿಸಬಾರದೆಂಬುದು ಅವರ ಸಾಮಾಜಿಕ ಕಳಕಳಿ ಸ್ವರೂಪವಾಗಿತ್ತು.

ರಾಷ್ಟ್ರ ನಾಯಕರು ಈ ತತ್ವವನ್ನು ಒಪ್ಪುವವರಾಗಿದ್ದರು. ಆದರೆ ಸಂಸ್ಥಾನಗಳ ಮಟ್ಟದಲ್ಲಿ ದೇಶೀ ರಾಜರುಗಳ ವಿರುದ್ಧ ಹೋರಾಡಿ ಸ್ವಾತಂತ್ರ್ಯವನ್ನು ಗೆಲ್ಲುವ ಶಕ್ತಿ ಸಂಸ್ಥಾನದ ಪ್ರಜೆಗಳಿಗೆ ಇದೆ ಎಂಬ ಬಗ್ಗೆ ಅವರುಗಳಿಗೆ ಭರವಸೆ ಇರಲಿಲ್ಲ. ಸಂಘಟನೆ ಒಳಗಿನಿಂದ ಆಗಬೇಕಾಗಿದ್ದು ಇಂಥ ಹೋರಾಟಗಳನ್ನು ರಾಷ್ಟ್ರಮಟ್ಟದಲ್ಲಿ ನಿಯಂತ್ರಿಸುವುದು ಜವಾಬ್ದಾರಿಯ ಪ್ರಶ್ನೆಯಾಗಿತ್ತು. ಆದ್ದರಿಂದಲೇ ಗುಜರಾತಿನ ಹರಿಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ (ಫೆಬ್ರವರಿ 1938) ಸಂಸ್ಥಾನಗಳಲ್ಲಿ ನಡೆಯುವ ರಾಜಕೀಯ ಚಟುವಟಿಕೆಗಳಿಗೆ ರಾಷ್ಟ್ರೀಯ ಕಾಂಗ್ರೆಸಿನ ಹೆಸರನ್ನು ಉಪಯೋಗಿಸಬಾರದೆಂಬ ನಿರ್ಣಯವನ್ನು ಕೈಗೊಳ್ಳಲಾಯಿತು. ಇದು ಸಿದ್ದಲಿಂಗಯ್ಯನವರು ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಮಂಡಳಿ ವತಿಯಿಂದ ನಡೆಸಬೇಕೆಂದಿದ್ದ ಚಳುವಳಿಗೆ ಬಾಧಕವಾಗಿತ್ತು.

ಮೈಸೂರಿನಲ್ಲಿ ಇತರ ದೇಶೀಯ ಸಂಸ್ಥಾನಗಳಿಗಿಂತಲೂ ಪರಿಸ್ಥಿತಿ ಬೇರೆಯಾಗಿತ್ತು. ಸಿದ್ದಲಿಂಗಯ್ಯನವರ ನೇತೃತ್ವದಲ್ಲಿ ಇಲ್ಲಿನ ಕಾಂಗ್ರೆಸ್ ಬಲಯುತವಾಗಿ ವ್ಯವಸ್ಥೆಗೊಂಡಿತ್ತು. ಅಲ್ಲಿಯವರೆಗೆ ಕಾಂಗ್ರೆಸ್ ಚಟುವಟಿಕೆಗಳನ್ನು ಬೆಂಬಲಿಸದಿದ್ದ ಪ್ರಜಾಪಕ್ಷ ಅಕ್ಟೋಬರ್ 1937ರಲ್ಲಿ ಅಖಿಲ ಭಾರತ ಕಾಂಗ್ರೆಸಿನಲ್ಲಿ ವಿಲೀನವಾಗಿತ್ತು. ಈ ವರ್ಚಸ್ಸಿನಿಂದಾಗಿ ಪ್ರಜಾಪ್ರತಿನಿಧಿ ಸಭೆಯಲ್ಲಿ ನ್ಯಾಯ ವಿಧಾಯಕ ದಿಸೆಯಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಪ್ರಚಂಡ ಬಹುಮತ ದೊರೆತಿತ್ತು. ಸಂಸ್ಥಾನದಲ್ಲಿ ಜವಾಬ್ದಾರಿಯುತ ಸರ್ಕಾರ ಸ್ಥಾಪನೆಗೆ ಕಾಲ ಪರಿಪಕ್ವವಾಗಿತ್ತು. ಆದರೆ ಈ ಚಳುವಳಿಗೆ ಹರಿಪುರ ನಿರ್ಣಯ ವಿರೋಧವಾಗಿತ್ತು. ಪ್ರಮುಖ ರಾಷ್ಟ್ರನಾಯಕರಾದ ಮಹಾತ್ಮಗಾಂಧಿ, ಜವಾಹರಲಾಲ್ ನೆಹರು ಮತ್ತು ಸರ್ದಾರ್ ಪಟೇಲ್ ಇವರುಗಳನ್ನು ಇಂತಹ ಚಳುವಳಿಗೆ ಒಪ್ಪುವಂತೆ ಮಾಡುವ ಭಾರ ಸಿದ್ದಲಿಂಗಯ್ಯನವರ ಮೇಲೆ ಬಿದ್ದಿತು. ಈ ಸನ್ನಿವೇಶದಲ್ಲಿ ಸಿದ್ದಲಿಂಗಯ್ಯನವರ ಜವಾಹರಲಾಲರ ಜೊತೆ ಹಾಗೂ ಗಾಂಧೀಜೀಯವರ ಜೊತೆ ನಡೆಸಿದ ಸಂವಾದದ ಉದ್ಧೃತ ಭಾಗಗಳು ಇಲ್ಲಿವೆ:

. . . . .

. . . . .

"ಟಿ.ಎಸ್: ಒಳ್ಳೆಯದು, ನೆಹರೂಜಿ, ಕಾಂಗ್ರೆಸ್ಸಿನಲ್ಲಿ ಸೇರುವುದಕ್ಕೂ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕುವುದಕ್ಕೂ ಇಂದಿನವರೆಗೆ ಕಾಂಗ್ರೆಸ್ಸು ಪ್ರೋತ್ಸಾಹಿಸುತ್ತಾ ಬಂದಿದ್ದು ಈಗೇಕೆ ಅವರ ಕೈ ಬಿಡುತ್ತಿದೆ ?

**ಪಂ. ನೆಹರು:** ಕಾಂಗ್ರೆಸ್ಸಿನ ಎದುರು ಬಂದಿರುವ ನಿರ್ಣಯದ ಸಂಪೂರ್ಣ ಹೊಣೆಯು ನನ್ನದು. ಅದಕ್ಕಾಗಿ ನಾನು ದಿನಗಳನ್ನೂ ರಾತ್ರಿಗಳನ್ನೂ ವಿಚಾರ

ಮಾಡುತ್ತಾ ಕಳೆದಿದ್ದೇನೆ. ಈ ನಿರ್ಣಯದಿಂದ ಎಲ್ಲ ದೇಶೀಯ ರಾಜ್ಯಗಳ ಸಂಸ್ಥೆಗಳು ಬಲಗೊಂಡು ಚೈತನ್ಯ ಹೊಂದುವಂತಾಗುವುದು.

ಟಿ.ಎಸ್: ಈ ನಿರ್ಣಯಕ್ಕೆ ಸರ್ದಾರ್ ಪಟೇಲರೇ ಜವಾಬ್ದಾರರೆಂದು ನನ್ನ ಭಾವನೆ ಇದೆ.

ಪಂ. ನೆಹರು: ಕಾಂಗ್ರೆಸ್ಸಿನಲ್ಲಿ ಸರ್ದಾರರು ಅತ್ಯಂತ ವರ್ಚಸ್ವಿಯಾಗಿದ್ದು ಅತ್ಯಧಿಕ ಬಲ ಸಂಪನ್ನರಾಗಿದ್ದಾರೆಂಬುದನ್ನು ನೀವು ಅರಿತುಕೊಳ್ಳಬೇಕು.

ಟಿ.ಎಸ್: ಕಾಂಗ್ರೆಸ್ಸಿಗರಾದ ನಮ್ಮ ವಿಷಯದಲ್ಲಿ ನಮ್ಮ ದಿವಾನರಾದ ಸರ್ ಮಿರ್ಜಾರವರು ಏನೆಂದು ಭಾವಿಸಿಯಾರು ?

ಪಂ. ನೆಹರು: ದಿವಾನ್ ಮಿರ್ಜಾರವರು ಸದಾ ನಿಮ್ಮ ಮೆದುಳಿನಲ್ಲಿ ತುಂಬಿಕೊಂಡಿರುವರೆಂಬುದು ನನಗೆ ಗೊತ್ತು."

ಇಲ್ಲಿಂದ ಮುಂದೆ ಸಂವಾದವನ್ನು ಮುಂದುವರೆಸಲು ಜವಾಹರಲಾಲರು ಇಚ್ಛಿಸಲಿಲ್ಲ. ಆದರೆ ಮೈಸೂರು ಸಂಸ್ಥಾನದ ಪ್ರತಿನಿಧಿಗಳ ಪ್ರಯತ್ನ ಅಲ್ಲಿಗೇ ನಿಲ್ಲಲಿಲ್ಲ. ಈ ಮಧ್ಯೆ ಹರಿಪುರದ ನಿರ್ಣಯ ಏರ್ಪಡುತ್ತಲೇ ಮೈಸೂರು ದಿವಾನರು ರಾಜಕೀಯ ಸುಧಾರಣಾ ಸಮಿತಿಯೊಂದನ್ನು ನೇಮಿಸಿದ್ದರು. ಇದರಲ್ಲಿ ಭಾಗವಹಿಸಲು ಕಾಂಗ್ರೆಸ್ ಸದಸ್ಯರಿಗಿದ್ದ ಆತಂಕಗಳು ದಿವಾನರಿಗೆ ತಿಳಿದಿದ್ದವು. ಇದೇ ಅವರ ರಾಜನೀತಿ ಕೌಶಲವಾಗಿತ್ತು. ಸಿದ್ದಲಿಂಗಯ್ಯನವರು 1938ರ ಮಾರ್ಚ್ 22ರಂದು ಗಾಂಧೀಜೀಯವರನ್ನು ಭೇಟಿ ಮಾಡಿದಾಗಿನ ಸಂವಾದ ಹೀಗಿದೆ:

. . . . .

. . . . .

"ಮ. ಗಾಂಧಿ: ಮೈಸೂರು ಕಾಂಗ್ರೆಸ್ ಹೆಸರಿಗೆ ಅಭ್ಯಂತರವಿಲ್ಲ. ಆದರೆ ದ್ವಿಸದಸ್ಯತ್ವದ ಷರತ್ತು ಸರಿಯಲ್ಲ. ಅದರಿಂದ ಅಖಿಲ ಭಾರತ ಕಾಂಗ್ರೆಸ್ ಮೈಸೂರು ವ್ಯವಹಾರದಲ್ಲಿ ಅಪಮಾರ್ಗದಲ್ಲಿ ಪ್ರವೇಶ ಮೂಡಿಸಿದಂತಾಗುತ್ತದೆ. ಹರಿಪುರದಲ್ಲಾದ ನಿರ್ಣಯಕ್ಕೆ ಈ ಷರತ್ತು ವಿರೋಧವಾಗುತ್ತದೆ."

ಹೀಗೆ ಹೇಳಿ ಶ್ರೀ ಸಿದ್ದಲಿಂಗಯ್ಯನವರ ಕಡೆಗೆ ಹೊರಳಿ,

"ಮ. ಗಾಂಧಿ: ಒಳ್ಳೆಯದು. ಒಂದು ಹೋರಾಟಕ್ಕೆ ಮೈಸೂರಿನಲ್ಲಿ ನಿಮ್ಮ ಬಲವೆಷ್ಟು ?

ಟಿ.ಎಸ್: ನಾವು ಸಭೆಗಳನ್ನು ನಡೆಸಿದಾಗ ಸಹಸ್ರಾರು ಜನರು ನಮ್ಮ ಭಾಷಣ ಕೇಳಲು ಬರುತ್ತಾರೆ ಮತ್ತು ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಸಹಸ್ರಾರು ಜನರು ಸತ್ಯಾಗ್ರಹಕ್ಕೆ ಸಿದ್ಧರಿದ್ದಾರೆ. ಜೈಲಿಗೆ ಹೋಗಲು ತಯಾರಿದ್ದಾರೆ.

ಮ. ಗಾಂಧಿ: ಸುಮ್ಮನೆ ಜನರು ಗುಂಪು ಕೂಡಿದರೆ ಏನೂ ಆಗದು. ಹರಿಪುರದ ಅ.ಭಾ. ಕಾಂಗ್ರೆಸ್ ಅಧಿವೇಶನ ನೋಡುವುದಕ್ಕೂ ಮುಖಂಡರ ಭಾಷಣ ಕೇಳುವುದಕ್ಕೂ ಅನೇಕ ಲಕ್ಷ ಜನ ಸೇರುತ್ತಿದ್ದರು. ಆದರೆ ಕೆಲವೇ ಜನ ಪೋಲೀಸರು

ಲಾಠಿ ಸಮೇತ ಬಂದು ಚದುರಿಸಲು ಶುರು ಮಾಡಿದರೆ ಅವರೆಲ್ಲ ಅಲ್ಲಿ ನಿಲ್ಲುತ್ತಿದ್ದರೇನು ?

ಟಿ.ಎಸ್: ಆದರೆ ಬಾಪೂಜಿ, ಮೈಸೂರಿನಲ್ಲಿ ಒಂದು ಚಳುವಳಿ ಯಶಸ್ವಿಯಾಗಿ ನಡೆಸಲು ನಮಗೆ ಸಾಕಷ್ಟು ಶಕ್ತಿ ಇದೆ.

ಮ. ಗಾಂಧಿ: ಮಹಾರಾಜರನ್ನು ಉರುಳಿಸಲಿಕ್ಕೂ ದಿವಾನರನ್ನು ವಜಾ ಮಾಡುವುದಕ್ಕೂ ನಿಮಗೆ ಶಕ್ತಿ ಸಾಕಷ್ಟಿದೆಯಲ್ಲವೆ ?" ಎಂದು ಹಗುರಾಗಿ ಕೇಳಿದರು.

ಈ ಪ್ರಶ್ನೆ ಕೇಳಿದಕೂಡಲೇ ಸರ್ದಾರ ಪಟೇಲ, ಆಚಾರ್ಯ ಕೃಪಲಾನಿ, ಮಹದೇವ ದೇಸಾಯಿ ಮತ್ತು ಬಾಬು ರಾಜೇಂದ್ರ ಪ್ರಸಾದರು ಗಟ್ಟಿಯಾಗಿ ನಕ್ಕುಬಿಟ್ಟರು, ಶ್ರೀ ಸಿದ್ದಲಿಂಗಯ್ಯನವರಿಗೆ ಈ ಪ್ರಶ್ನೆಯಲ್ಲಿಯ ಧ್ವನಿ ಲಕ್ಷ್ಯಕ್ಕೆ ಬರಲಿಲ್ಲ. ಹೋರಾಟದ ವಿನಃ ಜವಾಬ್ದಾರಿ ಸರ್ಕಾರ ದೊರಕುವುದು ಸಾಧ್ಯವಿಲ್ಲವೆಂಬ ದೃಢ ನಿರ್ಧಾರಕ್ಕೆ ಅವರು ಬಂದುಬಿಟ್ಟಿದ್ದರಿಂದ ಅವರು ಈ ಪ್ರಶ್ನೆಗೆ ಗಂಭೀರವಾಗಿಯೇ ಕೆಳಗಿನಂತೆ ಉತ್ತರಿಸಿದರು.

ಟಿ.ಎಸ್: ನಿಜ ಬಾಪೂಜಿ, ಮಹಾರಾಜರನ್ನು ಇಳಿಸಲಿಕ್ಕೂ ದಿವಾನರನ್ನು ವಜಾ ಮಾಡಲಿಕ್ಕೂ ಸಾಕಷ್ಟು ಶಕ್ತಿ ಇದೆ.

ಮಹಾತ್ಮಾಗಾಂಧಿಯವರ ಈ ಹಾಸ್ಯದ ಮಾತನ್ನು ಸಿದ್ದಲಿಂಗಯ್ಯನವರು ಗಂಭೀರವಾಗಿ ಪರಿಗಣಿಸಿದರು. ಹಾಗಾಗಿ ಅವರು ಗಾಂಧೀಜೀಯವರ ಪ್ರಶ್ನೆಗೆ ಉತ್ತರವಾಗಿ:

"ನಿಜ ಬಾಪೂಜಿ, ಮಹಾರಾಜರನ್ನು ಇಳಿಸಲಿಕ್ಕೂ, ದಿವಾರನ್ನು ವಜಾ ಮಾಡಲಿಕ್ಕೂ ಸಾಕಷ್ಟು ಶಕ್ತಿ ಇದೆ" ಎಂದು ದಾಷ್ಟ್ರ್ಯದಿಂದ ಹೇಳಿದರು. ಗಾಂಧೀಜಿಯವರು "ಮೈಸೂರಿನಲ್ಲಿ ನಿಮ್ಮ ಸಹಕಾರವು ಅವಶ್ಯವೆಂದೂ ಅತಿಮೌಲ್ಯವೆಂದೂ ಸರ್ಕಾರವು ಕೂಡ ಭಾವಿಸುವಂತಾಗಬೇಕು. ಸರ್ಕಾರವು ನಿಮ್ಮ ಸಹಾಯ ಸಹಕಾರಗಳಿಲ್ಲದೆ ಏಕಾಕಿಯಾಗಿ ಏನನ್ನೂ ಮಾಡಲು ಸಾಧ್ಯವಿಲ್ಲವೆಂಬುದನ್ನು ನಿಮ್ಮ ಕಾರ್ಯದಿಂದ ನೀವು ತೋರಿಸಬೇಕು. ನಿಮ್ಮ ಸಹಕಾರ ಅಪರಿಹಾರ್ಯವೆಂದು ಸರಕಾರಕ್ಕೆ ಮನದಟ್ಟು ಮಾಡಿಕೊಡಿರಿ" ಎಂದು ಹಿತೋಪದೇಶ ಮಾಡಿ ಕಳುಹಿಸಿಕೊಟ್ಟರು. ಸಿದ್ದಲಿಂಗಯ್ಯ ಮಹಾತ್ಮಾಜೀಯವರ ಅಭಿಪ್ರಾಯವನ್ನು ಒಪ್ಪದೇ ಅವರ ಸಹವರ್ತಿಗಳೊಂದಿಗೆ ಮಹಾರಾಜರನ್ನು ಅರಸೊತ್ತಿಗೆಯಿಂದ ಕೆಳಗಿಳಿಸಿ ದಿವಾನರನ್ನು ವಜಾ ಮಾಡುವ ಮೂಲಕವೇ ತಮ್ಮ ಕಾರ್ಯ ಸಾಧ್ಯವೆಂದು ವಾದಿಸಿದ್ದರು.

ಇದಾದನಂತರ ಮಹಾತ್ಮಾಜೀಯವರ ಸಲಹೆಯಂತೆ ಮೈಸೂರು ಚಳುವಳಿ ಉದ್ದೇಶಕ್ಕಾಗಿಯೇ 'ಮೈಸೂರು ಕಾಂಗ್ರೆಸ್' ಸ್ಥಾಪಿತವಾಯಿತು. 11.4.1937ಕ್ಕೆ ಶಿವಪುರದಲ್ಲಿ ಧ್ವಜ ಸತ್ಯಾಗ್ರಹ ಪ್ರಾರಭಗೊಂಡು ತತ್ಪರಿಣಾಮವಾಗಿ ಕಾಂಗ್ರೆಸ್ ನಾಯಕರೆಲ್ಲರೂ ಶಾಂತಿಯುತ ಸತ್ಯಾಗ್ರಹ ಮಾಡಿ ದಸ್ತಗಿರಿಯಾದರು. ಅಲ್ಲಿಂದ ಮುಂದೆ ಸಂಸ್ಥಾನಗಳಲ್ಲಿ ನಡೆಯುವ ಧ್ವಜ ಸತ್ಯಾಗ್ರಹಗಳಲ್ಲಿ ಮೈಸೂರು ಧ್ವಜ ಮತ್ತು ಸ್ವಾತಂತ್ರ್ಯ ಧ್ವಜ ಎರಡನ್ನೂ ಹಾರಿಸುವ ಮೂಲಕವೇ ಸದ್ಭಾವನೆಗಳನ್ನುಳಿಸಿಕೊಳ್ಳುವ ವಿಚಾರಗಳು ನಡೆದು ಈ ನಿರ್ಣಯಗಳನ್ನು ಹೊತ್ತ ಗಾಂಧೀ ಸಂದೇಶಪತ್ರವನ್ನು ಭೂಪಾಳಂ ಚಂದ್ರಶೇಖರ್‌ರವರು ಜೈಲಿನಲ್ಲಿದ್ದ ಸಿದ್ದಲಿಂಗಯ್ಯನವರಿಗೆ ತಲುಪಿಸುವುದಿತ್ತು. ಅಷ್ಟರಲ್ಲಿ ವಿದುರಾಶ್ವತ್ಥದ ದುರಂತ ನಡೆದುಹೋಗಿ ಈ ಸಂದೇಶ

ಭೂಪಾಲಂರವರ ಬಳಿಯಲ್ಲಿಯೇ ಉಳಿದುಹೋಯಿತು. ಆನಂತರ ಭೂಪಾಲಂ ಮಹಾತ್ಮಾಜೀಯವರನ್ನು ಭೇಟಿ ಮಾಡಿ ಆ ಪತ್ರದ ಬಗ್ಗೆ ಕೇಳಿದಾಗ ಮಹಾತ್ಮಾರವರು ಹೇಳಿದ್ದು "ಇನ್ನು ಇದರ ಅವಶ್ಯಕತೆ ಇಲ್ಲ" ಸಂಸ್ಥಾನದ ಪ್ರಜಾಶಕ್ತಿಯ ಪುರಾವೆ ಗಾಂಧೀಜಿಯವರಿಗೆ ವಿದುರಾಶ್ವತ್ಥದ ಘಟನೆಯಿಂದ ದೊರೆತಿರಲಿಕ್ಕೆ ಸಾಕು. ಸಿದ್ದಲಿಂಗಯ್ಯ ಮೈಸೂರು ಸಂಸ್ಥಾನದ ಪ್ರಜೆಗಳಲ್ಲಿದೆ ಎಂದು ಮಹಾತ್ಮಾಜಿಯವರಿಗೆ ತೋರಿಸಬೇಕೆಂದಿದ್ದ ಜನ ಶಕ್ತಿ ವಿದುರಾಶ್ವತ್ಥದಲ್ಲಿ ಪ್ರದರ್ಶನಗೊಂಡಿತ್ತು. ಇದಾದ ನಂತರದ ಬದಲಾವಣೆಗಳಲ್ಲಿ ಮೈಸೂರು ಧ್ವಜದ ಮಧ್ಯಸ್ಥಿಕೆ ಇಲ್ಲದೆ ಮೈಸೂರಿನಲ್ಲಿ ಸಿದ್ದಲಿಂಗಯ್ಯನವರ ಯೋಜನೆಯು ಗತಿಯಲ್ಲಿ ತಾತ್ವಿಕವಾಗಿ ಜವಾಬ್ದಾರಿಯುತ ಸರ್ಕಾರ ಏರ್ಪಟ್ಟಿತ್ತು. ಕಾಂಗ್ರೆಸಿನ ಸಹಕಾರವಿಲ್ಲದೆ ಸರ್ಕಾರ ನಡೆಸುವುದು ಸಾಧ್ಯವಿಲ್ಲವೆಂಬುದನ್ನು (ಮಹಾತ್ಮಾಗಾಂಧೀಜಿಯವರ ಹಿತೋಪದೇಶ) ಕಾಂಗ್ರೆಸ್ ಈಗಾಗಲೇ ಅರಮನೆಗೆ ತೋರಿಸಿಕೊಟ್ಟಿತು. ಈ ಪ್ರಸಂಗ ಸಿದ್ದಲಿಂಗಯ್ಯನವರ ದಿಟ್ಟತನಕ್ಕೂ ಸಾಮರ್ಥ್ಯಕ್ಕೂ ದೃಢ ನಿಷ್ಠೆಗೂ ಹಿಡಿದ ಕನ್ನಡಿಯಾಗಿದೆ. ಸಿದ್ದಲಿಂಗಯ್ಯನವರ ಈ ಛಲವಾದ ದಿವಾನ್ ಮಿರ್ಜಾರವರ ಪೂರ್ವಾಗ್ರಹ ಪೀಡಿತ ದೃಷ್ಟಿಗೆ ಅತಿವಾದ (extremism) ಎನಿಸಿದ್ದರೆ ಆಶ್ಚರ್ಯಪಡಬೇಕಾಗಿಲ್ಲವಷ್ಟೆ.

### ಭಾರತೀಯ ಮುಸ್ಲಿಮರು – ಟಿ.ಎಸ್. ಅಭಿಮತ

ಭಾರತದ ಮುಸ್ಲಿಮರ ಬಗ್ಗೆ ಸಿದ್ದಲಿಂಗಯ್ಯನವರಿಗೆ ಅಪಾರ ನಂಬಿಕೆ ಒಲವು ಇತ್ತು. ಅವರ ಸಮಸ್ಯೆಗಳ ಬಗ್ಗೆ ಕಳಕಳಿಯಿತ್ತು. ಪಾಕಿಸ್ತಾನದ ವಿಭಜನೆಯಾದ ನಂತರ ತಮ್ಮ ಸ್ವಯಿಚ್ಛೆಯಿಂದ ಭಾರತದಲ್ಲಿ ಉಳಿದುಕೊಂಡ ಮುಸ್ಲಿಮರು ಪ್ರತ್ಯೇಕತೆ ಮತ್ತು ದ್ವೈ - ರಾಷ್ಟ್ರಮನೋಭಾವಗಳನ್ನು ಬಿಟ್ಟು ಹೆಚ್ಚು ಮಂದಿ ಮುಸ್ಲಿಮರು ಅಭಿಮಾನಪೂರ್ವಕವಾಗಿ ಇಲ್ಲಿನ ಪ್ರಜೆಗಳಾದರೆಂದು ಸಿದ್ದಲಿಂಗಯ್ಯನವರು ಅಭಿಪ್ರಾಯಪಟ್ಟಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಮುಸ್ಲಿಂ ಕಾಂಗ್ರೆಸ್ಸಿಗರು ತಮ್ಮವರೇ ಆದ ಮುಸ್ಲಿಂ ಜಾತಿವಾದಿಗಳನ್ನು ಎದುರಿಸಿ ನಮ್ಮೊಡನೆ ನಾಡಿಗಾಗಿ ಶ್ರಮಿಸಿದ ತ್ಯಾಗ ಸೇವಾ ಮನೋಭಾವ ಅತ್ಯುತ್ತಮ ಮಟ್ಟದ್ದೆಂದು ಸ್ಮರಿಸಿದ್ದಾರೆ. ಅಂತಹವರು ತಮಗಾದ ಎಲ್ಲ ಅವಹೇಳನಗಳನ್ನು ತೊಂದರೆಗಳನ್ನು ಸಹಿಸಿಕೊಂಡು ಪರಕೀಯರೊಡನೆ ಕಾದಾಡುವಲ್ಲಿ ನಮ್ಮೊಳಗೊಂದಾಗಿದ್ದುದನ್ನು ನೆನೆಯುತ್ತ ಮುಂದಿನ ರಾಜಕೀಯ ಬೆಳವಣಿಗೆಗಳು ಇಂತಹ ಸುಮಧುರ ಅನುಬಂಧಗಳನ್ನು ಉಳಿಸಿ ಬೆಳೆಸುವಲ್ಲಿ ಸಹಕಾರಿಯಾಗಲಿಲ್ಲವೆಂದು ಮರುಗಿದ್ದಾರೆ. ಈ ಸಂಬಂಧದಲ್ಲಿ ಅವರು ಸಾರ್ಜೆಂಟರುಗಳಾದ ಅಜರ್ ಆಲಿ, ಎಸ್.ಕೆ. ಕರೀಂಖಾನ್, ಓ.ಜಡ್. ಷರೀಫ್ ಮತ್ತು ಹುಸೇನ್ ಇವರುಗಳ ಬಗ್ಗೆ ವಿಶೇಷ ಗೌರವ ತೋರಿದ್ದಾರೆ.

ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ತೊಡಗಿ ಇವರೊಂದಿಗೆ ಜೈಲಿನಲ್ಲಿದ್ದ ಶ್ರೀ ಅಜರ್ ಆಲಿ ಅವರು ಸಿದ್ದಲಿಂಗಯ್ಯನವರ ಪರಮ ಗುಣಗಳನ್ನು, ಅದರಲ್ಲೂ ಜಾತಿ ಭೇದಗಳನ್ನು ಮೀರಿದ ಅವರ ಭಾತೃತ್ವ ಧೋರಣೆಗಳನ್ನು, ಮೆಚ್ಚಿಕೊಂಡಿದ್ದಾರೆ. 1958-59ರಲ್ಲಿ ದೊಡ್ಡಬಳ್ಳಾಪುರದಲ್ಲಿ ಹಿಂದು ಮುಸ್ಲಿಂ ಘರ್ಷಣೆಗಳಾದ ಸಮಯದಲ್ಲಿ ಸಿದ್ದಲಿಂಗಯ್ಯನವರು ತಮ್ಮ ಪ್ರಾಮಾಣಿಕ ವ್ಯಕ್ತಿತ್ವದ ಬಲದಿಂದ ಈ ಘರ್ಷಣೆಗಳನ್ನು ನಿವಾರಿಸಿದುದನ್ನು ಅಜರ್

ಆಲಿ ಹೀಗೆ ನೆನಸಿಕೊಳ್ಳುತ್ತಾರೆ. "ಸಿದ್ದಲಿಂಗಯ್ಯ ದೊಡ್ಡಬಳ್ಳಾಪುರದವರೇ ಆದುದರಿಂದ ಈ ಉದ್ರಿಕ್ತ ಭಾವನೆಗಳನ್ನು ಶಮನಗೊಳಿಸುವ ಭಾರ ಅವರ ಮೇಲೆ ಅಧಿಕವಾಗಿತ್ತು. ನನ್ನನ್ನು ಅವರೊಂದಿಗೆ ಕಾರಿನಲ್ಲಿ ಕರೆದುಕೊಂಡು ಬೆಂಗಳೂರಿನ ವಿಜಯ ಕಾಲೇಜು ಬಳಿ ಇದ್ದ ಕನ್ನಡ ವಾಗ್ಮಿ ಖಾಸಿಂ ಸಾಬ್ ರವರ ಮನೆಯನ್ನು ತೋರಿಸುವಂತೆ ಕೇಳಿದರು. ಅವರು ಅಲ್ಲಿಳಿದು ಖಾಸಿಂ ಸಾಬ್‌ರ ಬಳಿ ಸ್ವಲ್ಪ ಹೊತ್ತು ಏನೋ ಮಾತಾಡಿದರು. ನಂತರ ಖಾಸಿಂ ಸಾಬ್ ಅವರೊಡನೆ ದೊಡ್ಡಬಳ್ಳಾಪುರಕ್ಕೆ ಬರಲು ಒಪ್ಪಿ ಎಲ್ಲರೂ ಹೊರಟೆವು. ದೊಡ್ಡಬಳ್ಳಾಪುರದಲ್ಲಿ ಅಲ್ಲಲ್ಲಿ ಐದು ಹತ್ತು ಜನರ ಗುಂಪುಗಳು ಗುಸುಗುಸು ಮಾಡುತ್ತಿದ್ದ ಬಿಗುವಿನ ವಾತಾವರಣವಿತ್ತು. ಸಿದ್ದಲಿಂಗಯ್ಯನವರನ್ನು ಮಾತಿಗೆ ಎಳೆಯಲು ಪ್ರಯತ್ನಿಸುತ್ತಿದ್ದ ಕೆಲವರಿಗೆ ಅವರು "ರಾತ್ರಿ ಸಾರ್ವಜನಿಕ ಸಭೆಯಾದ ನಂತರ ನಾವು ಮತ್ತೆ ಸೇರೋಣ" ಎಂದಷ್ಟೇ ಹೇಳಿದರು.

"ಸಂಜೆ ನಡೆದ ಸಭೆಗೆ ಸಿದ್ದಲಿಂಗಯ್ಯ ನನಗೆ ಖಾಸಿಂ ಸಾಬರನ್ನು ಪರಿಚಯಿಸಿದರು. ಸಭೆಯನ್ನು ಉದ್ದೇಶಿಸಿ "ಶ್ರೀ ಖಾಸಿಂ ಸಾಬ್ ನಮ್ಮ ಅತಿಥಿಯಾಗಿ ಇಲ್ಲಿಗೆ ಬಂದಿದ್ದಾರೆ. ದಯಮಾಡಿ ಅವರ ಮಾತುಗಳನ್ನು ಕೇಳಿ" ಎಂದು ವಿನಂತಿಸಿಕೊಂಡರು. ಖಾಸಿಂ ಸಾಬ್ ಮಾತನಾಡಲು ಎದ್ದುನಿಂತಾಗ ಸಭಿಕರಲ್ಲಿ ಕೆಲವರು 'ಏ ಸಾಬಿ, ಕುಳಿತುಕೊ' ಎಂದು ಕೂಗಿದರು. ಅದಕ್ಕೆ ಖಾಸಿಂ ಸಾಬ್ 'ನಾನು ಮಾತನಾಡಿದನಂತರ ಕುಳಿತುಕೊಳ್ಳುತ್ತೇನೆ' ಎಂದು ಹಾಸ್ಯಮಯವಾಗಿ ಹೇಳಿದಾಗ ಸಭೆಯಲ್ಲಿ ನಗು. ನಂತರ ಸುಮಾರು ಒಂದೂವರೆ ಗಂಟೆಕಾಲ ಖಾಸಿಂ ಸಾಬ್ ಮಾತನಾಡಿದರು. ಅಷ್ಟುಕಾಲವೂ ಸಭೆ ಸೂಜಿಯ ಶಬ್ದವೂ ಕೇಳುವಷ್ಟು ಮೌನವಾಗಿತ್ತು. ಭಾಷಣ ಮುಗಿದನಂತರ ಸಭಿಕರನೇಕರು ಖಾಸಿಂ ಸಾಬರ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದರು. ಕೈ ಕುಲುಕಿ ತಮ್ಮ ಗೌರವಾಭಿಮಾನಗಳನ್ನು ಸೂಚಿಸಿದರು. ಕೆಲವರ ಕೈ ಜೋಡಿಸಿ 'ನೀನು ದೇವತಾ ಪುರುಷ' ಎಂದೆಲ್ಲ ಕೊಂಡಾಡಿ ಆಗಿನಿಂದಲೇ ಆ ಊರಿನಲ್ಲಿ ಶಾಂತಿ ಸೌಹಾರ್ದ ಏರ್ಪಡುವ ಭರವಸೆಯನ್ನು ಕೊಟ್ಟರು. ಹೀಗೆ ಸಂಘರ್ಷದ ಹಾದಿಯಲ್ಲಿದ್ದ ಎರಡು ಜನಾಂಗವನ್ನು ಸಿದ್ದಲಿಂಗಯ್ಯನವರು ತಮ್ಮ ಧೀಮಂತಿಕೆಯಿಂದ ಒಂದುಗೂಡಿಸಿದರು."

ಈ ಘಟನೆ ಸಿದ್ದಲಿಂಗಯ್ಯನವರ ಜಾತ್ಯಾತೀತ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಸಿದ್ದಲಿಂಗಯ್ಯನವರಂತೆ ಪ್ರಾಮಾಣಿಕ ಭಾವನೆಗಳುಳ್ಳವರು ಕಾಂಗ್ರೆಸಿಗರಲ್ಲಿ ಅತಿ ವಿರಳವೆಂದು ಅಜರ್ ಆಲಿ ಸ್ಮರಿಸಿದ್ದಾರೆ. ಕನ್ನಡದ ಪ್ರಪ್ರಥಮ ಮುಸ್ಲಿಂ ಸಾಹಿತಿ ಶ್ರೀ ಎಸ್.ಕೆ. ಕರೀಂಖಾನ್ ರವರು ಸಿದ್ದಲಿಂಗಯ್ಯನವರ ಆಪ್ತೇಷ್ಟರಲ್ಲಿ ಒಬ್ಬರಾಗಿದ್ದಾರೆ. ಕಾಂಗ್ರೆಸ್ ಚಳುವಳಿ ಕಾಲದಲ್ಲಿ ಶ್ರೀ ಕರೀಂಖಾನ್ ರವರು ಸಿದ್ದಲಿಂಗಯ್ಯನವರ ಜೊತೆಗಿದ್ದು ಕಾಂಗ್ರೆಸ್ ಸಭೆಗಳಲ್ಲಿ ರಾಷ್ಟ್ರೀಯ ಭಾವನೆಗಳನ್ನು ಜನರಲ್ಲಿ ತುಂಬುವ ಲಾವಣಿಗಳನ್ನು ರಚಿಸಿ ಹಾಡಿ ಜನಮನವನ್ನು ಗೆದ್ದುದನ್ನು ಸಿದ್ದಲಿಂಗಯ್ಯನವರು ನೆನಪಿಸಿಕೊಂಡಿದ್ದಾರೆ.

### ರಾಜಕೀಯ ಶಿಷ್ಟಾಚಾರ - ಟಿ.ಎಸ್. ನೀತಿ

ಸಿದ್ದಲಿಂಗಯ್ಯನವರ ಅತ್ಯಧಿಕ ಮೇರು ಗುಣವಾದ ಪ್ರಾಮಾಣಿಕತೆ, ಸಮಕಾಲೀನ ರಾಜಕಾರಣದಲ್ಲಿ ಅವರ ದುರ್ಬಲತೆಯಂತೆ ಕಾಣಬಂದಿದ್ದರೆ ಆಶ್ಚರ್ಯವಿಲ್ಲ. ಸಿದ್ದಲಿಂಗಯ್ಯನವರನ್ನು ನಾಡ ಸೇವೆಗೆ ಸಮರ್ಪಿಸಿದ ಅವರ ಅಣ್ಣ ತಮ್ಮಂದಿರು ಕುಟುಂಬದ

ಜವಾಬ್ದಾರಿಗಳನ್ನು ತಾವು ನಿರ್ವಹಿಸಿಕೊಳ್ಳುವ ಭರವಸೆ ಇತ್ತು ರಾಜಕೀಯದಲ್ಲಿ ತನಗಾಗಲಿ ತಮ್ಮ ಕುಟುಂಬಕ್ಕಾಗಲಿ ಯಾವುದೇ ರೀತಿಯ ಸ್ವಲಾಭ ಪಡೆದುಕೊಳ್ಳಬಾರದೆಂಬ ಸಂಕಲ್ಪವನ್ನು ಸಿದ್ದಲಿಂಗಯ್ಯನವರಿಗೆ ಭೋಧಿಸಿದ್ದರು. ಕೊನೆಯವರೆಗೂ ಶ್ರೀಯುತರು ಅದನ್ನು ಕಾಯಾ, ವಾಚಾ, ಮನಸಾ ಪಾಲಿಸಿಕೊಂಡು ಬಂದರು.

ಶ್ರೀಯುತರು ಸಚಿವರಾಗಿದ್ದಾಗ ತನ್ನೂರಿಗೆ ಬರಬೇಕಾದ ಸಂದರ್ಭಗಳಲ್ಲಿ ಸಾಧಾರಣ ಮನುಷ್ಯರಂತೆ ಸುದ್ದಿ - ಆಡಂಬರವಿಲ್ಲದೆ ಬಂದು ಹೋಗುತ್ತಿದ್ದುದನ್ನು ಶ್ರೀ ಕೇಶವ ಅಯ್ಯಂಗಾರ್ ನೆನೆಯುತ್ತಾರೆ. ನಮ್ಮ ನಾಡಿನ ಸಚಿವರಲ್ಲಿ ಬ್ರಿಟಿಷರಂತೆ ಕೃತ್ರಿಮ ನಡವಳಿಗಳಲ್ಲಿ ತೊಡಗಿ ಆಡಂಬರ ಮತ್ತು ದುಂದುಗಾರಿಕೆಯಲ್ಲಿ ಮೆರೆಯುವ ಪ್ರವೃತ್ತಿ ಬೆಳೆಯುತ್ತಿರುವುದನ್ನು ಸಿದ್ದಲಿಂಗಯ್ಯನವರು ಖಂಡಿಸುತ್ತಾರೆ. ತಮ್ಮ ಸಚಿವ ಪದವಿ ಮುಗಿಯುವುದರೊಳಗೆ ದಿಢೀರ್ ಶ್ರೀಮಂತರಾಗಿ ಪರಿವರ್ತಿತರಾಗುವುದನ್ನು ನಾಚಿಕೆಗೇಡಿನ ಕೆಲಸವೆಂದಿದ್ದಾರೆ. ಅವರ ದೃಷ್ಟಿಯಲ್ಲಿ ಸಾರ್ವಜನಿಕ ಜೀವನದಲ್ಲಿನ ಭ್ರಷ್ಟಾಚಾರಕ್ಕೆ ರಾಜಕಾರಣಿಗಳಷ್ಟೇ ಸರ್ಕಾರಿ ಅಧಿಕಾರಿಗಳು ಕಾರಣರಲ್ಲ. ಸಚಿವರುಗಳು ನಾಯಕರು ತಾವು ಪ್ರಾಮಾಣಿಕರಾಗಿದ್ದರೆ ಇತರರು ಅವರನ್ನು ಅನುಕರಿಸುತ್ತಾರೆಂಬುದು ಅವರ ಅಭಿಮತ.

1954ರಲ್ಲಿ ಸಿದ್ದಲಿಂಗಯ್ಯ ಮೈಸೂರಿನ ಪ್ರತಿನಿಧಿಯಾಗಿ ಕೆನಡಾದಲ್ಲಿ ನಡೆದ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸಿದ್ದರಷ್ಟೆ. ಈ ಪ್ರವಾಸದ ಖರ್ಚು ವೆಚ್ಚಗಳು ಸಾಧಾರಣವಾಗಿ ಒಬ್ಬರಿಗೆ ಹನ್ನೆರಡು ಸಾವಿರ ರೂಪಾಯಿಗಳಷ್ಟು ಬರುತ್ತಿತ್ತು. ಆದರೆ ಸಿದ್ದಲಿಂಗಯ್ಯ ತಮಗೆ ಪ್ರವಾಸದ ಮುಂಗಡವಾಗಿ ನೀಡಿದ್ದ ಕೇವಲ ಏಳು ಸಾವಿರ ರೂಪಾಯಿಗಳಲ್ಲಿ ತಮ್ಮ ಎಲ್ಲ ಖರ್ಚು ವೆಚ್ಚಗಳನ್ನು ಸಾವರಿಸಿ ಸರ್ಕಾರಕ್ಕೆ ಐದುಸಾವಿರ ರೂಪಾಯಿಗಳಷ್ಟು ಉಳಿತಾಯ ಮಾಡಿಕೊಟ್ಟರು. ಮುಂಗಡ ಪಡೆದಾಗಲೇ ಅವರು ಅಷ್ಟೇ ಹಣದಲ್ಲಿ ತಮ್ಮ ಪ್ರವಾಸ ಪೂರೈಸುವ ಸಂಕಲ್ಪ ಕೈಗೊಂಡಿದ್ದರಂತೆ.

ಇವರು ಸಚಿವರಿಗೆ ಸಲ್ಲುವ ಮನೆ ಬಾಡಿಗೆ ನೊತ್ತವನ್ನು ಸರ್ಕಾರದಿಂದ ಪಡೆದುಕೊಳ್ಳಲಿಲ್ಲ. ನಮ್ಮಂತಹ ಬಡ ದೇಶದಲ್ಲಿ ಆರ್ಥಿಕ ಒತ್ತಡಕ್ಕೆ ಸಿಲುಕಿರುವ ಸರ್ಕಾರದ ವ್ಯವಸ್ಥೆಯನ್ನು ಹೆಚ್ಚಿನ ವೆಚ್ಚಗಳಿಗೆ ಈಡುಮಾಡದಿರುವುದೇ ತಮ್ಮ ಸಂಕಲ್ಪವಾಗಿತ್ತೆನ್ನುತ್ತಾರೆ. ಸಚಿವರುಗಳಾದವರು ಸಾರ್ವಜನಿಕ ರಂಗದಲ್ಲಿ ನ್ಯಾಯನಿಷ್ಠೆಗಳಿಂದ ಬದುಕಬೇಕೆಂದರೆ ಅವರು ತಮ್ಮ ಪರವಾದ ಸಾರ್ವಜನಿಕ ಸನ್ಮಾನಗಳನ್ನು ಕೊನೆಗೆ ಹಾರ, ತುರಾಯಿಗಳನ್ನೂ ಸ್ವೀಕರಿಸಬಾರದು ಎನ್ನುತ್ತ ಬ್ರಿಟಿಷ್ ಪ್ರಧಾನಿಯವರ ಲಂಡನ್ ನಿವಾಸವನ್ನು ಸ್ಮರಿಸಿಕೊಂಡು ಅವರು ಪ್ರಧಾನ ಮಂತ್ರಿಯಾಗಿ ಒಂದು ದೊಡ್ಡ ರಾಷ್ಟ್ರದ ಹೊಣೆಯನ್ನು ಹೊತ್ತಿದ್ದರೂ ಸಾಧಾರಣ ವ್ಯಕ್ತಿಯಂತೆ ಬದುಕು ನಿರ್ವಹಿಸುವ ರೀತಿಯನ್ನು ಮೆಚ್ಚಿಕೊಳ್ಳುತ್ತಾರೆ.

ಸಿದ್ದಲಿಂಗಯ್ಯ ಸಚಿವರಾಗಿದ್ದಾಗ ತಮ್ಮ ಏಕೈಕ ಪುತ್ರಿ ಸರೋಜಮ್ಮ ಬೆಂಗಳೂರಿನ ತಮ್ಮ ಸಚಿವ ನಿವಾಸದಿಂದ ನಗರ್ತಪೇಟೆಗೆ ಗೌರಿ ಪೂಜೆಗೆ ಹೋಗಿ ಬರಲು ತಂದೆಯ ಕಾರು ಕೇಳಿದರಂತೆ. ಆದರೆ ಸಿದ್ದಲಿಂಗಯ್ಯ 'ಸರ್ಕಾರಿ ಕಾರನ್ನು ಸ್ವಂತ ಕೆಲಸಗಳಿಗೆ ಬಳಸಬಾರದೆಂದು' ನಿಷ್ಠುರವಾಗಿ ಹೇಳಿ ಮಗಳನ್ನು ಜಟಕಾ ಗಾಡಿಯಲ್ಲಿ ಕಳುಹಿಸಿಕೊಟ್ಟದ್ದನ್ನು ಅವರ ಆಪ್ತ

ರಾಜಶೇಖರ್ ರವರಿಗೆ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟುಕೊಡುವಂತೆ ಶಿಫಾರಸ್ಸು ಮಾಡಲು ಆಗ ಶಿಕ್ಷಣ ಸಚಿವರಾಗಿದ್ದ ಸಿದ್ದಲಿಂಗಯ್ಯ ಒಪ್ಪದಿದ್ದುದನ್ನು ದೊಡ್ಡಬಳ್ಳಾಪುರದ ಸಂಪತ್ ಆಯ್ಯಂಗಾರ್ ರವರು ತಮ್ಮ ನೆನಪಿನಿಂದ ಹೇಳಿದುದನ್ನು ಇಲ್ಲಿ ಗಮನಿಸಬಹುದು.

ಸಿದ್ದಲಿಂಗಯ್ಯ 1950ರಲ್ಲಿ ಸಚಿವರಾಗಿದ್ದಷ್ಟು ದಿನವೂ, ಹರಿನಾರಾಯಣ ಹೇಳುವಂತೆ, ತಮ್ಮ ಸರ್ಕಾರಿ ಸಂಬಳದಲ್ಲಿ ಒಂದುಕಾಸನ್ನೂ ತಮ್ಮ ಸ್ವಂತಕ್ಕೆ ಉಪಯೋಗಿಸದೆ ಸರ್ಕಾರದಿಂದ ಸಹಾಯಧನ ಬೇಡಿದ ಸಂಘ ಸಂಸ್ಥೆಗಳಿಗೆ ಕೊಟ್ಟುಬಿಡುತ್ತಿದ್ದರು. ಪ್ರವಾಸದ ಬಿಲ್ಲುಗಳಲ್ಲಿ ತಮ್ಮ ಯಥಾ ವೆಚ್ಚವಲ್ಲದೇ ಒಂದು ಕಾಸನ್ನೂ ನಿಯಮಗಳ ಪ್ರಕಾರ ಲಭ್ಯವಿದ್ದರೂ ಪಡೆದುಕೊಳ್ಳುತ್ತಿರಲಿಲ್ಲ. ಟಿ.ಎ. ಬಿಲ್ಲಿನಲ್ಲಿ ಹೆಚ್ಚಿನ ಮೊತ್ತವನ್ನು ಸರ್ಕಾರಕ್ಕೆ ಉಳಿತಾಯವೆಂದು ತೋರಿಸಿ ವಾಪಸ್ಸು ಮಾಡುತ್ತಿದ್ದರು. ನಾಡಿಗಾಗಿ ದುಡಿದ ಅನೇಕ ದೇಶಾಭಿಮಾನಿಗಳು ಸ್ವಾತಂತ್ರ್ಯ ನಂತರ ಮೂಲೆಗುಂಪಾಗಿ ಬಿದ್ದರು. ಇಂತಹ ಎಷ್ಟೋಮಂದಿ ಸಿದ್ದಲಿಂಗಯ್ಯನವರಲ್ಲಿ ಜೀವನೋಪಾಯ ಮಾರ್ಗಗಳನ್ನು ಕೇಳಿ ಬರುತ್ತಿದ್ದರು. ಅಂತಹವರಿಗೆ ತಮ್ಮ ಸ್ವಂತ ಹಣವನ್ನು ಸಹಾಯ ರೂಪವಾಗಿ ಕೊಟ್ಟು ಕಳುಹಿಸುತ್ತಿದ್ದುದನ್ನು ಕ್ಯಾಪ್ಟನ್ ವೇಣುಗೋಪಾಲರವರು ನೆನಪಿಸಿಕೊಂಡಿದ್ದಾರೆ. ತಾವು (ವೇಣುಗೋಪಾಲ) ಜೈಲಿನಲ್ಲಿದ್ದ ಕಾಲದಲ್ಲಿ ಅವರ ಸಂಸಾರದ ತುರ್ತು ವೆಚ್ಚಗಳನ್ನು ಸಿದ್ದಲಿಂಗಯ್ಯನವರೇ ವ್ಯವಸ್ಥೆ ಮಾಡುತ್ತಿದ್ದುದಕ್ಕೆ ಅವರು ವೇಣುಗೋಪಾಲ ರವರಿಗೆ ಬರೆದ ಈ ಒಂದು ಪತ್ರ ಸಾಕ್ಷಿಯಾಗಿದೆ:

> "ನನ್ನ ಪ್ರಿಯ ವೇಣು,
>
> ನಿನ್ನ ಚೆಕ್ ಮತ್ತು ಪತ್ರ ಅವು ನನ್ನ ಬದುಕನ್ನು ರೋಮಾಂಚನಗೊಳಿಸಿದುವು. ತಮ್ಮ ನಾಯಕರನ್ನು ನೆನಪಿಸಿಕೊಳ್ಳುವಷ್ಟು ಪ್ರಾಮಾಣಿಕತೆಯುಳ್ಳವರು ಇನ್ನೂ ಕೆಲವರಿದ್ದಾರೆಂದು.
>
> ಪ್ರಿಯ ವೇಣು, ನಾನು ಅತಿ ಪ್ರೀತಿಯುಳ್ಳವಳಾದ ಸಾವಿತ್ರಿಯನ್ನು ನೋಡಿಬರುವುದನ್ನು ಮರೆಯುವಷ್ಟು ವಿರಾಮಹೀನನಾಗಿದ್ದೇನೆ. ಪಾಪ, ಆಕೆ ನಿನ್ನನ್ನು ದೇಶಸೇವೆಗಾಗಿ ಬಿಟ್ಟುಕೊಟ್ಟಿದ್ದಾಳೆ. ಯಾವ ಹುಡುಗಿ ಇಂಥ ತ್ಯಾಗಕ್ಕೆ ಒಪ್ಪುವಳು ? ನಿನ್ನ ಭೂತ ಚರಿತ್ರೆಯಷ್ಟೇ ಭವಿಷ್ಯದ ಬಗೆಗೂ ನಾವೆಲ್ಲರೂ ಹೆಮ್ಮೆಪಡುವವರಾಗಿದ್ದೇವೆ. ನಮ್ಮಲ್ಲಿ ನೀನೂ ಶಾಮೀಲಾಗಿರುವೆಯಷ್ಟೆ.
>
> ನಮ್ಮ ನಾಡು ಇನ್ನೂ ವ್ಯವಸ್ಥಿತವಾಗಿಲ್ಲ. ಸಮಸ್ಯೆ ಮುಂತಾದವುಗಳು ಇನೂ ಹೆಚ್ಚುತ್ತಲೇ ಇವೆ. ಯಾವಾಗ ಪರಿಹಾರಗೊಳ್ಳುವವೋ ತಿಳಿಯದಾಗಿದೆ.
>
> ನನ್ನ ಮಗಳು ಸರೋಜಳನ್ನು ಸಾವಿತ್ರಿಯನ್ನು ಕರೆತಂದು ಅವಳೊಡನೆ ಮಾತನಾಡಲು ಕಳಿಸುವ ಪ್ರಯತ್ನ ಮಾಡುತ್ತೇನೆ. ಈ ಸಂಜೆಯ ಕಾರ್ಯಕ್ರಮದಂಥ ನನ್ನ ಯಾವುದಾದರೊಂದು ಸಮಾರಂಭಕ್ಕೆ ಆಕೆಯನ್ನು ಕರೆದುಕೊಂಡು ಹೋಗುತ್ತೇನೆ.

ಈ ಮಧ್ಯೆ ನೀನು ಆಕೆಯ ಬಗ್ಗೆ ವ್ಯಥೆಪಡಬೇಡ, ದೇಶಕ್ಕೆ ನಿನ್ನ ಪೂರ್ಣಗಮನ ಅವಶ್ಯವಿದೆ. ತಾಯಿನಾಡಿನ ಕಾರ್ಯಕ್ಕೆ ಅಗತ್ಯವಾದ ಧೀಮಂತಿಕೆ ನಿನ್ನಲ್ಲಿದೆ.

ನಾನು ಮತ್ತೆ ಬರೆಯುತ್ತೇನೆ.

ಸಚಿವನಾಗಿ ನನಗೆ ಕಾರ್ಯದ ಒತ್ತಡ ಹೆಚ್ಚಾಗಿದೆ. ನಾವು ಈಗಿರುವಂತೆ ಒಳ್ಳೆಯದು ಮಾಡುತ್ತಿರುವೆವೋ ಕೆಟ್ಟದ್ದು ಮಾಡುತ್ತಿರುವೆವೋ ದೇವರಿಗೆ ಮಾತ್ರ ಗೊತ್ತು.

ದೇವರು ನಮಗೆ ನೆರವಾಗಲಿ, ಖಂಡಿತವಾಗಿಯೂ ಅವನಿಗೆ ನಮ್ಮಲ್ಲಿ ವಿಶ್ವಾಸವಿದೆ ಹಾಗೂ ಆತ ನಮ್ಮನ್ನು ನಿರಾಶೆಗೊಳಿಸಲಾರ. ಪ್ರೀತಿ ಪೂರ್ವಕವಾಗಿ

ನಿನ್ನ

(ಟಿ.ಸಿದ್ದಲಿಂಗಯ್ಯ)"

ಸಿದ್ದಲಿಂಗಯ್ಯನವರು ಸಚಿವರಾಗಿದ್ದೂ ಜನಸಾಮಾನ್ಯರಲ್ಲಿ ಎಷ್ಟು ಅನುಕಂಪದಿಂದ ವರ್ತಿಸುತ್ತಿದ್ದರೆಂಬುದಕ್ಕೂ ಶ್ರೀ ಹರಿನಾರಾಯಣ್ ಅನೇಕ ನಿದರ್ಶನಗಳನ್ನು ನೀಡಿದ್ದಾರೆ. ಈ ಗ್ರಂಥದ ಗಾತ್ರಮಿತಿಯಿಂದಾಗಿ ಆ ವಿವರಗಳನ್ನು ನೀಡುವುದು ಸಾಧ್ಯವಿಲ್ಲವಾಗಿದೆ. ಸಿದ್ದಲಿಂಗಯ್ಯ ತಾವೇ ಹೇಳಿರುವಂತೆ ಅವರ ಕೆಲಸಗಳಿಗೆ ತಮ್ಮನ್ನು ಕಾಣಬಯಸಿ ಸಚಿವ ಕೋಣೆಗೆ ಬರುತ್ತಿದ್ದ ಸಾರ್ವಜನಿಕರನ್ನು ಎದ್ದುನಿಂತು ಬರಮಾಡಿಕೊಂಡು ಅವರು ನಿರಾತಂಕವಾಗಿ ವರ್ತಿಸುವ ವಾತಾವರಣವನ್ನೇರ್ಪಡಿಸಿ ನಂತರ ಅವರ ಅಹವಾಲುಗಳನ್ನು ಕೇಳಿ ಸೂಕ್ತ ಕ್ರಮ / ಸಮಜಾಯಿಷಿ ನೀಡುತ್ತಿದ್ದರಂತೆ. ಯಾವತ್ತೂ ಅಂದಂದಿನ ಕಡತಗಳನ್ನು ಅಂದಂದೇ ವಿಲೇ ಮಾಡುತ್ತಿದ್ದುದನ್ನು ತಮ್ಮ ಸ್ಮರಣ ಲೇಖನದ ಪುಟಗಳಲ್ಲಿ ಹೇಳಿದ್ದಾರೆ. ಇಂದಿನ ರಾಜಕಾರಣಿಗಳು ಸಿದ್ದಲಿಂಗಯ್ಯನವರ ಆದರ್ಶದಲ್ಲಿ ಹತ್ತರಲ್ಲೊಂದುಭಾಗ ಅನುಸರಿಸಿದರೂ ಸಮಾಜ ಏಳ್ಗೆ ಹೊಂದುವುದರಲ್ಲಿ ಸಂಶಯವಿಲ್ಲ.

ಸಾರ್ವಜನಿಕ ಜೀವನದಲ್ಲಿ ಭ್ರಷ್ಟಾಚಾರವನ್ನು ತಗ್ಗಿಸಲು ಸಿದ್ದಲಿಂಗಯ್ಯನವರು ನೀಡಿರುವ ಎರಡು ಸಲಹೆಗಳು:-

(1) ಪ್ರಸ್ತುತ ಸನ್ನಿವೇಶಗಳಲ್ಲಿ ಸಚಿವರೂ ಸೇರಿದಂತೆ ಸಾರ್ವಜನಿಕ ಸೇವೆಯಲ್ಲಿರುವವರ ನೈತಿಕತೆಯನ್ನು ಸಂರಕ್ಷಿಸಲು ಈ ಸಾರ್ವಜನಿಕ ಸೇವಕರು ತಮ್ಮ ಆಸ್ತಿಪಾಸ್ತಿ ತಃಖ್ತೆ ಮತ್ತು ಅವುಗಳನ್ನು ಆರ್ಜಿಸಿದ ವಿವರಗಳನ್ನು ನೀಡುವುದು. ಮತ್ತು

(2) ಸಾರ್ವಜನಿಕ ಸೇವೆಗೆ ಬರುವವರು ತಾವು ಶಿಷ್ಟಾಚಾರಿಗಳಾಗಿ ನಡೆದುಕೊಳ್ಳುವ ಬಗ್ಗೆ ಶಿಫಾರಸ್ಸು ಮಾಡುವ ಇಬ್ಬರು ವ್ಯಕ್ತಿಗಳ ಖಾತ್ರಿಯನ್ನು ಒದಗಿಸುವುದನ್ನು ಕಡ್ಡಾಯಗೊಳಿಸಬೇಕು.

## ಗಾಂಧೀವಾದ ಮತ್ತು ಟಿ.ಎಸ್

ಸ್ವಾತಂತ್ರ್ಯಾನಂತರ ಮೂರುದಶಕಗಳೇ ಕಳೆದಿದ್ದುವು. ಸಿದ್ದಲಿಂಗಯ್ಯನವರು ರಾಜಕೀಯ ಚಟುವಟಿಕೆಗಳಿಂದ ಸಂಪೂರ್ಣ ನಿವೃತ್ತಿ ಪಡೆದಿದ್ದರು. ಆದರೂ ನಾಡಿನ ಪರಿಸ್ಥಿತಿಗಾಗಿ ಜನಸಾಮಾನ್ಯರ ಅನಂತ ಕಷ್ಟಕಾರ್ಪಣ್ಯ ಗಳಿಗಾಗಿ ಅವರು ಕೊರಗು ತಪ್ಪಲಿಲ್ಲ. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಅಧಿಕಾರ, ಸ್ಥಾನಮಾನ ಮತ್ತು ಹೀನದ್ರವ್ಯಗಳಗಳಿಕೆಗಾಗಿ ಯಾವುದೇ ಹೀನಾಯ ಮಾರ್ಗವನ್ನು ಹಿಡಿಯಲು ಹೇಸದ ಪ್ರವೃತ್ತಿಯನ್ನೂ ಶ್ರೀಮಂತರ ಸಿರಿತನದ ಜೊತೆಜೊತೆಗೇ ಬಡವರ ಬಡತನ ಬೆಳೆಯುತ್ತಿರುವ ವಿಪರ್ಯಾಸವನ್ನೂ ನೆನೆದು ಮರುಗಿದರು. ರಾಮರಾಜ್ಯದ ಕನಸು ಕಂಡ ಮಹಾತ್ಮಾ ಗಾಂಧಿಯವರಿಗಾಗಿ ಪಶ್ಚಾತ್ತಾಪ ಪಟ್ಟರು. ಅದರ ಹಿಂದೆಯೇ ಅವರ ಪ್ರಜ್ಞೆ ಶಿಸ್ತಿನ ಬದುಕಿನ ಮಹತ್ವದ ಬಗ್ಗೆ ಹೊರಳುತ್ತಿತ್ತು. ಅವರು ಮೊದಮೊದಲು ಗಾಂಧೀ ವಿರೋಧಿಯಾಗಿದ್ದುದರ ಕಾರಣ ಅನಿಬೆಸೆಂಟರ ಶಿಸ್ತು ಪ್ರಜ್ಞೆಯಿಂದ ಅವರು ಹೆಚ್ಚು ಪ್ರೇರೇಪಿತರಾಗಿದ್ದದ್ದು. ಮಹಾತ್ಮಾಗಾಂಧಿಯವರ ಸತ್ಯಾಗ್ರಹ ಚಳುವಳಿಗಳ ಕುರಿತಾಗಿ ಅನಿಬೆಸೆಂಟರು ಗಾಂಧೀಜಿಯವರಿಗೆ "ಗಾಂಧೀ, ನೀವೊಬ್ಬ ಸಾಧು ಪುರುಷರು ನಿಮಗೆ ಮಾನವ ಸ್ವಭಾವ ತಿಳಿಯದು ನೀವೀಗ ಜನರಿಗೆ ಕಾಯಿದೆಭಂಗ ಮಾಡುವುದನ್ನು ಹೇಳಿಕೊಟ್ಟರೆ ಮುಂದೆ ಜನರಲ್ಲಿ ಅದೇ ಅಭ್ಯಾಸ ಬೆಳೆದು ಪ್ರಜಾ ಸರ್ಕಾರದಲ್ಲಿ ಅವರು ಸರ್ಕಾರದ ವಿರುದ್ಧ ತಿರುಗಿ ಬೀಳುವಂತಾಗುತ್ತದೆ" ಎಂದು ಹೇಳುತ್ತಿದ್ದುದನ್ನು ನೆನಪಿಸಿಕೊಂಡು ನಮ್ಮ ಪ್ರಜಾಸತ್ತೆಯ ಬೆಳವಣಿಗೆಗೆ ತಾಳೆ ಹಾಕುತ್ತಾ ಸಿದ್ದಲಿಂಗಯ್ಯ ಈ ರೀತಿ ಹೇಳುತ್ತಾರೆ:

> "ಗಾಂಧೀಜಿಯವರ ಹೆಸರಿನಲ್ಲಿ ನಾವು ಸಾಧಿಸಿದ್ದೇನೆಂದರೆ:
>
> (1) ಪರಕೀಯರ ಆಳ್ವಿಕೆಯ ವಿರುದ್ಧ ನಾವು ಬೆಳೆಸಿದ ಭಾವಾತಿರೇಕ ಮೇರುವಾಗಿ ಈಗ ನಮ್ಮದೇ ಆದ ಪ್ರಜಾತಂತ್ರದ ವಿರುದ್ಧ ಪರಿಣಾಮ ಉಂಟುಮಾಡಲು ಉಪಕ್ರಮಿಸಿದೆ. ಇದಕ್ಕೊಂದು ಕೊನೆ ಇರುವುದಾದರೆ ಅದು ಏನು ಮತ್ತು ಎಂದು ಎಂಬುದು ಊಹೆಗೆ ನಿಲುಕದ ಮಾತಾಗಿದೆ.
>
> (2) ಕಾಯಿದೆ ಭಂಗ, ಅವಿಧೇಯತೆ, ನಿಯಮೋಲ್ಲಂಘನೆ, ಮುಷ್ಕರಗಳು, ಆಸ್ತಿಪಾಸ್ತಿಗಳನ್ನು ಸುಡುವುದು, ಹಾಳುಗೆಡುವುದು, ಇವೇ ಮೊದಲಾದ ಸತ್ಯಾಗ್ರಹ ಮತ್ತು ಅಹಿಂಸಾತ್ಮಕ ಚಳುವಳಿಗಳ ಪವಿತ್ರಾಯುಧಗಳು ನಮ್ಮದೇ ಆದ ಪ್ರಜಾಸರ್ಕಾರದ ವಿರುದ್ಧವೂ ಕಪ್ಪು ಹಣ, ಲಾಟರಿ, ಕಳ್ಳಸಾಗಣೆ, ಅಕ್ರಮ ದಾಸ್ತಾನು ಮುಂತಾದ ರೂಪದಲ್ಲಿ ಉಪಯೋಗಿಸಲ್ಪಡುತ್ತಿವೆ.
>
> (3) ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಮಾಡಿದ ಧನಸಂಗ್ರಹ ಮತ್ತು ವೆಚ್ಚಗಾರಿಕೆ ಇಂದಿನ ಕಾಲದ ಅಧಿಕಾರ ಲಾಲಸೆ ಮತ್ತು ಅಕ್ರಮ ಹಣಗಳಿಕೆಯ ಪ್ರಲೋಭನೆಗಳಿಗೆ ಬುನಾದಿಯಾಗಿದೆ.
>
> ಗಾಂಧೀ ತತ್ವ ರಾಜಕೀಯದಲ್ಲಿ ಎಷ್ಟು ಅಪ್ರಸ್ತುತವಾಗಿತ್ತೆಂಬುದನ್ನು ಮತ್ತು ಸುಮಾರು 60 ವರ್ಷಗಳ ಹಿಂದೆಯೇ ಡಾ: ಶಂಕರ್ ನಾಯರ್ ಬರೆದ 'ಗಾಂಧಿ ಮತ್ತು ಅರಾಜಕತೆ' ಎಂಬ ಕೃತಿಯ ಭವಿಷ್ಯವಾಣಿ ಎಷ್ಟು ಸತ್ಯವಾಗಿತ್ತೆಂಬುದನ್ನು ತೋರಿಸಿಕೊಡುವ ಇಂಥ ನೂರಾರು ಪ್ರಸಂಗಗಳನ್ನು ಉದ್ಧರಿಸಬಹುದಾಗಿದೆ."

ಇದು ಕೇವಲ ಹಳೆಯ ರಾಗಾಲಾಪನೆಯ ಮಾತಲ್ಲ. ಇದರಿಂದ ತಪ್ಪು ದಾರಿಗೆಳೆಯಲ್ಪಟ್ಟ ನಮ್ಮ ಇಂದಿನ ಸಮಾಜವನ್ನು ಸರಿದಾರಿಗೆ ತರುವ ಪ್ರಯತ್ನಗಳು ಆಗಬೇಕಾಗಿದೆ ಎಂಬುದನ್ನು ನಾವೆಲ್ಲರೂ ಮನಗಾಣಬೇಕಾದುದು ಇಲ್ಲಿನ ಅಂಶ.

* * * * *

# ಭಾಗ-೩

# ಸಿದ್ದಲಿಂಗಯ್ಯನವರ ಶಾಸಕ ಪಟುತ್ವ

## ಭಾಗ-೩

### ಸಿದ್ದಲಿಂಗಯ್ಯನವರ ಶಾಸಕ ಪಟುತ್ವ:

ಗ್ರಂಥದ ಮೊದಲನೇ ಭಾಗದಲ್ಲಿ ಒಂದು ರಾಜ್ಯವ್ಯಾಪೀ ಚಳುವಳಿಯ ಸಂಘಟಕರಾಗಿ ಸಿದ್ದಲಿಂಗಯ್ಯನವರ ರಾಜಕೀಯ ಬದುಕನ್ನು ಪರಿಚಯಿಸಿಕೊಂಡೆವು. ಎರಡನೇ ಭಾಗದಲ್ಲಿ ಶ್ರೀಯತರ ನೀತಿ ಧೋರಣೆಗಳನ್ನು ಕೆಲವು ವಿಶೇಷ ಸಂದರ್ಭಗಳ ಹಿನ್ನೆಲೆಯಲ್ಲಿ ನೋಡಿದೆವು. ಈ ಭಾಗದಲ್ಲಿ ಸ್ವಾತಂತ್ರಾ ನಂತರ ವಿಧಾನ ಮಂಡಲದಲ್ಲಿ ಶಾಸಕರಾಗಿ ಕಾರ್ಯ ನಿರ್ವಹಿಸಿದ ಅವರ ಪಟುತ್ವವನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ.

ಈಗಾಗಲೇ ಕಂಡುಕೊಂಡಂತೆ ಸ್ವಾತಂತ್ರ್ಯಾ ನಂತರದಲ್ಲಿ ಅವರ ರಾಜಕೀಯ ಚಟುವಟಿಕೆ ಚುರುಕಿನದ್ದಾಗಲಿಲ್ಲ. ಪ್ರಜಾತಂತ್ರದ ಮೊದಲ ಹೆಜ್ಜೆಯಲ್ಲೇ ಇವರ ಪ್ರತಿಭೆ ಕಡೆಗಣಿಸಲ್ಪಟ್ಟಿದ್ದೇ ಅಲ್ಲದೆ ಹಿತವರೊಂದಿಗೇ ಪೈಪೋಟಿಗೆ ಇಳಿಯುವಂತಹ ಸಂದರ್ಭಗಳನ್ನು ಎದುರಿಸಬೇಕಾಯಿತು. ಆ ಸವಾಲನ್ನು ತೆಗೆದುಕೊಳ್ಳುವುದು ಸಿದ್ದಲಿಂಗಯ್ಯನವರಿಗೆ ತಮ್ಮ ಸತ್ಯನಿಷ್ಠೆಯ ಪ್ರಶ್ನೆಯಾಗಿತ್ತು. ಈ ಅಗ್ನಿ ಪರೀಕ್ಷೆಯನ್ನು ಸತ್ಯದ ಬಲದಿಂದಲೇ ಗೆದ್ದುಬಂದಾಯಿತು. ಮುಂದೆ ಕಾಂಗ್ರೆಸ್‌ನ ಅಧ್ಯಕ್ಷ ಸ್ಥಾನದಲ್ಲಿ ಕುಳಿತು ಕೆಳಗಿನ ಸ್ಥರಗಳಲ್ಲಿ ಸರ್ಕಾರದ ವ್ಯವಸ್ಥೆಯನ್ನು ತಮ್ಮ ಸ್ವಂತ ಜವಾಬ್ದಾರಿಯಲ್ಲಿ ಸ್ವತಂತ್ರವಾಗಿ ಬೆಳೆಸುವ ಅವಕಾಶವನ್ನು ಸದಸ್ಯರಿಗೆ ತೆರೆಮಾಡಿಕೊಟ್ಟು ತಾನು ಅತಿರೇಕಗಳನ್ನು ಮಾತ್ರ ತಿದ್ದುವ ಕಾವಲು ಭಟನಂತೆ ನಿರ್ವಹಿಸಲು ನಿರ್ಧರಿಸಿದರು. ಆದರೆ ದಿವಾನರು ಕಾಂಗ್ರೆಸ್ ಪಕ್ಷದಲ್ಲಿ ಮೂಡಿಸಿದ್ದ ಒಡಕು ತನ್ನ ಪರಿಣಾಮವನ್ನು ಬೀರಹತ್ತಿತ್ತು. ಸಿದ್ದಲಿಂಗಯ್ಯನವರಿಗೆ ತನ್ನ ಸಹವರ್ತಿಗಳಿಂದ ನಿರೀಕ್ಷಿಸಿದ ಸಹಕಾರ ದೊರೆಯದಾಗಿತ್ತು. ಪ್ರಾಮಾಣಿಕತೆ ಚಲಾವಣೆ ಕಳೆದುಕೊಂಡ ನಾಣ್ಯವಾಗಿತ್ತು. ಇದು ಅವರಿಗೆ ತುಂಬಾ ನಿರಾಶೆಯನ್ನುಂಟುಮಾಡಿತು.

ಸ್ವಾತಂತ್ರ್ಯ ಪೂರ್ವದಲ್ಲಿ ಇವರು ವಿಧಿ ವಿಧಾಯಕ ಸಭೆ ಮತ್ತು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದ ಅವಧಿಯಲ್ಲಿ ಹೆಚ್ಚಾಗಿ ಸಂಘಟನಾ ಚಟುವಟಿಕೆಗಳಲ್ಲಿ ತೊಡಗಿರುತ್ತಿದ್ದರು. ಇಲ್ಲವೇ ಸೆರೆಮನೆಯಲ್ಲಿರುತ್ತಿದ್ದರು. ಪುನರ್‌ರಚಿತ ರಾಜಕೀಯ ಸುಧಾರಣಾ ಸಮಿತಿಯಲ್ಲಿದ್ದಾಗ ಸಂಸ್ಥಾನದ ಸರ್ಕಾರ ರಾಜಕೀಯ ಒಪ್ಪಂದವನ್ನು ನಿರ್ಲಕ್ಷಿಸಿದ ಹಿನ್ನೆಲೆಯಲ್ಲಿ ಪ್ರತಿಭಟಿಸಿ ಸಭೆಗಳಿಂದ ಹೊರಗೆ ಉಳಿದರು. ಸ್ವಾತಂತ್ರ್ಯಾನಂತರದ ಐದಾರು ವರ್ಷಗಳ ಅನುಭವದಲ್ಲಿ ತಮ್ಮ ಸತ್ಯನಿಷ್ಠ ರಾಜಕೀಯ ಧೋರಣೆಗೆ ಮನ್ನಣೆ ದೊರೆಯದ ಕಾರಣ ಸಚಿವಾವಧಿ ಮುಗಿದ ನಂತರದ ಅವಧಿಯಲ್ಲಿ ಸದನ ಕಲಾಪಗಳಲ್ಲಿ ಹೆಚ್ಚಾಗಿ ಭಾಗವಹಿಸಲಿಲ್ಲ. ಹೀಗಾಗಿ ಸಿದ್ದಲಿಂಗಯ್ಯನವರ ಸಾಮರ್ಥ್ಯ ಸ್ವತಂತ್ರ ಸಮಾಜದ ಸ್ಥಾಪನೆಗೆ ಲಭ್ಯವಾದಷ್ಟು ಅದರ ಬೆಳವಣಿಗೆಗೆ ಲಭ್ಯವಾಗಲಿಲ್ಲ. ಇದು ನಾಡಿನ ದುರಾದೃಷ್ಟ.

ಸಿದ್ದಲಿಂಗಯ್ಯನವರು ಅವರಾಗಿ ಅಧಿಕಾರ ಸ್ಥಾನಗಳನ್ನು ಬೆಂಬತ್ತಿ ಹೋಗಲಿಲ್ಲ. ಆದರೆ ಜವಾಬ್ದಾರಿಗಳು ಅವರ ಹಾದಿಯಲ್ಲಿ ಬಂದಾಗ ಒಲ್ಲೆನೆನ್ನದೆ ಅವುಗಳನ್ನು ಹೊತ್ತು ತಮ್ಮ ಸಂಪೂರ್ಣ ಸಾಮರ್ಥ್ಯವನ್ನು ಅದರ ನಿರ್ವಹಣೆಗೆ ಧಾರೆ ಎರೆದು ನಿಸ್ಪೃಹ ಸೇವೆ ಸಲ್ಲಿಸಿದ್ದಾರೆ. ಅವರ ಈ ಶಾಸಕ ಪಟುತ್ವದ ಪ್ರಾತ್ಯಕ್ಷಿಕೆಯನ್ನು ಈ ಗ್ರಂಥಭಾಗಕ್ಕೆ ಹೆಣೆದು ಸೇರಿಸುವ ಪ್ರಯತ್ನ ಮಾಡಿದ್ದೇನೆ.

ಸ್ವಾತಂತ್ರ್ಯಾನಂತರದ ಪ್ರಥಮ ಮಂತ್ರಿಮಂಡಲದ ಮಧ್ಯಾವಧಿಯಲ್ಲಿ ಜನತೆಯ ಒಲವನ್ನು ಕಳೆದುಕೊಳ್ಳುತ್ತಿದ್ದ ಸರ್ಕಾರವನ್ನು ಎತ್ತಿ ನಿಲ್ಲಿಸುವ ಸಲುವಾಗಿ ಕಿರಿಯರಿಗಿಂತಲೂ ಕಿರಿಯವನಾಗಿ ಮಂತ್ರಿಮಂಡಲದಲ್ಲಿ ಒಂದು ಸ್ಥಾನವನ್ನು ಅಲಂಕರಿಸಿದರು. ಆದರೆ ಹತ್ತು ತಿಂಗಳಿಗೂ ಹೆಚ್ಚು ಕಾಲ ಆ ಸ್ಥಾನದಲ್ಲಿ ಉಳಿಯುವುದಾಗಲಿಲ್ಲ. ಈ ರಾಜಿನಾಮೆಯ ಹಿಂದಿನ ಕಾರಣಗಳನ್ನು ಅವರು ಸದನಕ್ಕೆ ತಿಳಿಸಲು ಇಚ್ಚಿಸಲಿಲ್ಲ. ಇನ್ನೂ ಉತ್ತಮ ಸರ್ಕಾರವನ್ನು ರಚಿಸುವುದು ಈ ತೀರ್ಮಾನದ ಹಿಂದಿನ ಪ್ರೇರಣೆಯಾಗಿತ್ತೆಂದು ಇವರ ಆಪ್ತ ಸಹಾಯಕರಾಗಿ ಕೆಲಸ ಮಾಡಿದ ಹರಿನಾರಾಯಣರವರು ಹೇಳಿದ್ದಾರೆ. ಈ ಅವಧಿಯೊಳಗೆ ಅವರು ಶಿಕ್ಷಣ ಮತ್ತು ಆರೋಗ್ಯ ಖಾತೆಯ ಸಚಿವರಾಗಿ ಸದನ ಕಲಾಪಗಳಲ್ಲಿ ಭಾಗವಹಿಸಿದ ನಡವಳಿ ಭಾಗಗಳನ್ನು ಈ ಭಾಗದಲ್ಲಿ ಮುಂದೆ ಉದ್ಧರಿಸಲಾಗಿದೆ. ಈ ಅವಧಿಯಲ್ಲಿ ಅವರು ಸಭಾ ನಾಯಕರಾಗಿಯೂ ಕೆಲಸ ಮಾಡಿದ್ದಾರೆ.

## ಶಿಕ್ಷಣ ಮತ್ತು ಆರೋಗ್ಯ ಖಾತೆ ಸಚಿವರಾಗಿ:

ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವಲ್ಲ. ಸ್ವಇಚ್ಛೆಯಾದರೂ ವಿವೇಕದಿಂದ ಕೂಡಿರಬೇಕು. ಇಂಥ ವಿವೇಕವನ್ನು ರೂಢಿಸುವುದೇ ಶಿಕ್ಷಣದ ಉದ್ದೇಶ. ಹಾಗಾಗಿ ಸ್ವಾತಂತ್ರ್ಯಾನಂತರ ಸರ್ಕಾರಗಳಿಗೆ ಯುಕ್ತವಾದ ಶಿಕ್ಷಣ ನೀತಿಯನ್ನು ರೂಪಿಸುವುದು ಪ್ರಮುಖ ಜವಾಬ್ದಾರಿಯಾಯಿತು. ಮೈಸೂರಿನ ಪ್ರಥಮ ಪ್ರಜಾ ಸರ್ಕಾರದಲ್ಲಿ ಶಿಕ್ಷಣ ಸಚಿವರಾದ ಸಿದ್ದಲಿಂಗಯ್ಯನವರ ಮೇಲೆ ಈ ಹಿರಿಹೊಣೆ ಬಿದ್ದಿತ್ತು. 1947ರಲ್ಲಿ ರಾಜ್ಯ ಸರ್ಕಾರ ಏರ್ಪಟ್ಟನಂತರದಲ್ಲಿ 1950-51ರ ಶಿಕ್ಷಣದವರೆಗೆ ಶಿಕ್ಷಣ ಕ್ಷೇತ್ರದಲ್ಲಿ ಉಂಟಾದ ಪ್ರಗತಿಯ ಬಗ್ಗೆ ಸೆಪ್ಟೆಂಬರ್ 1950ರ ವಿಧಾನಸಭಾ ಅಧಿವೇಶನದಲ್ಲಿ ಮಾನ್ಯ ಶ್ರೀ ಹುಚ್ಚೇಗೌಡರು ಪ್ರಶ್ನೆ ಎತ್ತಿದರು. ಶಿಕ್ಷಣ ಸಚಿವರಾಗಿ ಸಿದ್ದಲಿಂಗಯ್ಯನವರು ನೀಡಿದ ಅಂಕಿ ಅಂಶಗಳಿಂದ ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡಿರುವುದು, ವರ್ಷೇ ವರ್ಷೇ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸುತ್ತಾ ಬಂದಿರುವುದು ಮತ್ತು ಅದರೊಂದಿಗೆ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳ ಸಂಖ್ಯೆ ಕ್ರಮೇಣ ವೃದ್ಧಿಯಾಗುತ್ತಿರುವುದು ಸ್ಪಷ್ಟವೇದ್ಯವಾಗಿತ್ತು. ಆದರೂ ಈ ವಿಷಯ ಸಂಬಂಧವಾದ ಪೂರಕ ಚರ್ಚೆಯಲ್ಲಿ ಮಾಧ್ಯಮಿಕ ಶಿಕ್ಷಣದ ಗುಣ ಮಟ್ಟದಲ್ಲಿ ಕೊರತೆ ಇರುವುದನ್ನು ಸಂಭೋದಿಸಲಾಯಿತು. ಸಾರ್ವತ್ರಿಕ ಶಿಕ್ಷಣದಂತಹ ಮಹತ್ವದ ವಿಷಯದಲ್ಲಿ ಸರ್ಕಾರ ಯಾವ ಸಂಗತಿಯನ್ನೂ ಮರೆಮಾಚದೆ ವಿರೋಧ ಪಕ್ಷದ ಎಲ್ಲ ಕ್ರಿಯಾತ್ಮಕ ಸಲಹೆ ಸೂಚನೆಗಳನ್ನು ಸ್ವಾಗತಿಸಿ ಬಿಚ್ಚುಮನಸ್ಸಿನಿಂದ ಸಮಾಲೋಚಿಸಿ ಸರ್ಕಾರದ ನೀತಿಯನ್ನು ಕಾರ್ಯಕ್ರಮಗಳನ್ನು ಎಲ್ಲರಿಗೂ ತೃಪ್ತಿ ತರುವಂತೆ ನಿರೂಪಿಸಿದ ಸಿದ್ದಲಿಂಗಯ್ಯನವರ ಶಾಸಕ ಪಟುತ್ವವನ್ನು ತಾ: 4.9.1950ರ ಸದನದ ಪ್ರಶ್ನೋತ್ತರ ಕಲಾಪಗಳ ಈ ಉದ್ಧೃತಭಾಗದಲ್ಲಿ ಕಾಣಬಹುದಾಗಿದೆ.

## ರಾಜ್ಯದಲ್ಲಿನ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳು:

"ಶ್ರೀ ಬಿ. **ಹುಚ್ಚೇಗೌಡರು**:- ಇಲ್ಲಿ ಕೊಟ್ಟಿರುವುದರಲ್ಲಿ 1949-50ನೇ ಇಸವಿಯಲ್ಲಿ 709 ಮಿಡ್ಲ್ ಸ್ಕೂಲುಗಳಿದ್ದುವೆಂದು ಹೇಳಿದ್ದೀರಿ. ಇದರಲ್ಲಿ ಇನ್‌ಕಂಪ್ಲೀಟ್ ಮಿಡ್ಲ್ ಸ್ಕೂಲುಗಳೂ ಸೇರಿವೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯನವರು:- ಸೇರಿಲ್ಲ, ಇವೆಲ್ಲ ಕಂಪ್ಲೀಟ್ ಮಿಡ್ಲ್ ಸ್ಕೂಲ್‌ಗಳು.

ಶ್ರೀ ಬಿ. ಹುಚ್ಚೇಗೌಡರು:- ಹಾಗಾದರೆ 1950ನೆಯ ಮಾರ್ಚಿನಲ್ಲಿದ್ದ ಇನ್ ಕಂಪ್ಲೀಟ್ ಮಿಡ್ಲ್ ಸ್ಕೂಲ್‌ಗಳ ಸಂಖ್ಯೆಯನ್ನು ತಿಳಿಸುತ್ತೀರಾ ?

ಶ್ರೀ ಟಿ. ಸಿದ್ದಲಿಂಗಯ್ಯ:- ಆ ಬಗ್ಗೆ ಅಂಕಿ ಅಂಶಗಳನ್ನು ಶೇಖರಿಸಿಲ್ಲ. ಆದ್ದರಿಂದ ಹೇಳಲಾರೆ.

ಶ್ರೀ ಬಿ. ಹುಚ್ಚೇಗೌಡರು:- ಸುಮಾರು ಮೂರುನೂರು ಇರಬಹುದೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಇರಬಹುದು.

ಶ್ರೀ ಬಿ. ಹುಚ್ಚೇಗೌಡರು:- ಹಾಗಾದರೆ ಇಲ್ಲಿ ಕೊಟ್ಟಿರುವ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಆ ಸ್ಕೂಲಿನ ವಿದ್ಯಾರ್ಥಿಗಳನ್ನು ಸೇರಿಸಿಲ್ಲ ಅಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಸೇರಿಸಿಲ್ಲ.

ಶ್ರೀ ಬಿ. ಹುಚ್ಚೇಗೌಡರು:- ಮಿಡ್ಲ್ ಸ್ಕೂಲುಗಳಲ್ಲಿರುವ ವಿದ್ಯಾರ್ಥಿಗಳೆಂದ ಮೇಲೆ ಎಲ್ಲಾ ಮಿಡ್ಲ್ ಸ್ಕೂಲುಗಳಲ್ಲಿರುವವರನ್ನು ಸೇರಿಸಬೇಕಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಪ್ರೈಮರಿ ಸ್ಕೂಲಿಗೆ ಒಬ್ಬ ಇಂಗ್ಲೀಷ್ ಉಪಾಧ್ಯಾಯರನ್ನು ಕೊಟ್ಟು ಬಿಟ್ಟರೆ ಅದು ನ್ಯೂ ಟೈಪ್ ಮಿಡ್ಲ್ ಸ್ಕೂಲ್ ಆಗುತ್ತದೆ. ಆದ್ದರಿಂದ ಅದನ್ನು ಕಂಪ್ಲೀಟ್ ಮಿಡ್ಲ್ ಸ್ಕೂಲೆಂದು ಎಣಿಸುವುದಕ್ಕಾಗುವುದಿಲ್ಲ.

ಶ್ರೀ ಬಿ. ಹುಚ್ಚೇಗೌಡರು:- ನ್ಯೂ ಟೈಪ್ ಮಿಡ್ಲ್ ಸ್ಕೂಲಿನ ವಿದ್ಯಾರ್ಥಿಗಳೂ ಮಿಡ್ಲ್ ಸ್ಕೂಲ್ ಪರೀಕ್ಷೆಗೆ ಕುಳಿತುಕೊಳ್ಳುವುದಿಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಕುಳಿತುಕೊಳ್ಳುತ್ತಾರೆ.

ಶ್ರೀ ಬಿ. ಹುಚ್ಚೇಗೌಡರು:- ಹಾಗಾದರೆ ಅವರ ಸಂಖ್ಯೆಯನ್ನು ಸೇರಿಸಬೇಕಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಈ ಹೊಸ ಮಾದರಿಯ ಮಾಧ್ಯಮಿಕ ಶಾಲೆಗಳ ಬಗ್ಗೆ ಸರ್ಕಾರಕ್ಕೆ ತೃಪ್ತಿಯಾಗಿಲ್ಲ. ಅವುಗಳಿಗೆ ಸಂಪೂರ್ಣ ಅಧಿಕಾರ ಕೊಡಬೇಕೆಂದಿದ್ದೇವೆ.

ಶ್ರೀ ಬಿ. ಹುಚ್ಚೇಗೌಡರು:- ಅದು ಸರಿ. ಆದರೂ ಮಿಡ್ಲ್ ಸ್ಕೂಲ್ ತರಗತಿಗಳಲ್ಲಿ ಓದುವವರೆಷ್ಟು ಮತ್ತು ಪ್ರೈಮರಿ ತರಗತಿಗಳಲ್ಲಿ ಓದುವವರೆಷ್ಟು ಎಂಬುದನ್ನು ಹೇಳುವುದಕ್ಕಾಗುವುದಿಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಆ ಅಂಕಿಗಳನ್ನೆಲ್ಲಾ ಶೇಖರಿಸಬೇಕಾದರೆ ಸ್ವಲ್ಪ ಕಾಲಾವಕಾಶ ಬೇಕು. ಸಧ್ಯದಲ್ಲಿ ಆ ಅಂಕಿಗಳು ನಮ್ಮಲ್ಲಿಲ್ಲ. ಬೇಕಾದರೆ ಆಮೇಲೆ ಹೇಳುತ್ತೇನೆ.

ಶ್ರೀ ಬಿ. ಹುಚ್ಚೇಗೌಡರು:- ಈಗಿರುವ ಇನ್‌ಕಂಪ್ಲೀಟ್ ಮಿಡ್ಲ್ ಸ್ಕೂಲುಗಳೆಲ್ಲವನ್ನೂ ಪಕ್ಕಾ ಸ್ಕೂಲುಗಳಾಗಿ ಪರಿವರ್ತನೆ ಮಾಡಬೇಕೆಂದಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಹಾಗೆ ಮಾಡಬೇಕೆಂದು ಸರ್ಕಾರಕ್ಕೆ ಆಸೆ ಇದೆ.

ಶ್ರೀ ಬಿ. ಹುಚ್ಚೇಗೌಡರು:- ಈಗಿರುವಂತೆ ಇನ್‌ಕಂಪ್ಲೀಟ್ ಮಿಡ್ಲ್ ಸ್ಕೂಲುಗಳೇ ಇದ್ದರೆ ಸರ್ಕಾರಕ್ಕೆ ಕಡಿಮೆ ಖರ್ಚಾಗುವುದಿಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ನೀವು ಹೇಳುವಂತೆ ಕಡಿಮೆ ಖರ್ಚಿನಲ್ಲೇನೋ ನಡೆಯುತ್ತದೆ. ಆದರೆ ಸರಿಯಾದಂಥ ವಿದ್ಯಾಭ್ಯಾಸವಾಗುವುದಿಲ್ಲ. ಆದ್ದರಿಂದ ಅವುಗಳನ್ನೂ ಪೂರ್ತಿ ಮಿಡ್ಲ್ ಸ್ಕೂಲಾಗಿ ಮಾಡಬೇಕಾದ್ದು ಅಗತ್ಯವೆಂದು ಸರ್ಕಾರದವರ ಅಭಿಪ್ರಾಯ.

ಶ್ರೀ ಬಿ. ಹುಚ್ಚೇಗೌಡರು:- ಹಾಗಾದರೆ ಈಗಿರತಕ್ಕ ಮಿಡ್ಲ್ ಸ್ಕೂಲ್ ವಿದ್ಯಾಭ್ಯಾಸದ ಪದ್ಧತಿಯನ್ನು ಬದಲಾಯಿಸುತ್ತೀರಾ ?

ಶ್ರೀ ಟಿ. ಸಿದ್ದಲಿಂಗಯ್ಯ:- ಆ ಪದ್ಧತಿಯನ್ನು ಬದಲಾಯಿಸುವುದೂ ಆಲೋಚನೆಯಲ್ಲಿದೆ. ಆದರೆ ಅದು ಇದಕ್ಕೆ ಸಂಬಂಧಪಟ್ಟಿಲ್ಲ.

ಶ್ರೀ ವೀರಪ್ಪನವರು (ಚಿತ್ರದುರ್ಗ ಜಿಲ್ಲೆ, ಜನರಲ್):- ಈ ಅಪೂರ್ಣಗೊಂಡ ಮಾಧ್ಯಮಿಕ ಶಾಲೆಗಳನ್ನು ಪಕ್ಕಾ ಮಾಧ್ಯಮಿಕ ಶಾಲೆಗಳಾಗಿ ಪರಿವರ್ತಿಸಲು ಯಾವುದಾದರೂ ಕಾಲಮಿತಿಯನ್ನು ಹಾಕಿಕೊಳ್ಳಲಾಗಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಆ ಪ್ರಶ್ನೆಗೆ ಉತ್ತರಿಸಿದ್ದೇನೆ.

ಶ್ರೀ ವೀರಪ್ಪನವರು:- ಈ ಅಪೂರ್ಣಗೊಂಡ ಮಾಧ್ಯಮಿಕ ಶಾಲೆಗಳನ್ನು ಪಕ್ಕಾ ಮಾಧ್ಯಮಿಕ ಶಾಲೆಗಳನ್ನಾಗಿ ಪರಿವರ್ತಿಸುವಲ್ಲಿ ಇಂತಿಷ್ಟೇ ಕಾಲಮಿತಿ ಎಂಬುದು ಏನಾದರೂ ಇದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಹಣಕಾಸಿನ ಅನುಕೂಲತೆ ಉಂಟಾದಾಗಲೆಲ್ಲ.

ಶ್ರೀ ವೀರಪ್ಪನವರು:- ಅನುಕೂಲಕರ ಕಟ್ಟಡಗಳಿಲ್ಲವೆಂಬುದಕ್ಕಾಗಿ ಬಹು ಸಂಖ್ಯೆಯಲ್ಲಿ ಮಾಧ್ಯಮಿಕ ಶಾಲೆಗಳು ಸೂಕ್ತವಾಗಿ ಕಾರ್ಯ ನಿರ್ವಹಿಸುತ್ತಿಲ್ಲ ಎಂಬುದು ನಿಜವೇ ? ಆ ಬಗ್ಗೆ ನಾನು ತಿಳಿದುಕೊಳ್ಳಬೇಕಾಗಿದೆ.

ಶ್ರೀ ಟಿ. ಸಿದ್ದಲಿಂಗಯ್ಯ:- ನನಗೆ ಅದರ ಪರಿಣಾಮಗಳು ತಿಳಿದಿಲ್ಲ. ಆದರೂ ಸಹ ಅನೇಕ ಶಾಲೆಗಳಿಗೆ ಕಟ್ಟಡಗಳಿಲ್ಲದಿರುವುದು ತಿಳಿದು ಬಂದಿದೆ.

ಶ್ರೀ ವೀರಪ್ಪನವರು:- ಶಾಲಾ ಕಟ್ಟಡಗಳ ನಿರ್ಮಾಣವನ್ನು ಅವುಗಳ ನಿರ್ಮಾಣ ಹಂತದಲ್ಲಿದ್ದರೂ ಸಹ ಕೂಡಲೇ ನಿಲ್ಲಿಸತಕ್ಕದ್ದೆಂಬ ನಿರ್ದೇಶನವಿರುವ ಶಾಲೆಗಳಿಗೆ ಸಂಬಂಧಪಟ್ಟಂತಹ ಆದೇಶ ಹೊರಡಿಸಿರುವುದು ನಿಜ ಸಂಗತಿಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಅಂಥಹ ಕೆಲವು ಪ್ರಕರಣಗಳೂ ಇವೆ.

ಶ್ರೀ ವೀರಪ್ಪನವರು:- ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಾಲಾ ಕಟ್ಟಡಗಳ ನಿರ್ಮಾಣ ಕಾರ್ಯವನ್ನು ಅವುಗಳು ಯಾವಹಂತದಲ್ಲಿದ್ದರೂ ಕೂಡಲೇ ನಿಲ್ಲಿಸತಕ್ಕದ್ದೆಂಬ ಸಾಮಾನ್ಯ ಆದೇಶವಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಕೆಲವು ಪ್ರಕರಣಗಳಲ್ಲಿ ಹಾಗೆ ಮಾಡಲಾಗುತ್ತಿದೆ, ಎಲ್ಲಾ ಪ್ರಕರಣಗಳಲ್ಲೂ ಅಲ್ಲ.

ಶ್ರೀ ವೀರಪ್ಪನವರು:- ಹಾಗಾದರೆ ಸಾಮಾನ್ಯ ಆದೇಶವಿಲ್ಲವೇ ?

ಮಾನ್ಯ ಸಭಾಧ್ಯಕ್ಷರು:- ಕಟ್ಟಡಗಳ ಪ್ರಶ್ನೆಯು ಉದ್ಭವಿಸುವುದಿಲ್ಲ.

ಶ್ರೀ ಎಸ್. ಕರಿಯಪ್ಪ (ಬೆಂಗಳೂರು ಜಿಲ್ಲೆ):- ಈ ಇನ್‌ಕಂಪ್ಲೀಟ್ ಮಿಡ್ಲ್ ಸ್ಕೂಲುಗಳು ನಮ್ಮಲ್ಲಿ ಯಾವಾಗ ಪ್ರಾರಂಭವಾದದ್ದು ?

ಶ್ರೀ ಟಿ. ಸಿದ್ದಲಿಂಗಯ್ಯ:- ಈಚೆಗೆ 1942-43 ರಿಂದ.

ಶ್ರೀ ಎಸ್. ಕರಿಯಪ್ಪ:- ಹಾಗಾದರೆ ಇವಲ್ಲದೆ ನ್ಯೂ ಟೈಪ್ ಮಿಡ್ಲ್ ಸ್ಕೂಲುಗಳೆಂದು ಬೇರೆ ಇವೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಉತ್ತರ ಆಗಲೇ ಹೇಳಿದ್ದೇನೆ.

ಶ್ರೀ ಎಸ್. ಕರಿಯಪ್ಪ:- ಇವುಗಳಿಗೆ ಕಟ್ಟಡಗಳನ್ನು ಕಟ್ಟಿಸುವುದರಲ್ಲಿ ದಾನಿಗಳು ಎಷ್ಟು ಧರ್ಮದ್ರವ್ಯವನ್ನು ಕೊಟ್ಟಿದ್ದಾರೋ ಅಷ್ಟರಲ್ಲೇ ಕಟ್ಟಿಕೊಳ್ಳಬೇಕೆಂದು ಹೇಳಿದ್ದೀರಾ ?

ಶ್ರೀ ಟಿ. ಸಿದ್ದಲಿಂಗಯ್ಯ:- ಎಲ್ಲೆಲ್ಲಿ ಕಟ್ಟಡಗಳನ್ನು ಕಟ್ಟಬೇಕೆಂದು ಹೇಳಿ ಸರ್ಕಾರದ ಭಾಗದ ಕೋಟಾವನ್ನು ಕೊಡಬೇಕೆಂದು ಕೇಳಿದ್ದಾರೋ ಅವರಿಗೆ ಸಧ್ಯಕ್ಕೆ ಸರ್ಕಾರದವರು ಕೊಡುವುದಕ್ಕೆ ಸಾಧ್ಯವಿಲ್ಲವೆಂದು ಹೇಳಿ ಅವರೇ ಬೇಕಾದರೆ ಕಟ್ಟಿಕೊಳ್ಳಬಹುದೆಂದು ಹೇಳಿದ್ದೇವೆ.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು (ಮೈಸೂರು ಜಿಲ್ಲೆ):- ಈ ವರ್ಷ ಹೊಸದಾಗಿ ಮಿಡ್ಲ್ ಸ್ಕೂಲುಗಳನ್ನು, ಎಷ್ಟು ಪ್ರೈಮರಿ ಸ್ಕೂಲುಗಳನ್ನು ಮತ್ತು ಎಷ್ಟು ಹೈಸ್ಕೂಲುಗಳನ್ನು ಕೊಟ್ಟಿದ್ದೀರಿ ?

ಶ್ರೀ ಟಿ. ಸಿದ್ದಲಿಂಗಯ್ಯ:- ಈ ವರ್ಷಕ್ಕೆ ಸಂಬಂಧಪಟ್ಟ ಪಟ್ಟಿ ತರಿಸಿಲ್ಲ.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ನಾವು ಕೇಳಿದ್ದು ಪಟ್ಟಿಯನ್ನಲ್ಲ, ಹೊಸದಾಗಿ ತಾವು ಎಷ್ಟು ಮಂಜೂರು ಮಾಡಿದ್ದೀರಿ ಎಂಬುದನ್ನು ?

ಶ್ರೀ ಟಿ. ಸಿದ್ದಲಿಂಗಯ್ಯ:- ಅದನ್ನು ಹೇಳುವುದಕ್ಕೆ ಪಟ್ಟಿ ಈಗ ನನ್ನಲ್ಲಿಲ್ಲವೆಂದು ಹೇಳಬೇಕಾಗಿದೆ.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ಹೈಸ್ಕೂಲುಗಳನ್ನು ಎಷ್ಟು ಮಂಜೂರು ಮಾಡಿದ್ದೀರಿ?

ಶ್ರೀ ಟಿ. ಸಿದ್ದಲಿಂಗಯ್ಯ:- ಅದಕ್ಕೂ ನಿರ್ದಿಷ್ಟವಾಗಿ ಹೇಳಬೇಕಾದರೆ ನೋಟೀಸು ಬೇಕು. ಸುಮಾರು 15-16 ಆಗಿರಬಹುದು.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ಹೈಸ್ಕೂಲುಗಳು ಮಂಜೂರಾದ ಸರ್ಕಾರೀ ಹುಕುಂ ಆಗಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಮಂಜೂರಾಗಿರುವುದು ಸುಮಾರು 5-6 ಇರಬಹುದು.

7. 2165

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ಅವು ಸರ್ಕಾರಿ ಹೈಸ್ಕೂಲುಗಳೇ, ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲುಗಳೇ ಅಥವಾ ಮುನ್ಸಿಪಲ್ ಹೈಸ್ಕೂಲುಗಳೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಸರ್ಕಾರಿ ಹೈಸ್ಕೂಲುಗಳು ಯಾವುವೂ ಇಲ್ಲ.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ಸರ್ಕಾರಿ ಹೈಸ್ಕೂಲು ಒಂದೂ ಇಲ್ಲವೆಂದ ಮೇಲೆ ಇವು ಯಾವ ಹೈಸ್ಕೂಲುಗಳು ?

ಶ್ರೀ ಟಿ. ಸಿದ್ದಲಿಂಗಯ್ಯ:- ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲುಗಳು ಅಥವಾ ಮುನ್ಸಿಪಲ್ ಹೈಸ್ಕೂಲುಗಳಾಗಿರಬೇಕು.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ಹತ್ತು ಸರ್ಕಾರಿ ದ್ರವ್ಯ ಸಹಾಯ ಪಡೆಯದೇ ಇರುವ ಹೈಸ್ಕೂಲುಗಳಿವೆಯೆಂದು ಹೇಳಿದ್ದೀರಿ. ಸರ್ಕಾರಿ ದ್ರವ್ಯ ಪಡೆಯದ ಎಂದರೆ ತಮ್ಮನ್ನು ಸಹಾಯ ದ್ರವ್ಯ ಕೇಳದೇ ತಾವೇ ಮಾಡಿಕೊಂಡಿರುವಂತಹವುಗಳೇ ಅಥವಾ ತಮ್ಮನ್ನು ಕೇಳಿಯೂ ತಾವು ಸಹಾಯ ಕೊಡದಿರುವಂತಹವುಗಳೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಕೇಳದಿರುವುವುಗಳೂ ಒಂದೆರಡಿದೆ. ಮಿಕ್ಕವರು ಕೇಳಿಯೂ ಸರ್ಕಾರದವರು ಕೊಟ್ಟಿಲ್ಲ.

ಶ್ರೀ ಹೆಚ್.ಎಂ. ಚನ್ನಬಸವಪ್ಪನವರು:- ಅವುಗಳನ್ನು ರೆಕಗ್ನೈಸ್ ಮಾಡಿದ್ದೀರಾ ?

ಶ್ರೀ ಟಿ. ಸಿದ್ದಲಿಂಗಯ್ಯ:- ಕೆಲವನ್ನು ರೆಕಗ್ನೈಸ್ ಮಾಡಿದೆ. ಬಹುಶಃ ಕೊನೆಗೆ ಎಲ್ಲವನ್ನೂ ರೆಕಗ್ನೈಸ್ ಮಾಡಲೇಬೇಕಾಗುತ್ತದೆ.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ಕೆಲವನ್ನು ಮಾತ್ರ ಮಾಡೋಣವಾಗಿದೆಯೆಂದು ತಾವು ಹೇಳೋಣವಾಯಿತು. ಹಾಗಾದರೆ unrecognised High Schools ನಲ್ಲಿರತಕ್ಕ ಹುಡುಗರು ಪರೀಕ್ಷೆಗೆ ಹೇಗೆ ಕುಳಿತುಕೊಳ್ಳುತ್ತಾರೆ.

ಶ್ರೀ ಟಿ. ಸಿದ್ದಲಿಂಗಯ್ಯ:- ವಿದ್ಯಾರ್ಥಿಗಳಿಗಾಗಿರುವ ಆ ಅನಾನುಕೂಲತೆಯ ದೃಷ್ಟಿಯಿಂದಲೇ ಸರ್ಕಾರ ಶಾಲೆಗಳನ್ನು ಮಾನ್ಯ ಮಾಡಲು ಉದ್ದೇಶಿಸಿದೆ. ಅವು ವಿದ್ಯಾರ್ಥಿಗಳಿಗೆ ಸರಿಯಾದ ಶಿಕ್ಷಣ ನೀಡುತ್ತಿದ್ದರೆ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಏನೇ ತೊಂದರೆ ಆಗಲಾರದು.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ಆ ಡಿಸ್ಟ್ರಿಕ್ಟ್ ಬೋರ್ಡ್ ಹೈಸ್ಕೂಲುಗಳನ್ನು ತಾವು ಮಂಜೂರು ಮಾಡುವುದು ಚಾಲ್ತಿ ಸಾಲು ಪ್ರಾರಂಭವಾಗುವುದಕ್ಕೆ ಮುಂಚಿತವಾಗಿಯೋ ಅಥವಾ ಅದು ಪ್ರಾರಂಭವಾದ ಮೂರು ನಾಲ್ಕು ತಿಂಗಳ ನಂತರವೋ ?

ಶ್ರೀ ಟಿ. ಸಿದ್ದಲಿಂಗಯ್ಯ:- ಸಾಧಾರಣವಾಗಿ ಅದನ್ನು ವರ್ಷಾರಂಭ ವಾಗುವುದರೊಳಗಾಗಿಯೇ ಮಂಜೂರು ಮಾಡಬೇಕಾಗುತ್ತದೆ. ಇದು ಸರಿಯಾದ ನೀತಿಯಾಗಿದೆ. ನಾನು ಒಪ್ಪುತ್ತೇನೆ.

ಶ್ರೀ ಹೆಚ್.ಎಂ. ಚನ್ನಬಸಪ್ಪನವರು:- ಶಾಲೆಗಳಿಗೆ ಶಿಕ್ಷಣ ವರ್ಷ ಪ್ರಾರಂಭವಾದ ಆರು ತಿಂಗಳು, ಎಂಟು ತಿಂಗಳು, ಒಂದು ವರ್ಷದ ನಂತರ ಮಂಜೂರಾತಿ ನೀಡಲಾಗಿದೆ ಎಂಬುದು ಸರ್ಕಾರಕ್ಕೆ ತಿಳಿದಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಜಿಲ್ಲಾ ಬೋರ್ಡಿನವರು ಎಷ್ಟೆಷ್ಟರಮಟ್ಟಿಗೆ ಅವರೆಲ್ಲರೂ ಬಂದು ಒತ್ತಾಯಮಾಡುತ್ತಾರೋ ಅದರ ಪ್ರಕಾರ ಅವುಗಳನ್ನು ಮಂಜೂರು ಮಾಡಲಾಗುತ್ತದೆ.

ಶ್ರೀ ಎಲ್. ಸಿದ್ದಪ್ಪ (ಶಿವಮೊಗ್ಗ ಜಿಲ್ಲೆ - ಸಾಮಾನ್ಯ):- ಅವರು ನಿರ್ದಿಷ್ಟ ಜಿಲ್ಲಾ ಬೋರ್ಡಿನ ಅಧ್ಯಕ್ಷರಿಗೆ ಸಂಭೋದಿಸಿ ಹೇಳುತ್ತಿದ್ದಾರೆಯೇನು ?

ಶ್ರೀ ಎಸ್. ರಂಗರಾಮಯ್ಯನವರು (ಮೈಸೂರು ಜಿಲ್ಲೆ):- ಮುನಿಸಿಪಾಲಿಟಿಗಳು ಮತ್ತು ಜಿಲ್ಲಾ ಬೋರ್ಡುಗಳವರು ಈ ಹೈಸ್ಕೂಲುಗಳನ್ನು ನಡೆಸುವುದಕ್ಕೆ ನಮ್ಮಿಂದ ಸಾಧ್ಯವಿಲ್ಲ, ಇವುಗಳನ್ನೆಲ್ಲಾ ಸರ್ಕಾರದವರೇ ವಹಿಸಿಕೊಳ್ಳಬೇಕೆಂದು ಹೇಳಿ ತಮಗೆ ಅವರಿಂದ ಅರ್ಜಿಗಳೇನಾದರೂ ಬಂದಿದೆಯೇ ಸ್ವಾಮಿ ?

ಶ್ರೀ ಸಭಾಧ್ಯಕ್ಷರು:- ಆ ಪೂರಕ ಪ್ರಶ್ನೆ ಉದ್ಭವಿಸುವುದಿಲ್ಲ.

ಶ್ರೀ ಡಿ.ಎಚ್. ಚಂದ್ರಶೇಖರಯ್ಯ (ಚಿತ್ರದುರ್ಗ ಜಿಲ್ಲೆ):- ನಮ್ಮ ಸಂಸ್ಥಾನದಲ್ಲಿ ಪ್ರಾಥಮಿಕ ಪಾಠಶಾಲೆಗಳನ್ನು ಪ್ರತಿವರ್ಷವೂ ಒಂದು ನಿರ್ದಿಷ್ಟವಾದ ಕ್ರಮದಲ್ಲಿ ಪ್ರಾರಂಭಿಸಬೇಕೆಂಬುದು ಸರ್ಕಾರದವರ ನೀತಿಯಾಗಿದೆಯಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಹೌದು.

ಶ್ರೀ ಡಿ.ಎಚ್. ಚಂದ್ರಶೇಖರಯ್ಯ :- ಈಗ ನಮ್ಮ ಸಂಸ್ಥಾನದಲ್ಲಿರುವ 16,434 ಗ್ರಾಮಗಳ ಪೈಕಿ 9,420 ಗ್ರಾಮಗಳಲ್ಲಿ ಮಾತ್ರ ಸರ್ಕಾರಿ ಪ್ರೈಮರಿ ಸ್ಕೂಲುಗಳಿದ್ದು ಬಾಕಿ ಗ್ರಾಮಗಳಲ್ಲಿ ಪಾಠಶಾಲೆಗಳೇ ಇರುವುದಿಲ್ಲವೆಂಬ ಅಂಶ ಸರ್ಕಾರದವರ ಗಮನಕ್ಕೆ ಬಂದಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಬಂದಿದೆ. ಆದರೆ ಅಷ್ಟು ಇರಲಾರವು. ಆ ಸಂಖ್ಯೆ ಸರಿಯಾಗಿಲ್ಲ.

ಶ್ರೀ ಡಿ.ಎಚ್. ಚಂದ್ರಶೇಖರಯ್ಯ :- ಸಂಸ್ಥಾನದಲ್ಲಿರುವ ಗ್ರಾಮಗಳಿಗೆಲ್ಲ ಪಾಠಶಾಲೆಗಳನ್ನು ಒದಗಿಸಲು ವರ್ಷ ವರ್ಷ 400 ಪಾಠಶಾಲೆಗಳಂತೆ ಸರ್ಕಾರದವರು ಕಳೆದ 8-9 ವರ್ಷಗಳಿಂದಲೂ ಮಂಜೂರು ಮಾಡುತ್ತ ಬಂದಿಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಆದುದರಿಂದಲೇ ಈಗ ಸುಮಾರು 9,000 ಪಾಠಶಾಲೆಗಳೂ ಮಂಜೂರಾಗಿರುವುದು.

ಶ್ರೀ ಡಿ.ಎಚ್. ಚಂದ್ರಶೇಖರಯ್ಯ :- ಅದರ ಪ್ರಕಾರ ಈಗ ತಾವು ಜಾರಿಗೆ ತರಲು ಸಾಧ್ಯವಾಗಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಸಾಧ್ಯವಾಗಿದೆ.

ಶ್ರೀ ಬಿ. ಚೆನ್ನಬೈರೇಗೌಡರು (ಬೆಂಗಳೂರು ಜಿಲ್ಲೆ):- ಈ ವರ್ಷ ತಾವು ಎಷ್ಟು ಪಕ್ಕಾ ಮಿಡಲ್ ಸ್ಕೂಲುಗಳು ಮಂಜೂರು ಮಾಡಿದ್ದೀರಿ ?

ಶ್ರೀ ಟಿ. ಸಿದ್ದಲಿಂಗಯ್ಯ:- ಸುಮಾರು 40 ಪಾಠಶಾಲೆಗಳನ್ನು ಮಂಜೂರು ಮಾಡಬೇಕೆಂದಿದ್ದೇವೆ. ಸಾಧಾರಣವಾಗಿ ಆ ಸಂಖ್ಯೆಯಲ್ಲೇ ಮಂಜೂರಾಗುತ್ತದೆ.

ಶ್ರೀ ಬಿ. ಚೆನ್ನಬೈರೇಗೌಡರು:- ಈ ಸಾಲಿನಲ್ಲಿ ಎಷ್ಟು ಪಾಠಶಾಲೆಗಳನ್ನು ಮಂಜೂರು ಮಾಡಲಾಯಿತು ?

ಶ್ರೀ ಟಿ. ಸಿದ್ದಲಿಂಗಯ್ಯ:- ನೋಟೀಸು.

ಶ್ರೀ ಬಿ. ಚೆನ್ನಬೈರೇಗೌಡರು:- 10,000 ಪಾಠಶಾಲೆಗಳಲ್ಲಿ ಎಷ್ಟು ಸರ್ಕಾರಿ ಕಟ್ಟಡದಲ್ಲಿವೆ ? ಎಷ್ಟು ಖಾಸಗಿ ಕಟ್ಟಡದಲ್ಲಿವೆ ?

ಶ್ರೀ ಟಿ. ಸಿದ್ದಲಿಂಗಯ್ಯ:- ನೋಟೀಸು.

ಶ್ರೀ ಬಿ. ಚೆನ್ನಬೈರೇಗೌಡರು:- ಆದಷ್ಟು ಬೇಗ ಈ ಬಾಡಿಗೆ ಕಟ್ಟಡಗಳಲ್ಲಿರುವ ಪಾಠಶಾಲೆಗಳಿಗಾದರೂ ಸರ್ಕಾರಿ ಕಟ್ಟಡಗಳನ್ನು ಒದಗಿಸಲು ಏರ್ಪಾಡು ಮಾಡುತ್ತೀರಾ ?

ಶ್ರೀ ಟಿ. ಸಿದ್ದಲಿಂಗಯ್ಯ:- ಮಾಡುತ್ತೇವೆ.

ಶ್ರೀ ಬಿ. ಚೆನ್ನಬೈರೇಗೌಡರು:- ಈಗ ತಾವು ಮಂಜೂರು ಮಾಡಿರುವ ಪ್ರೈಮರಿ ಮತ್ತು ಮಿಡ್ಲ್ ಪಾಠಶಾಲೆಗಳಲ್ಲಿ ಬಾಲಕರಿಗೆ ಮರದ ಸಾಮಾನುಗಳನ್ನೇ ಒದಗಿಸಿಲ್ಲವೆಂಬುದು ತಮ್ಮ ಗಮನಕ್ಕೆ ಬಂದಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಇಲ್ಲ; ತಿಳಿಸಿದರೆ ಅವುಗಳಿಗೆ ಒದಗಿಸಲು ಏರ್ಪಾಡು ಮಾಡುತ್ತೇನೆ.

ಶ್ರೀ ಬಿ. ಚೆನ್ನಬೈರೇಗೌಡರು:- ಇನ್ನೆಷ್ಟು ವರ್ಷಗಳಲ್ಲಿ ಕೊಡುವುದಕ್ಕೆ ಏರ್ಪಾಡು ಮಾಡುತ್ತೀರಿ ಸ್ವಾಮಿ ?

ಶ್ರೀ ಟಿ. ಸಿದ್ದಲಿಂಗಯ್ಯ:- ಆ ಪ್ರಶ್ನೆ ಉದ್ಭವಿಸುವುದಿಲ್ಲ.

ಶ್ರೀ ಬಿ. ಚೆನ್ನಬೈರೇಗೌಡರು:- 1949-50ಕ್ಕೆ 16 ಸ್ಕೂಲುಗಳನ್ನು ಮಂಜೂರು ಮಾಡಲಾಗಿನೆಯೆಂದು ಪ್ರಶ್ನೋತ್ತರ ಪುಸ್ತಕದ III ಭಾಗದಲ್ಲಿಯೂ ಮತ್ತು 19 ಪಾಠಶಾಲೆಗಳನ್ನು ಮಂಜೂರು ಮಾಡಲಾಗಿದೆಯೆಂದು ಪ್ರಶ್ನೋತ್ತರಗಳ IV ಭಾಗದಲ್ಲಿಯೂ ನಮೂದಿಸಲಾಗಿದೆ. ಈ ಪೈಕಿ 16 ಹೈಸ್ಕೂಲುಗಳೆಂಬುದು ನಿಜವೋ ಅಥವಾ 19 ಹೈಸ್ಕೂಲುಗಳೆಂಬುದು ನಿಜವ್ವೋ ?

ಶ್ರೀ ಟಿ. ಸಿದ್ದಲಿಂಗಯ್ಯ:- ನಾವು ಕೆಲವನ್ನು ಕೊಟ್ಟಿದ್ದೇವೆ. ಇನ್ನು ಕೆಲವನ್ನು ಅವರೇ ಏರ್ಪಾಡು ಮಾಡಿಕೊಂಡಿದ್ದಾರೆ.

ಶ್ರೀ ಬಿ. ಚೆನ್ನಬೈರೇಗೌಡರು:- ಈ ಎರಡಲ್ಲಿ ಯಾವುದು ಸರಿಯಾದದ್ದು ?

ಶ್ರೀ ಟಿ. ಸಿದ್ದಲಿಂಗಯ್ಯ:- ಅವುಗಳೆರಡೂ ಬೇರೆ ಬೇರೆ ಪ್ರಶ್ನೆಗಳು. ಆದುದರಿಂದ ಬೇರೆ ಬೇರೆ ಉತ್ತರಗಳನ್ನು ಒದಗಿಸಲಾಗಿದೆ.

ಶ್ರೀ ಎ. ಭೀಮಪ್ಪ ನಾಯಕ (ಚಿತ್ರದುರ್ಗ ಜಿಲ್ಲೆ):- ಈ ವರ್ಷ ತಾವೇನಾದರೂ ಹೊಸದಾಗಿ ನ್ಯೂ ಟೈಪ್ ಮಿಡ್ಲ್ ಸ್ಕೂಲುಗಳನ್ನು ಕೊಟ್ಟಿದ್ದೀರಾ ಸ್ವಾಮಿ ?

ಶ್ರೀ ಟಿ. ಸಿದ್ದಲಿಂಗಯ್ಯ:- ಕೊಟ್ಟಿದ್ದೇವೆ.

ಶ್ರೀ ಎ. ಭೀಮಪ್ಪ ನಾಯಕ:- ಎಷ್ಟು.

ಶ್ರೀ ಟಿ. ಸಿದ್ದಲಿಂಗಯ್ಯ:- ನೋಟೀಸು.

ಶ್ರೀ ಎ. ಭೀಮಪ್ಪ ನಾಯಕ:- ಸುಮಾರು 50ಕ್ಕೆ ಮೇಲ್ಪಟ್ಟು 60ರ ಒಳಗೇ ಇರಬಹುದಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಹೌದು.

ಶ್ರೀ ಎ. ಭೀಮಪ್ಪ ನಾಯಕ:- ಸರ್ಕಾರದವರು ಈ ಸಂಬಂಧವಾಗಿ ಎಷ್ಟು ತಾವು ಕೋಟಾ ಕೊಡಬೇಕಾಗಿತ್ತೋ ಅಷ್ಟನ್ನು ಈ ಹಣಕಾಸಿನ ಮುಗ್ಗಟ್ಟಿನಿಂದ ಈಗ ಕೊಡುತ್ತಿಲ್ಲ ಅಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಈಗಲೂ ಕೊಡುತ್ತಿದ್ದೇವೆ.

ಶ್ರೀ ಎ. ಭೀಮಪ್ಪ ನಾಯಕ:- ಹಾಗೆ ಹಣವನ್ನು ತಮಗೆ ಕೊಡಲಿಕ್ಕಾಗದಿದ್ದ ಭಾಗದಲ್ಲಿ ಖಾಸಗಿ ಜನರು ತಮ್ಮಿಂದ ಮುಂಗಡವಾಗಿ ತೆಗೆದುಕೊಂಡಿರುವ ಮೊಬಲಗನ್ನಾದರೂ ವಾಪಸ್ಸು ತೆಗೆದುಕೊಳ್ಳಲು ಅವಕಾಶ ಮಾಡಿಕೊಡುತ್ತೀರಾ ?

ಶ್ರೀ ಟಿ. ಸಿದ್ದಲಿಂಗಯ್ಯ:- ಎಲ್ಲೆಲ್ಲಿ ಅನಾನುಕೂಲತೆ ಹೆಚ್ಚಾಗಿದೆಯೋ ಅಲ್ಲಿಗೇ ಮೊದಲು ಸಹಾಯ ನೀಡುವಂತೆ ಏರ್ಪಾಡು ಮಾಡಲಾಗಿದೆ."

ಭಾರತದಲ್ಲಿ ಯುನಾನಿ ಮತ್ತು ಆಯುರ್ವೇದ ವೈದ್ಯ ಪದ್ಧತಿಗಳ ಅಭಿವೃದ್ಧಿ

"ಪ್ರಶ್ನೆ 86: ಜನಾಬ್ ಸೈಯಿದ್ ಅಬ್ದುಲ್ ರಹಮಾನ್‌ರವರು (ಚಿಕ್ಕಮಗಳೂರು-ಶಿವಮೊಗ್ಗ ಮುಸ್ಲಿಂ):- ಘನ ಸರ್ಕಾರದವರು ದಯವಿಟ್ಟು ಈ ಮುಂದಿನ ಪ್ರಶ್ನೆಗಳಿಗೆ ಉತ್ತರಿಸಬೇಕೆಂದು ಪ್ರಾರ್ಥಿಸುತ್ತೇನೆ.

ಎ. ಭಾರತದಲ್ಲಿ ಯುನಾನಿ ಹಾಗೂ ಆಯುರ್ವೇದ ವೈದ್ಯ ಪದ್ಧತಿಗಳ ಅಭಿವೃದ್ಧಿಯನ್ನು ಉತ್ತೇಜಿಸಲು 1950ರ ಫೆಬ್ರವರಿಯಲ್ಲಿ ಒಂದು ಸಮ್ಮೇಳನ ನಡೆದುದು ಸರ್ಕಾರಕ್ಕೆ ತಿಳಿದಿದೆಯೋ ?

ಬಿ. ಸಮ್ಮೇಳನದಲ್ಲಿ ಅಂಗೀಕರಿಸಿದ ತೀರ್ಮಾನಗಳು ಅವುಗಳ ಮೇಲೆ ಕ್ರಮ ಕೈಗೊಳ್ಳುವುದಕ್ಕಾಗಿ ಸರ್ಕಾರಕ್ಕೆ ಬಂದಿವೆಯೇ ?

ಸಿ. ಅವರು ಕೈಗೊಂಡ ಕ್ರಮಗಳೇನು ?

ಶ್ರೀ ಟಿ. ಸಿದ್ದಲಿಂಗಯ್ಯ (ಶಿಕ್ಷಣ ಮತ್ತು ಸಾರ್ವಜನಿಕ ಆರೋಗ್ಯ):-

ಎ. ಹೌದು.

ಬಿ. ಹೌದು.

ಸಿ. ಭಾರತೀಯ ವೈದ್ಯ ಪದ್ಧತಿಯ ಇಲಾಖೆಯ ರಚನೆ ನಿರ್ದೇಶಕರ ಮತ್ತು ಸಹಾಯಕ ನಿರ್ದೇಶಕರ ನೇಮಕ ಆಯುರ್ವೇದ ಹಾಗೂ ಯುನಾನಿ ಆಸ್ಪತ್ರೆಗಳನ್ನು ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸುವುದು, ಮತ್ತು ಆಯುರ್ವೇದ ಮತ್ತು ಯುನಾನಿ ಔಷಧಾಲಯಗಳನ್ನು ಸ್ಥಾಪಿಸುವುದಕ್ಕೆ ತೀರ್ಮಾನಗಳು ಸಂಬಂಧಪಡುವುದರಿಂದ ಭಾರತೀಯ ವೈದ್ಯ ಪದ್ಧತಿಯ ಕೇಂದ್ರ ಮಂಡಳಿಯ ಸಭೆಯ ಮುಂದೆ ಶೀಘ್ರದಲ್ಲಿಯೇ ಮಂಡಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಶ್ರೀ **ಜನಾಬ್ ಸೈಯದ್ ಅಬ್ದುರ್ ರಹಮಾನ್**:- ಮಾನ್ಯ ಆರೋಗ್ಯ ಸಚಿವರು ತೀರ್ಮಾನಗಳ ಪ್ರತಿಯನ್ನು ದಯವಿಟ್ಟು ಒದಗಿಸಬೇಕೆಂದು ಪ್ರಾರ್ಥಿಸುತ್ತೇನೆ.

ಶ್ರೀ **ಟಿ. ಸಿದ್ದಲಿಂಗಯ್ಯ**:- ಒಂದು ಸಾರ್ವಜನಿಕ ಸಭೆಯಲ್ಲಿ ಕೈಗೊಂಡ ತೀರ್ಮಾನಗಳ ಪ್ರತಿಯನ್ನು ಸರ್ಕಾರವು ಒದಗಿಸಬೇಕೆಂಬುದು ಸರಿಯಲ್ಲವೆಂದು ನನ್ನ ಅಭಿಪ್ರಾಯ.

ಶ್ರೀ **ಜನಾಬ್ ಸೈಯದ್ ಅಬ್ದುರ್ ರಹಮಾನ್**:- ಸಮ್ಮೇಳನದಲ್ಲಿ ಕೈಗೊಂಡ ತೀರ್ಮಾನಗಳನ್ನು ಯಥಾವತ್ತಾಗಿ ಸದಸ್ಯರು ತಿಳಿದುಕೊಳ್ಳಲು ಸಾಧ್ಯವಾಗುವಂತೆ ಮಾಡಬೇಕೆಂದು ನಾನು ವಿನಂತಿಸಿಕೊಂಡಿದ್ದೆ.

ಶ್ರೀ **ಟಿ. ಸಿದ್ದಲಿಂಗಯ್ಯ**:- ಅಂತಹ ಸ್ವರೂಪದ ತೀರ್ಮಾನಗಳನ್ನು ಒದಗಿಸುವುದು ಸರ್ಕಾದ ಕೆಲಸವಲ್ಲವೆಂದು ನಾನು ತಿಳಿದಿದ್ದೇನೆ.

ಶ್ರೀ **ಜನಾಬ್ ಸೈಯದ್ ಅಬ್ದುರ್ ರಹಮಾನ್**:- ಮಾನ್ಯ ಸಚಿವರು ಹೀಗೆ ಮಾಡಬಹುದು.

ಶ್ರೀ **ಟಿ. ಸಿದ್ದಲಿಂಗಯ್ಯ**:- ಇದು ಅಗತ್ಯವೆಂದು ನಾನು ಭಾವಿಸುವುದಿಲ್ಲ.

ಶ್ರೀ **ಜನಾಬ್ ಸೈಯದ್ ಅಬ್ದುರ್ ರಹಮಾನ್**:- ಭಾರತೀಯ ವೈದ್ಯ ಪದ್ಧತಿ ಇಲಾಖೆಯ ರಚನೆ, ವೈದ್ಯರುಗಳ ನೇಮಕ ಮುಂತಾದವುಗಳಿಗೆ ಸಂಬಂಧಪಡುವ ತೀರ್ಮಾನಕ್ಕೆ ಸಂಬಂಧಿಸಿದಂತೆ, ವಿಷಯಗಳನ್ನು ಭಾರತೀಯ ವೈದ್ಯ ಪದ್ಧತಿಯ ಕೇಂದ್ರ ಮಂಡಳಿಯ ಮುಂದೆ ಶೀಘ್ರದಲ್ಲಿಯೇ ಮಂಡಿಸಲಾಗುವುದೆಂದು ತಿಳಿಸಿದ್ದೀರಿ. ಆದರೆ ಸರ್ಕಾರವೇ ಈ ವಿಷಯಗಳನ್ನು ಪರಿಶೀಲಿಸುವ ಸ್ಥಿತಿಯಲ್ಲಿಲ್ಲದಿದ್ದರೆ ಹೇಗೆ ?

ಶ್ರೀ ಟಿ. ಸಿದ್ದಲಿಂಗಯ್ಯ:- ಇದೊಂದು ರೀತಿಯಲ್ಲಿ ಕಲಬೆರಕೆ ಇದ್ದಹಾಗೆ. ಇಡೀ ಭಾರತಕ್ಕೆ ಒಂದು ಸಮಗ್ರ ಪದ್ಧತಿ ಇರಬೇಕೆಂಬುದೇ ಒಂದು ವಿಚಾರವಾಗಿದೆ. ಆ ಹಿನ್ನೆಲೆಯಲ್ಲಿ ನಾವು ಈ ವಿಷಯವನ್ನು ಪರಿಶೀಲಿಸಬೇಕಾಗಿದೆ. ಈ ವೈದ್ಯ ಪದ್ಧತಿಗಳ ಸಂಬಂಧದಲ್ಲಿ ಇತರ ರಾಜ್ಯಗಳನ್ನು ಬಿಟ್ಟು ಮೈಸೂರು ರಾಜ್ಯ ಒಂದೇ ಅಂತಿಮ ತೀರ್ಮಾನ ಕೈಗೊಳ್ಳಲು ಸಾಧ್ಯವಿಲ್ಲ.

ಶ್ರೀ ಜನಾಬ್ ಸೈಯದ್ ಅಬ್ದುರ್ ರಹಮಾನ್:- ಮಾನ್ಯರೆ, ತಾವು ಇದನ್ನೂ ಸಹ ಏಕೀಕರಣಗೊಳಿಸಲು ಉದ್ದೇಶಿಸಿದ್ದೀರಾ ? ಸೇವೆಗಳನ್ನೂ ಏಕೀಕರಣಗೊಳಿಸುವ ಪ್ರಶ್ನೆಗಳೂ ಇದ್ದವು.

ಶ್ರೀ ಟಿ. ಸಿದ್ದಲಿಂಗಯ್ಯ:- ವ್ಯವಸ್ಥೆಯನ್ನು ಏಕೀಕರಣಗೊಳಿಸುವುದು ಸೇವೆಗಳನ್ನು ಏಕೀಕರಣಗೊಳಿಸುವುದಕ್ಕಿಂತ ಭಿನ್ನವಾಗಿದೆ.

ಶ್ರೀ ಜನಾಬ್ ಸೈಯದ್ ಅಬ್ದುರ್ ರಹಮಾನ್:- ಮಾನ್ಯರೆ, ಭಾರತೀಯ ವೈದ್ಯ ಪದ್ಧತಿ ಇಲಾಖೆಯ ರಚನೆ ಮುಂತಾದಂತಹ ವಿಷಯಗಳನ್ನು ಅಖಿಲ ಭಾರತ ದೇಶೀಯ ವೈದ್ಯಕೀಯ ಪರಿಷತ್ತನ್ನು ರಚಿಸುವುದಕ್ಕಾಗಿ ಭಾರತ ಸರ್ಕಾರಕ್ಕೆ ಕಳುಹಿಸಿಕೊಡಬೇಕೆಂದು ತೀರ್ಮಾನಿಸಲಾಗಿದೆಯಲ್ಲವೇ ? ಈ ವಿಷಯದಲ್ಲಿ ಮೈಸೂರು ಸರ್ಕಾರವು, ಭಾರತ ಸರ್ಕಾರವನ್ನು ಒತ್ತಾಯಿಸುವುದಿಲ್ಲವೇ ?

ಶ್ರೀ ಟಿ. ಸಿದ್ದಲಿಂಗಯ್ಯ:- ಇದು ಈಗಾಗಲೇ ಸರ್ಕಾರದ ಪರಿಶೀಲನೆಯಲ್ಲಿದೆ. ಇತ್ತೀಚಿಗೆ ಒಂದು ಸಮ್ಮೇಳನ ನಡೆಯಿತು. ಸಮ್ಮೇಳನದ ಫಲಿತಾಂಶಗಳನ್ನು ನಾವು ನಿರೀಕ್ಷಿಸುತ್ತಿದ್ದೇವೆ.

ಶ್ರೀ ಜನಾಬ್ ಸೈಯದ್ ಅಬ್ದುರ್ ರಹಮಾನ್:- ಬೆಂಗಳೂರಿನಲ್ಲಿರುವ ಜಯಚಾಮರಾಜೇಂದ್ರ ಸಂಸ್ಥೆಯ ಮಾದರಿಯಲ್ಲಿಯೇ, ಬೆಂಗಳೂರಿನ ಸಿವಿಲ್ ಪ್ರದೇಶಗಳಲ್ಲಿ ಯುನಾನಿ ಹಾಗೂ ಆಯುರ್ವೇದ ಆಸ್ಪತ್ರೆಗಳಿಗಾಗಿ ಬೇಡಿಕೆ ಹೆಚ್ಚುತ್ತಿರುವುದು ಮಾನ್ಯ ಸಚಿವರಿಗೆ ತಿಳಿದಿದೆಯೇ ? ಸಿವಿಲ್ ಪ್ರದೇಶದಲ್ಲಿಯೂ ಅದೇ ಸ್ವರೂಪದ ಒಂದು ಸಂಸ್ಥೆಯನ್ನು ಪ್ರಾರಂಭಿಸುವ ಸಾಧ್ಯತೆಯನ್ನು ಸರ್ಕಾರವು ಪರಿಶೀಲಿಸುವುದೋ ?

ಶ್ರೀ ಟಿ. ಸಿದ್ದಲಿಂಗಯ್ಯ:- ಪ್ರತಿಯೊಂದು ಕಡೆಯಲ್ಲಿ ಅಂತಹ ಒಂದೊಂದು ಆಸ್ಪತ್ರೆಗಾಗಿ ಬೇಡಿಕೆ ಇದೆ. ಆದರೆ ಈಗ ಬೆಂಗಳೂರು ನಗರದಲ್ಲಿ ಜಯಚಾಮರಾಜೇಂದ್ರ ಸಂಸ್ಥೆಯಂತಹ ಇನ್ನೊಂದು ಸಂಸ್ಥೆಯನ್ನು ಪ್ರಾರಂಭಿಸುವ ಉದ್ದೇಶವಿಲ್ಲ.

ಜನಾಬ್ ಸೈಯದ್ ಅಬ್ದುಲ್ ರಹಮಾನ್:- ಈಗಲಾದರೂ ಸರ್ಕಾರವು ಜನತೆಯ ಬೇಡಿಕೆಯನ್ನು ಪರಿಗಣಿಸಿ ಆ ದಿಸೆಯಲ್ಲಿ ಕ್ರಮ ಕೈಗೊಳ್ಳುವುದೇ ಮತ್ತು ಕೆಲವು ಸಮಯದಲ್ಲಿ ಸಿವಿಲ್ ಪ್ರದೇಶದಲ್ಲಿ ಅಂತಹ ಒಂದು ಆಸ್ಪತ್ರೆಯನ್ನು ತೆರೆಯಲಾಗುವುದೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಸರ್ಕಾರವು ಈ ವಿಷಯವನ್ನು ಸೂಕ್ತ ಕಾಲದಲ್ಲಿ ಪರಿಶೀಲನೆಗೆ ತೆಗೆದುಕೊಳ್ಳುವುದು.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಇಲ್ಲಿರುವ ಹಿರಿಯ (senior) ಹಕೀಂ ರವರ ವಿದ್ಯಾರ್ಹತೆಗೆ ಸಂಬಂಧಿಸಿದಂತೆ, ಆ ಹುದ್ದೆಗೆ ಅಂತಹ ವಿದ್ಯಾರ್ಹತೆ ಹೊಂದಿದ ವ್ಯಕ್ತಿಗಳನ್ನು ಮಾತ್ರ ನೇಮಕ ಮಾಡಬೇಕೆಂದು ತೀರ್ಮಾನ ತೆಗೆದುಕೊಳ್ಳಲಾಗಿತ್ತು. ಸರ್ಕಾರವು ಈ ತೀರ್ಮಾನವನ್ನು ಪರಿಗಣನೆಗೆ ತೆಗೆದುಕೊಂಡಿದೆಯೇ ಮತ್ತು ಅರ್ಹರಲ್ಲದ ವ್ಯಕ್ತಿಗಳು ಆ ಹುದ್ದೆಯನ್ನು ಧಾರಣ ಮಾಡಿಲ್ಲವೆಂಬುದನ್ನು ತಿಳಿದುಕೊಂಡಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಯಾವಾಗಲೂ ಹಾಗೆಯೇ ಮಾಡಲಾಗುತ್ತದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಅರ್ಹರಲ್ಲದ ವ್ಯಕ್ತಿಯನ್ನು ನೇಮಕ ಮಾಡಿದರೆ ಸಂಸ್ಥೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುವುದಿಲ್ಲವೆ?

ಸಭಾಧ್ಯಕ್ಷರು :- ಈ ಪ್ರಶ್ನೆ ಏಕೆ ಉದ್ಭವಿಸುತ್ತದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಅರ್ಹರಲ್ಲದ ವ್ಯಕ್ತಿಗಳು ಅಂತಹ ಹುದ್ದೆಗಳಿಗೆ ನೇಮಕರಾಗತಕ್ಕದಲ್ಲವೆಂಬ ತೀರ್ಮಾನ ಏಕೆ, ಸರ್ಕಾರವು ಅದನ್ನು ಪರಿಗಣಿಸುತ್ತದೆಯೇ......

ಸಭಾಧ್ಯಕ್ಷರು :- ಇದಕ್ಕೆ ಅವಕಾಶವಿದೆ ಎಂದು ನನಗೆ ಅನಿಸುವುದಿಲ್ಲ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಮಾನ್ಯರೆ, ನೇಮಕಗಳನ್ನು ಮಾಡುವಾಗ ಅಗತ್ಯಪಡಿಸಿದ ವಿದ್ಯಾರ್ಹತೆಗಳನ್ನು ಸರ್ಕಾರವು ಯಾವಾಗಲೂ ಪರಿಗಣನೆಗೆ ತೆಗೆದುಕೊಳ್ಳಬೇಕಲ್ಲವೇ, ಎಂಬುದೇ ನನ್ನ ಪ್ರಶ್ನೆ.

ಶ್ರೀ ಟಿ. ಸಿದ್ದಲಿಂಗಯ್ಯ :- ಅದರಲ್ಲಿ ಸಂಶಯವೇನಿದೆ. ಅರ್ಹ ವ್ಯಕ್ತಿಗಳನ್ನೇ ಯಾವಾಗಲೂ ನೇಮಕ ಮಾಡಲಾಗುತ್ತದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಈಗ ಸಂಸ್ಥೆಯಲ್ಲಿರುವ ಹಿರಿಯ ಹಕೀಮರು ವಿದ್ಯಾರ್ಹತೆಯನ್ನು ಪಡೆದಿದ್ದಾರೆಂಬುದನ್ನು ಪರಿಗಣಿಸಲಾಗಿದೆಯೇ ಎಂಬುದು ಪ್ರಶ್ನೆ.

ಶ್ರೀ ಟಿ. ಸಿದ್ದಲಿಂಗಯ್ಯ :- ಸಾಮಾನ್ಯ ಉತ್ತರವೇ ಈ ನಿರ್ದಿಷ್ಟ ಪ್ರಶ್ನೆಯ ಉತ್ತರವನ್ನು ಒಳಗೊಂಡಿದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ವಿಧಾನ ಸಭೆಯ ಕಳೆದ ಅಧಿವೇಶನದಲ್ಲಿ ಮಾನ್ಯ ಸಚಿವರು, ಮುಂದಿನ ವರ್ಷದಲ್ಲಿ ಯುನಾನಿ ಮತ್ತು ಆಯುರ್ವೇದ ಪದ್ಧತಿಗಳಿಗಾಗಿ ಹೆಚ್ಚಿನ ಹಣ ಒದಗಿಸಲಾಗುವುದೆಂದು ತಿಳಿಸಿದ್ದರಲ್ಲವೇ? ಮುಂದಿನ ವರ್ಷದಲ್ಲಿ ಹೆಚ್ಚಿನ ಹಣ ಒದಗಿಸುವ ವಿಷಯವನ್ನು ಸರ್ಕಾರವು ಪರಿಗಣಿಸುವುದೇ?

*****

ಶ್ರೀ ಟಿ. ಸಿದ್ದಲಿಂಗಯ್ಯ :- ಮುಂದಿನ ವರ್ಷ ನೋಡೋಣ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಮುಂದಿನ ವರ್ಷದಲ್ಲಿ ಈ ಉದ್ದೇಶಕ್ಕಾಗಿ ಹೆಚ್ಚಿನ ಹಣ ಏರ್ಪಾಟು ಮಾಡುವ ಸಾಧ್ಯತೆಗಳಿವೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಅಂತಹ ಭರವಸೆ ಇದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಹಿಂದಿನ ಸಚಿವರ ಅಧಿಕಾರಾವಧಿಯಲ್ಲಿ, ದೇಶೀಯ ವೈದ್ಯ ಪದ್ಧತಿಯ ವಿಷಯದಲ್ಲಿ ಪರಾಮರ್ಶನ ಮಾಡಲು ಒಂದು ಸಮಿತಿಯು ರಚಿತವಾಗಿತ್ತೆನ್ನುವುದು ಮಾನ್ಯ ಸಚಿವರಿಗೆ ತಿಳಿದಿದೆಯೇ? ಹಾಗಿದ್ದರೆ ಆ ಸಮಿತಿಯು ಏನಾಯಿತು.

ಶ್ರೀ ಟಿ. ಸಿದ್ದಲಿಂಗಯ್ಯ :- ಈ ಪ್ರಶ್ನೆ ಈಗ ಏಕೆ ಉದ್ಭವಿಸುತ್ತದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಸಮರ್ಪಕವಾದ ಭಾರತೀಯ ವೈದ್ಯ ಪದ್ಧತಿಯನ್ನು ರೂಪಿಸುವುದಕ್ಕಾಗಿ ಒಂದು ಸಮಿತಿಯನ್ನು ನೇಮಕ ಮಾಡಲಾಗಿತ್ತು. .....

ಸಭಾಧ್ಯಕ್ಷರು :- ಮಾನ್ಯ ಸದಸ್ಯರು ಆ ವಿಷಯಕ್ಕೆ ಸಂಬಂಧಿಸಿದ ಯಾವ ಯಾವುದಾದರೂ ಪ್ರಶ್ನೆಯನ್ನಾದರೂ ಕೇಳಬಹುದೇನು ?

ಶ್ರೀ ಚಂದ್ರಶೇಖರಯ್ಯ (ಚಿತ್ರದುರ್ಗ ಜಿಲ್ಲೆ ಸಾಮಾನ್ಯ) :- ಭಾರತೀಯ ವೈದ್ಯ ಪದ್ಧತಿಯ ಪ್ರಾಂತೀಯ ಅಥವಾ ಕೇಂದ್ರ ಸರ್ಕಾರಕ್ಕೆ ಸಂಬಂಧಿಸಿದ ವಿಷಯವಾಗಿದೆಯೇ ಎಂಬುದನ್ನು ನಾನು ತಿಳಿಯಬಹುದೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಇದನ್ನು ನಾನು ಪರಿಶೀಲಿಸಿಲ್ಲ.

ಸಭಾಧ್ಯಕ್ಷರು :- ಭಾರತೀಯ ವೈದ್ಯ ಪದ್ಧತಿ ವಿಷಯವು ರಾಜ್ಯ ಅಥವಾ ಕೇಂದ್ರ ಸರ್ಕಾರಕ್ಕೆ ಸಂಬಂಧಪಟ್ಟಿದ್ದೇ ಎಂಬುದನ್ನು ಮಾನ್ಯ ಸದಸ್ಯರು ತಿಳಿಯಬಯಸುತ್ತಾರೆ.

ಶ್ರೀ ಟಿ. ಸಿದ್ದಲಿಂಗಯ್ಯ :- ಸಮಗ್ರ ಭಾರತದ ಮೇಲೆ ಪರಿಣಾಮ ಬೀರಿರುವ ಈ ವಿಷಯವು ರಾಜ್ಯ ಅಥವಾ ಕೇಂದ್ರ ಸರ್ಕಾರಕ್ಕೆ ಮಾತ್ರವೇ ಸಂಬಂಧಿಸಿತ್ತೆಂಬುದು ನನ್ನ ಅಭಿಪ್ರಾಯವಲ್ಲ.

ಶ್ರೀ ಡಿ.ಹೆಚ್. ಚಂದ್ರಶೇಖರಯ್ಯ :- ಮೈಸೂರು ರಾಜ್ಯದಲ್ಲಿಯೇ ಭಾರತೀಯ ವೈದ್ಯ ಪದ್ಧತಿಯನ್ನು ಯಾವ ಮಾದರಿಯಲ್ಲಿ ಅಭಿವೃದ್ಧಿಪಡಿಸಬೇಕೆಂಬುದನ್ನು ಏಕೆ ರೂಪಿಸಬಾರದು?

ಶ್ರೀ ಟಿ. ಸಿದ್ದಲಿಂಗಯ್ಯ :- ಹೌದು, ನಾವು ಆ ಎಲ್ಲ ವಿಷಯಗಳನ್ನು ಪರಿಶೀಲಿಸುತ್ತಿದ್ದೇವೆ.

ಶ್ರೀ ಡಿ.ಹೆಚ್. ಚಂದ್ರಶೇಖರಯ್ಯ :- ಹಾಗಿದ್ದರೆ ಜನತೆಯ ಹಾಗೂ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವವರ ದೃಷ್ಟಿಯಿಂದ ಭಾರತೀಯ ವೈದ್ಯ ಪದ್ಧತಿಯ ಮುಂದಿನ ಬೆಳವಣಿಗೆಯನ್ನು ಇನ್ನೂ ಅಭಿವೃದ್ಧಿ ಪಡಿಸುವುದಕ್ಕಾಗಿ ಈಗಾಗಲೇ ಕೈಗೊಂಡ ಕ್ರಮವನ್ನು ಅನುಷ್ಠಾನಗೊಳಿಸಲು ಸರ್ಕಾರವು ಕ್ರಮ ಕೈಗೊಳ್ಳಬಾರದೇಕೆ ?

ಶ್ರೀ ಟಿ. ಸಿದ್ದಲಿಂಗಯ್ಯ :- ಇದನ್ನು ಪರಿಶೀಲಿಸಲಾಗುತ್ತದೆ."

*****

## ರಾಜ್ಯದಲ್ಲಿ ನಕಲಿ ವೈದ್ಯರು ವೃತ್ತಿ ನಡೆಸುವುದನ್ನು ತಡೆಗಟ್ಟುವ ವಿಷಯ

ಇಡೀ ದೇಶದಲ್ಲಿರುವಂತೆ ರಾಜ್ಯದಲ್ಲಿ ನಕಲಿ ವೈದ್ಯರುಗಳಿದ್ದಾರೆ. ಅಂಥವರು ವೃತ್ತಿ ನಡೆಸುವುದನ್ನು ತಡೆಯುವ ಯಾವುದೇ ಕಾನೂನು ದೇಶದಲ್ಲಿ ಇಲ್ಲ. ಅಂಥ ಒಂದು ಕಾನೂನನ್ನು ತರುವುದು ಸಾಮಾಜಿಕ ಸುರಕ್ಷತೆಯ ದೃಷ್ಟಿಯಿಂದ ಅವಶ್ಯವೆನ್ನುವುದನ್ನು ಸರ್ಕಾರ ಒಪ್ಪುತ್ತದೆ. ಕಾನೂನು ಮಾಡುವ ಇರಾದೆಯೂ ಸರ್ಕಾರಕ್ಕಿದೆ. ಆದರೆ ಈ ನಕಲಿ ವೈದ್ಯರಿಂದ ಸಮಾಜಕ್ಕೆ ಹಾನಿಯಾಗುತ್ತಿದೆ ಎಂಬ ಬಗ್ಗೆ ಸರ್ಕಾರಕ್ಕೆ ಮಾಹಿತಿ ಇಲ್ಲ. ಬದಲಾಗಿ ವಿದ್ಯಾವಂತ ಡಾಕ್ಟರುಗಳು ಹೊರ ರಾಜ್ಯಗಳಿಗೆ ಹೊರದೇಶಗಳಿಗೆ ಹೋಗಿ ಬಿಡುವರಾದ್ದರಿಂದ ರಾಜ್ಯದಲ್ಲಿ ವೈದ್ಯರ ಕೊರತೆ ಏರ್ಪಟ್ಟಿದೆ. ನಕಲಿ ವೈದ್ಯರು ಸ್ವಲ್ಪ ಮಟ್ಟಿಗೆ ಈ ಕೊರತೆಯನ್ನು ನೀಗುತ್ತಿದ್ದಾರೆ. ಎಂಥಹ ವಿಪರ್ಯಾಸ !

ಈ ಪ್ರಶ್ನೆ ಸದನದಲ್ಲಿ ಮೂಡಿದಾಗ ಸಿದ್ದಲಿಂಗಯ್ಯನವರು ಉಭಯ ಸಂಕಟವನ್ನು ಸದನಕ್ಕೆ ಮನನ ಮಾಡಿಕೊಟ್ಟ ರೀತಿ ಹೀಗಿದೆ:

**"ಪ್ರಶ್ನೆ:- 116 ಶ್ರೀ ಕಡಿದಾಳ್ ಮಂಜಪ್ಪನವರು (ಶಿವಮೊಗ್ಗ ಜಿಲ್ಲೆ – ಜನರಲ್)**

ಈ ಪ್ರಶ್ನೆಗಳಿಗೆ ಘನ ಸರ್ಕಾರದವರು ದಯವಿಟ್ಟು ಉತ್ತರ ಕೊಡಬೇಕೆಂದು ಪ್ರಾರ್ಥನೆ:-

(ಎ) ರಾಜ್ಯದಲ್ಲಿ ಬಹುಸಂಖ್ಯೆಯ ನಕಲಿ ವೈದ್ಯರು, ವೈದ್ಯರುಗಳೆಂದು ವೃತ್ತಿ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

(ಬಿ) ಈ ಇಂಥ ನಕಲಿ ವೈದ್ಯರುಗಳನ್ನು ವೃತ್ತಿ ನಡೆಸದಂತೆ ತಡೆಯುವಲ್ಲಿ ಯಾವುದಾದರೂ ಕ್ರಮ ಕೈಗೊಂಡಿದೆಯೇ?

**ಉತ್ತರ: ಶ್ರೀ ಟಿ. ಸಿದ್ದಲಿಂಗಯ್ಯನವರು (ಶಿಕ್ಷಣ ಮತ್ತು ಜನಾರೋಗ್ಯ ಮಂತ್ರಿಗಳು):-**

(ಎ) ಕೆಲವರು ನಕಲಿ ವೈದ್ಯರು, ವೈದ್ಯರುಗಳ ಗೆಳೆಯರಾಗಿ ರಾಜ್ಯದಲ್ಲಿ ವೃತ್ತಿ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ.

(ಬಿ) ಇಂಥ ನಕಲಿ ವೈದ್ಯರುಗಳನ್ನು ವೃತ್ತಿ ನಡೆಸದಂತೆ ತಡೆಯುವ ಯಾವುದೇ ಕಾನೂನು ಪ್ರಸ್ತುತ ಇಲ್ಲ.

**ಶ್ರೀ ಕಡಿದಾಳ್ ಮಂಜಪ್ಪನವರು** :- ರಾಜ್ಯದಲ್ಲಿ ನಕಲಿ ವೈದ್ಯ ವೃತ್ತಿಯನ್ನು ಅಂದರೆ, ಆಲೋಪತಿ, ಆಯುರ್ವೇದ ಮತ್ತು ಯುನಾನಿ ಪದ್ದತಿಯ ವೃತ್ತಿ ನಡೆಸುತ್ತಿರುವವರ ಸಂಖ್ಯೆ ಎಷ್ಟು?

**ಶ್ರೀ ಟಿ. ಸಿದ್ದಲಿಂಗಯ್ಯನವರು** :- ಪ್ರಶ್ನೆಯನ್ನು ಕೇಳಿದವರೆ ದಯವಿಟ್ಟು ಈ ನಕಲಿ ವೈದ್ಯರುಗಳ ಸಂಖ್ಯೆಯ ಬಗ್ಗೆ ಮಾಹಿತಿ ನೀಡುವವರೆಂದು ಭಾವಿಸುತ್ತೇನೆ. ಏಕೆಂದರೆ, ಆದರ ಬಗ್ಗೆ ನನ್ನಲ್ಲಿ ಯಾವುದೇ ಮಾಹಿತಿ ಇಲ್ಲ.

**ಶ್ರೀ ಕಡಿದಾಳ್ ಮಂಜಪ್ಪನವರು** :- ಮಾನ್ಯ ಮಂತ್ರಿಗಳು ರಾಜ್ಯದಲ್ಲಿ ನಕಲಿ ವೈದ್ಯ ವೃತ್ತಿಯನ್ನು ನಡೆಸುತ್ತಿರುವವರ ಪಟ್ಟಿಯನ್ನು ತಯಾರಿಸಬೇಕೆಂದು ಇಚ್ಛಿಸುತ್ತೇನೆ.

ಶ್ರೀ ಟಿ. ಸಿದ್ದಲಿಂಗಯ್ಯನವರು :- ನಾವು ತನಿಖೆ ಮಾಡಬೇಕಾಗಿದೆ ಮತ್ತು ದೇಶದಲ್ಲಿ ದೊರೆಯಬಹುದಾದ ನಕಲಿ ವೈದ್ಯವೃತ್ತಿ ನಡೆಸುತ್ತಿರುವವರ ಸಂಖ್ಯೆಯನ್ನು ಕಂಡುಹಿಡಿಯಬೇಕು. ಮತ್ತು ಅದನ್ನು ತೊಡೆದುಹಾಕಲು ಪ್ರಯತ್ನಿಸಬೇಕಾಗಿದೆ.

ಶ್ರೀ **ಕಡಿದಾಳ್ ಮಂಜಪ್ಪನವರು** :- ಇದು ತಮ್ಮ ಕರ್ತವ್ಯವೆಂದು ಸರ್ಕಾರವು ಭಾವಿಸುವುದಿಲ್ಲವೇ?

ಶ್ರೀ ಜಿ.ಎ. ಆಚಾರ್ಯ (ಬೆಂಗಳೂರು ಜಿಲ್ಲೆ ಜನರಲ್) :- ನಕಲಿ ವೈದ್ಯ ಎಂದರೆ ಏನೆಂದು ನನಗೆ ಅರ್ಥವಾಗುತ್ತಿಲ್ಲ.

ಶ್ರೀ **ಕಡಿದಾಳ್ ಮಂಜಪ್ಪನವರು**:- ಅನರ್ಹ ವೈದ್ಯಕೀಯ ವೃತ್ತಿದಾರರೆಂದು ತಿಳಿಯಬಹುದು. ವೈದ್ಯಕೀಯ - ವೃತ್ತಿದಾರರ ನೋಂದಣಿ ಅಧಿನಿಯಮದಂತಹ ಯಾವುದಾದರೂ ಅಧಿನಿಯಮ ಇದಕ್ಕೆ ಇದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಅನರ್ಹ ವೈದ್ಯಕೀಯ ವೃತ್ತಿದಾರರಿದ್ದರೆ ಅದನ್ನು ತಡೆಯಲು ಅಧಿನಿಯಮವಿದೆ. ಆದರೆ ನಕಲಿ ವೈದ್ಯಕೀಯ ವೃತ್ತಿಯನ್ನು ನಡೆಸುತ್ತಿರುವವರನ್ನು ತಡೆಯುವಂತಹ ಯಾವುದೇ ಅಧಿನಿಯಮವಿಲ್ಲ.

ಶ್ರೀ **ಕಡಿದಾಳ್ ಮಂಜಪ್ಪನವರು** :- ನಕಲಿ ವೈದ್ಯ ವೃತ್ತಿಯನ್ನು ತಡೆಯುವಂತಹ ಯಾವುದಾದರೂ ಕಾನೂನು ನಮ್ಮ ನೆರೆಯ ರಾಜ್ಯಗಳಲ್ಲಿ ಇದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಈ ಬಗ್ಗೆ ಸರ್ಕಾರಕ್ಕೆ ತಿಳಿದಂತಿಲ್ಲ.

ಶ್ರೀ **ಕಡಿದಾಳ್ ಮಂಜಪ್ಪನವರು** :- ಈ ನಕಲಿ ವೈದ್ಯರು ನಡೆಸುವ ಚಿಕಿತ್ಸೆಯಿಂದಾಗಿ ಸಾವಿರಾರು ಅಮಾಯಕ ಜನರು ಅಸುನೀಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಸಿದ್ದಲಿಂಗಯ್ಯ :- ಇಲ್ಲ.

ಶ್ರೀ **ಕಡಿದಾಳ್ ಮಂಜಪ್ಪ** :- ಈ ನಕಲಿ ವೈದ್ಯರನ್ನು ವೃತ್ತಿ ನಡೆಸದಂತೆ ಶಾಸನವನ್ನು ವ್ಯಾಪಕಗೊಳಿಸುವಲ್ಲಿ ಸರ್ಕಾರವು ಯೋಚಿಸುತ್ತಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಯಾವೊಬ್ಬ ಸದಸ್ಯನಿಂದ ಈ ವಿಷಯವನ್ನು ಸದನದಲ್ಲಿ ಮಂಡಿಸುವುದಾದರೆ ಅದರ ಬಗ್ಗೆ ಪರಿಶೀಲಿಸಲಾಗುವುದು.

ಶ್ರೀ ಜಿ. ವೀರಪ್ಪ :- ಧಾರುಣವಾಗಿ ಕೆಲವುಕಡೆ ಡಾಕ್ಟ್ರುಗಳಿಲ್ಲದೆ ಕ್ವಾಲಿಫಿಕೇಷನ್ ಇಲ್ಲದಿದ್ದರೂ ಹತ್ತು ವರ್ಷ ಅನುಭವ ಪಡೆದಿದ್ದರೆ ಪ್ರಾಕ್ಟೀಸ್ ಮಾಡಬಹುದೆಂದು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಈ ತರಹ ಕೆಲವು ಇರಬಹುದು.

ಶ್ರೀ ಜಿ. ವೀರಪ್ಪ :- ಕ್ವಾಲಿಫಿಕೇಷನ್ ನಿಗದಿ ಮಾಡುವುದು ಅವಶ್ಯಕವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ ?

ಶ್ರೀ ಟಿ. ಸಿದ್ದಲಿಂಗಯ್ಯ :- ಅದನ್ನು ಆಲೋಚನೆ ಮಾಡಿದೆ. ಆದರೆ ಆ ರೀತಿಯಾಗಿ ನಿರ್ಭಂಧಪಡಿಸುವುದಕ್ಕೆ ಕಾನೂನಿಲ್ಲ.

ಶ್ರೀ ಜಿ. ವೀರಪ್ಪ :- ಬೊಂಬಾಯಿ ಕಡೆ ಆ ರೀತಿ ಕಾನೂನು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ನೋಟೀಸು

ಶ್ರೀ ಎಚ್. ಸಿದ್ದವೀರಪ್ಪನವರು (ಚಿತ್ರದುರ್ಗ ಜಿಲ್ಲೆ) :- ಕೆಲಸವಿಲ್ಲದೇ ಇರುವಾಗ ಅಂತಹವರು ಡಾಕ್ಟರು ಉದ್ದೆಯನ್ನು ಅನುಭವದಿಂದ ಮಾಡುವುದಕ್ಕೆ ಏನು?

ಶ್ರೀ ಟಿ. ಸಿದ್ದಲಿಂಗಯ್ಯ :- ಇಂಡಿಯಾ ಸರ್ಕಾರಕ್ಕೆ ನಮ್ಮ ದೇಶದಲ್ಲಿ ಕ್ವಾಕ್ಸ್ ಎಂದು ಕರೆಯಲ್ಪಡುವವರು ಕೆಲಸ ಮಾಡುತ್ತಿದ್ದಾರೆಂದು ತಿಳಿದಿದೆ. ಅದೂ ಅಲ್ಲದೆ ಮೊನ್ನೆ ಇಂಡಿಯಾ ಸರ್ಕಾರದಲ್ಲಿ ಡಾಕ್ಟರು ಸಮ್ಮೇಳನ ನಡೆದು ಚರ್ಚೆಯಾದಾಗ ಒಬ್ಬರು ಈ ವಿಚಾರವನ್ನು ಹೇಳಿದರು. ಆದರೆ ಅಂತಹವರನ್ನು ಕಂಡುಕೊಳ್ಳುವ ಯೋಜನೆಯನ್ನು ಯಾವ ಸರ್ಕಾರವೂ ಮಾಡಲಿಲ್ಲ.

ಶ್ರೀ ಎಚ್. ಸಿದ್ದವೀರಪ್ಪ :- ನಮ್ಮ ಸಂಸ್ಥಾನದಲ್ಲಿ ಅರ್ಹತೆ ಪಡೆದಿಲ್ಲದಿರುವವರು ಡಾಕ್ಟರುಗಳಾಗಿ ಕೆಲಸ ಮಾಡುತ್ತಿದ್ದರೆ ಅವರ ವಿಚಾರವನ್ನು ಸಹಾನುಭೂತಿಯಿಂದ ಪರಿಶೀಲಿಸುತ್ತೀರಾ?

ಶ್ರೀ ಟಿ. ಸಿದ್ದಲಿಂಗಯ್ಯ :- ಕೆಲವು ಅನರ್ಹತೆ ಹೊಂದಿದ ಜನರು ಅರ್ಹ ಜನರಿಗಿಂತ ಉತ್ತಮ.

ಶ್ರೀ ಎಚ್. ಸಿದ್ದವೀರಪ್ಪ :- ಅಲ್ಲಲ್ಲಿ ಕೆಲವು ತಾಲ್ಲೂಕುಗಳಲ್ಲಿ ಮೆಡಿಕಲ್ ಪ್ರಾಕ್ಟೀಷನರ್ಸ್ ಅಸೋಸಿಯೇಷನ್‌ಗಳನ್ನು ಏರ್ಪಾಡು ಮಾಡಿದ್ದಾರೆ. quacks ಎಲ್ಲಿ ಕೆಲಸ ಮಾಡುತ್ತಾರೆ ಅವರ ವಿಷಯವೇನು ಎಂದು ತಿಳಿದುಕೊಳ್ಳಲು ಸರ್ಕಾರದವರು ಆ ಅಸೋಸಿಯೇಶನ್ ರವರಿಗೆ ರೆಫರ್ ಮಾಡಲು ಯೋಚನೆ ಮಾಡುತ್ತೀರಾ?

ಶ್ರೀ ಟಿ. ಸಿದ್ದಲಿಂಗಯ್ಯ :- ಅವರೇ ತಿಳಿಸಿದರೆ ಒಳ್ಳೆಯದು; ಸೇವೆ ಮಾಡಿದಹಾಗಾಗುತ್ತದೆ.

ಶ್ರೀ ಎಸ್. ರಂಗರಾಮಯ್ಯನವರು (ಮೈಸೂರು ಜಿಲ್ಲೆ) :- quacks ಎನ್ನುವರು ಅಳಲೇಕಾಯಿ ಪಂಡಿತರೆಂದು ಕರೆಯುವವರಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಹಾಗಲ್ಲ. ಯಾವ ವಿಧವಾದ ಯೂನಿವರ್ಸಿಟಿ ಅಥವಾ ಸ್ಕೂಲು ಸರ್ಟಿಫಿಕೆಟ್ ಅಥವಾ ಡಿಪ್ಲೋಮಾ ಅಥವಾ ಡಿಗ್ರಿ ಇಲ್ಲದಿರುವವರು ಸಾಧಾರಣವಾಗಿ quacks ಎಂದು ಡಾಕ್ಟರಾಗಿರುತ್ತಾರೆ.

ಶ್ರೀ ಎಸ್. ರಂಗರಾಮಯ್ಯ :- ಹಾಗಾದರೆ ಅರ್ಹತೆಯದಿಂದ ಆಯುರ್ವೇದವನ್ನು ಓದಿ ಪ್ರಾಕ್ಟೀಸ್ ಮಾಡುತ್ತಿದ್ದರೆ ಅವರನ್ನು ಕ್ವಾಕ್ಸ್ ಎಂದು ತೀರ್ಮಾನ ಮಾಡುತ್ತೀರಾ. ಅವರ ಮೇಲೆ ಏನಾದರೂ ಕ್ರಮ ನಡೆಸಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಅದಕ್ಕೇನೂ ಅವರ ಮೇಲೆ ಕ್ರಮ ಕೈಕೊಂಡು ಅವರನ್ನು ಬ್ಯಾನ್ ಮಾಡಿಲ್ಲ.

ಶ್ರೀ ಎಸ್. ರಂಗರಾಮಯ್ಯ :- ಆ ತರಹ ಇದ್ದರೆ ಇನ್ನು ಮೇಲೆ ಲೈಸೆನ್ಸ್ ತೆಗೆದುಕೊಂಡು ವೃತ್ತಿಯನ್ನು ನಡೆಸಬೇಕೆಂದು ಒತ್ತಾಯ ಮಾಡಲು ಸಾಧ್ಯವೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಇದನ್ನು ಪರಿಶೀಲಿಸಲಾಗುವುದು.

ಶ್ರೀ ಎಸ್. ರಂಗರಾಮಯ್ಯ :- ಕ್ವಾಕ್ಸ್ ಮೈದಾನದಲ್ಲಿ ಜಾಸ್ತಿಯೋ ಅಥವಾ ಮಲೆನಾಡಿನಲ್ಲಿ ಜಾಸ್ತಿಯೋ?

ಶ್ರೀ ಟಿ. ಸಿದ್ದಲಿಂಗಯ್ಯ :- ಈ ವಿಚಾರದಲ್ಲಿ ಸಮಾಚಾರವನ್ನು ಸಂಗ್ರಹಿಸಿಕೊಟ್ಟರೆ ಒಳ್ಳೆಯದು.

ಶ್ರೀ ಎಸ್. ರಂಗರಾಮಯ್ಯ :- ಮಲೆನಾಡಿನಲ್ಲಿ ಅವರಿಗೆ ಸ್ವಲ್ಪ ಉತ್ತೇಜನವಿರುವುದರಿಂದ ಅಲ್ಲೇ ತಾನೇ ಹೆಚ್ಚಾಗಿ ಪ್ರಾಕ್ಟೀಸ್ ಮಾಡುವುದು.

ಶ್ರೀ ಟಿ. ಸಿದ್ದಲಿಂಗಯ್ಯ :- ಇರಬಹುದು.

ಶ್ರೀ ಎಂ. ಗೋವಿಂದರೆಡ್ಡಿಯವರು (ಚಿತ್ರದುರ್ಗ ಜಿಲ್ಲೆ ಜನರಲ್) :- ಮಾನ್ಯ ಸದಸ್ಯರು ಸಮಾಜಕ್ಕೆ ಈ ನಕಲಿ ವೈದ್ಯರು ಉತ್ತಮ ಸೇವೆ ನೀಡುತ್ತಿದ್ದಾರೆ ಎಂದು ಹೇಳುತ್ತಾರೆಯೋ?

ಶ್ರೀ ಟಿ. ಸಿದ್ದಲಿಂಗಯ್ಯ :- ಅವರು ಅಲ್ಪ ಸ್ವಲ್ಪ ಸೇವೆಯನ್ನು ಮಾಡುತ್ತಿದ್ದಾರೆ.

ಶ್ರೀ ಎಂ. ಗೋವಿಂದರೆಡ್ಡಿ :- ಜನರ ವೈದ್ಯಕೀಯ ಆಗತ್ಯತೆಗಳ ಬಗ್ಗೆ ಉತ್ತರಿಸುವ ಅವಶ್ಯಕತೆ ಇದೆಯೋ?

ಶ್ರೀ ಟಿ. ಸಿದ್ದಲಿಂಗಯ್ಯ :- ಇದು ಅಭಿಪ್ರಾಯದ ವಿಷಯವಾಗಿದೆ.

ಶ್ರೀ ಎಂ. ಗೋವಿಂದರೆಡ್ಡಿ :- ಡಾಕ್ಟರುಗಳು ಮತ್ತು ಆಯುರ್ವೇದ ವೈದ್ಯರುಗಳಿಗೆ ತರಬೇತಿ ನೀಡುವುದಕ್ಕೆ ಸಾಕಷ್ಟು ಸಂಸ್ಥೆಗಳಿರುವುದು ಸರ್ಕಾರಕ್ಕೆ ಸಾಕಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ :- ಪ್ರತಿಯೊಬ್ಬರಿಗೂ ತರಬೇತಿ ಕೊಡುವಂತಹ ಸಂಸ್ಥೆಗಳು ಇವೆ.

ಶ್ರೀ ಎಂ. ಗೋವಿಂದರೆಡ್ಡಿ :- ತರಬೇತಿಗಾಗಿ, ಸರ್ಕಾರವು ಸಾಕಷ್ಟು ಅವಕಾಶಗಳನ್ನು ಕಲ್ಪಿಸಿರುವ ದೃಷ್ಟಿಯಿಂದ ಈ ನಕಲಿ ವೈದ್ಯವೃತ್ತಿದಾರಿಕೆಯನ್ನು ತಡೆಹಿಡಿಯುವುದು ಸಾಧ್ಯವಿಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ :- ಈಗ ಅಲ್ಲ, ಜನರ ಬೇಡಿಕೆಗಳನ್ನು ಪೂರೈಸಲು ಸಾಕಾಗುವಂತೆ ಮಾಡಲು ಉಪಬಂಧ ಕಲ್ಪಿಸುವವರೆಗೆ.

ಶ್ರೀ ಎಂ. ಗೋವಿಂದರೆಡ್ಡಿ :- ಅದರಿಂದ ನಕಲಿ ವೈದ್ಯ ವೃತ್ತಿದಾರರು ಅನವಶ್ಯಕ ಸಂಖ್ಯೆಯಲ್ಲಿರಲು ಅವಕಾಶವಾಗುವುದಿಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ :- ಡಾಕ್ಟರುಗಳ ಕೊರತೆ ಇರುವ ಕಾರಣ ಪ್ರಸ್ತುತ ಇದು ಅನವಶ್ಯವೆಂದು ತಿಳಿಯಲಾಗುವುದಿಲ್ಲ.

ಶ್ರೀ ಎಂ. **ಗೋವಿಂದರೆಡ್ಡಿ** :- ದೇಶಕ್ಕೆ ಅಗತ್ಯವಿರುವಷ್ಟು ಸಂಖ್ಯೆಯ ವೈದ್ಯರುಗಳಿಗೆ ಸರ್ಕಾರವು ತರಬೇತಿ ನೀಡುತ್ತಿಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ :- ಸಹಜವಾಗಿ.

ಶ್ರೀ ಎಂ. **ಗೋವಿಂದರೆಡ್ಡಿ** :- ಬಹಳಷ್ಟು ಸಂಖ್ಯೆ ವೈದ್ಯರುಗಳು ರಾಜ್ಯದಿಂದ ಹೊರಕ್ಕೆ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ರಾಜ್ಯದಿಂದ ಹೊರಗೆ ಹೋಗುತ್ತಿರಬಹುದು.

ಶ್ರೀ ಟಿ. **ಹನುಮಯ್ಯ (ಚಿತ್ರದುರ್ಗ ಜಿಲ್ಲೆ - ನಿಮ್ನ ಪಂಗಡ)** :- ಗ್ರಾಮಾಂತರಗಳಲ್ಲಿ quacks ಇರುವುದರಿಂದ ಗರ್ಭಿಣಿ ಹೆಂಗಸರಿಗೆ ಬಹಳ ತೊಂದರೆಯಾಗುತ್ತಿದೆಯೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಅಂಥಾದ್ದು ಯಾವುದೂ ಗಮನಕ್ಕೆ ಬಂದಿಲ್ಲ.

*****

## ಸರ್ಕಾರಿ ಆಸ್ಪತ್ರೆಗಳಲ್ಲಿ ಕುಟುಂಬ ಯೋಜನಾ ಚಿಕಿತ್ಸಾಲಯಗಳನ್ನು ತೆರೆಯುವ ಬಗ್ಗೆ ನಿರ್ಣಯದ ಮೇಲಿನ ಚರ್ಚೆ

ಸ್ವಾತಂತ್ರ್ಯ ವಿಕಾಸಕ್ಕೆ ನಾಂದಿ. ಪರಕೀಯರ ಆಳ್ವಿಕೆಯಿಂದ ಬಿಡುಗಡೆ ಆದಾಗ ರಾಜಕೀಯ ಸ್ವಾತಂತ್ರ್ಯ - ಅಂದರೆ, ನಮ್ಮನ್ನು ನಾವೇ ಆಳಿಕೊಳ್ಳುವ, ನಮ್ಮ ಅಭ್ಯುದಯವನ್ನು ರೂಪಿಸಿಕೊಳ್ಳುವ ಸ್ವಾತಂತ್ರ್ಯ ದೊರೆತಿತ್ತು. ಆಶೆ ಆಕಾಂಕ್ಷೆಗಳ ಜೊತೆ ಜೊತೆಗೆ ಆಕಾಂಕ್ಷೆಗಳ ಸಾಧನೆಗೆ ಇರುವ ತೊಡಕು ತೊಂದರೆಗಳು ನಮ್ಮ ಸ್ವತಂತ್ರ ಚಿಂತನೆಗೆ ಮೇವಾಗಿದ್ದುವು. ಭಾರತದ ಸ್ವಾತಂತ್ರ್ಯ ಹರಣವಾದಾಗ ಇನ್ನೂ ಕೈಗಾರಿಕಾ ಕ್ರಾಂತಿ ಆಗಿರಲಿಲ್ಲ. ಕೈಗಾರಿಕಾ ಕ್ರಾಂತಿ ತನ್ನೊಂದಿಗೆ ನಾಗರೀಕತೆಯ ಅಲೆಯನ್ನೇ ಎಬ್ಬಿಸಿತು. ಒಂದುಕಡೆ ಪರಕೀಯರ ಆಳ್ವಿಕೆಯಲ್ಲಿ ನುಚ್ಚು ನೂರಾಗುತ್ತಿದ್ದ ನಮ್ಮ ಪುರಾತನ ಮೌಲ್ಯಾಧಾರಿತ ಆದರ್ಶಗಳು; ಮತ್ತೊಂದು ಕಡೆ ಬದುಕನ್ನು ಪ್ರಾಪಂಚಿಕತೆಗೆ ಎಳೆದು ಬಿಗಿಯುವ ನಾಗರೀಕ ಮೌಲ್ಯಗಳು - ಇವುಗಳ ನಡುವೆ ಏರ್ಪಟ್ಟ ಸಾಂಸ್ಕೃತಿಕ ತುಮುಲ ರಾಜ್ಯದ ನೂತನ ಸ್ವತಂತ್ರ ಸರ್ಕಾರದ ನೀತಿ ನಿರ್ಧರಣೆಯ ಕಾರ್ಯವನ್ನು ಮತ್ತಷ್ಟು ಕ್ಲಿಷ್ಟಗೊಳಿಸಿತ್ತು.

ಇಂಥ ಸಂದರ್ಭದಲ್ಲಿ ರಾಷ್ಟ್ರೀಯ ನಾಯಕರುಗಳು ಜನಸಂಖ್ಯಾ ಆಧಿಕ್ಯವುಳ್ಳ ನಮ್ಮ ರಾಷ್ಟ್ರದಲ್ಲಿ ಜನಾಭ್ಯುದಯಕ್ಕಾಗಿ ಕುಟುಂಬ ಯೋಜನಾ ಸೂತ್ರವನ್ನು ಆಡಳಿತದಲ್ಲಿ ಅಳವಡಿಸುವ ಚಿಂತನೆಯನ್ನು ಮೂಡಿಸಿದರು. ಈ ಚಿಂತನೆ ಆಧಾರಿತ ನಿರ್ಣಯವೊಂದು ದಿನಾಂಕ 21-10-1952ರಂದು ಸದನದಲ್ಲಿ ಚರ್ಚೆಗೆ ಮಂಡಿತವಾಯಿತು. ಸಿದ್ದಲಿಂಗಯ್ಯನವರು ಹಿಂದೆ 1947ರ ಮಂತ್ರಿ ಮಂಡಲದಲ್ಲಿ ಆರೋಗ್ಯ ಖಾತೆಯ ಸಚಿವರಾಗಿದ್ದರು. ನಿರ್ಣಯದ ಪರವಾಗಿಯೂ ವಿರುದ್ದವಾಗಿಯೂ ಸದಸ್ಯರು ಪರಿಣಾಮಕಾರಿಯಾದ ವಾದಾಂಶಗಳನ್ನು ಮಂಡಿಸಿದರು. ಸಭಾ ನಾಯಕರಾಗಿ ಸಿದ್ದಲಿಂಗಯ್ಯನವರು ಆರೋಗ್ಯ ಖಾತೆ ಮಂತ್ರಿಗಳ ಪರವಾಗಿ

ತಮ್ಮ ಭಾವಾತೀತ ನಿಷ್ಪಕ್ಷಪಾತ ಗಂಭೀರ ಮನೋವೃತ್ತಿಯಿಂದ ವಿಷಯವನ್ನು ಪರಿಗ್ರಹಿಸಿ ಸರ್ಕಾರದ ಪರ ನಿಲುವನ್ನು ರೂಢಿಸಿದ ಚಿತ್ರಣವನ್ನೊದಗಿಸಲು ಚರ್ಚೆಯ ಪಠ್ಯ ಭಾಗವನ್ನು ಇಲ್ಲಿ ಉದ್ಧರಿಸಿದೆ:

ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ):- ........

ಮಿತ ಸಂತಾನದ ವ್ಯವಸ್ಥೆಯ ಒಂದು ಕ್ರಮವನ್ನು ನಮ್ಮ ದೇಶದ ಎಲ್ಲಾ ಆಸ್ಪತ್ರೆಗಳಲ್ಲೂ ಕೂಡ ಪ್ರಾರಂಭ ಮಾಡಬೇಕೆಂದು ಸೂಚನೆ ಮಾಡಿರತಕ್ಕ ಈ ತತ್ವ ಮಿತಸಂತಾನದ ವ್ಯವಸ್ಥೆ, ಭಾರತೀಯ ಜೀವನ ಕ್ರಮಕ್ಕೂ ಭಾರತೀಯ ಸಂಸ್ಕೃತಿಗೂ, ಭಾರತೀಯ ಸಂಪ್ರದಾಯಕ್ಕೂ ಕೂಡ ತೀರ ವಿರುದ್ಧವಾದುದು ಎಂಬುದನ್ನು ಈ ಸಭೆಯ ಮುಂದೆ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ನಮ್ಮ ದೇಶದಲ್ಲಿ ನೂರಾರು ವರ್ಷಗಳಿಂದ ಜನ ನಡೆಸಿಕೊಂಡು ಬಂದಿರತಕ್ಕ ಜೀವನ ಸಂಯಮದಿಂದ ಕೂಡಿರತಕ್ಕ ಜೀವನ. ಈ ಮಿತ ಸಂತಾನದ ವ್ಯವಸ್ಥೆಯನ್ನು ಒಪ್ಪಿಕೊಂಡು ಒಂದು ಕ್ರಮವಾದ ಕಾರ್ಯಕ್ರಮವನ್ನು ನಮ್ಮ ಜೀವನದಲ್ಲಿ ತಂದ ಪಕ್ಷದಲ್ಲಿ ನಮ್ಮ ದೇಶದ ಜನ ಸ್ವೇಚ್ಛಾ ವ್ಯವಹಾರಿಗಳಾದಾರು. ಕಾಮುಕ ಜೀವನ ಆರಿಸಿಯಾರು ಎಂಬ ಭಯ ನನ್ನ ಮನಸ್ಸಿನಲ್ಲಿ ಹುಟ್ಟುತ್ತಾ ಇದೆ. ಈ ದೃಷ್ಟಿಯಿಂದ ನೋಡಿದರೆ ಒಂದು ಕುಟುಂಬದಲ್ಲಿರತಕ್ಕ ಗಂಡ ಹೆಂಡಂದಿರು ಸಂಯಮದಿಂದ ಜೀವನವನ್ನು ನಡೆಸಿಕೊಂಡು ಬಂದಿರುವುದರಿಂದ ನೂರಾರು ವರ್ಷಗಳಿಂದ ನಮ್ಮ ಜನರಲ್ಲಿ ಒಂದು ಸಂಪ್ರದಾಯ ಬೆಳೆದುಕೊಂಡು ಬಂದಿದೆ. ಈ ಸಂಪ್ರದಾಯದ ಮೇಲೆ ನಮ್ಮ ಜೀವನದಲ್ಲಿ ನಡೆಸಿಕೊಂಡು ಬಂದ ಪಕ್ಷದಲ್ಲಿ, ಈ ಬಹು ಸಂತಾನದ ಒಂದು ದುಃಖ ನಮಗೆ ಪರಿಣಮಿಸಲಾರದು ಎಂದು ಭಾವನೆ ಮಾಡಿಕೊಂಡಿದ್ದೇನೆ. ಜನಸಂಪತ್ತು ಇರತಕ್ಕ ರಾಷ್ಟ್ರ ಸೋಮಾರಿತನವನ್ನು ಬಿಟ್ಟುಬಿಟ್ಟ ಪಕ್ಷದಲ್ಲಿ, ರಾಷ್ಟ್ರೀಕರಣದ ಒಂದು ಸಾಧನವನ್ನು ಉಪಯೋಗಿಸಿಕೊಂಡ ಪಕ್ಷದಲ್ಲಿ ಆ ದೇಶ ಮುಂದುವರೆಯುವುದಕ್ಕೆ ಬೇಕಾದಷ್ಟು ಅನುಕೂಲಗಳು ಸಹಾಯಗಳು ದೊರೆಯುತ್ತವೆ. ಈ ದೃಷ್ಟಿಯಿಂದ ನೋಡಿದ ಪಕ್ಷದಲ್ಲಿ ಈ ದಿನ ಚೈನಾ ರಾಜ್ಯ ರಷ್ಯಾ ರಾಜ್ಯ ಮತ್ತು ಜನತೆಯ ವಿಷಯದಲ್ಲಿ ಎಷ್ಟು ಹುಮ್ಮನಸನ್ನು ಎಷ್ಟು ಅಭಿಮಾನವನ್ನು ತೋರಿಸುತ್ತಾ ಇವೆಯೋ ಅಷ್ಟು ಹುಮ್ಮನಸನ್ನು ಅಭಿಮಾನವನ್ನು ನಮ್ಮ ದೇಶದಲ್ಲೂ ಜನ ತೋರಿಸುತ್ತಾ ಇಲ್ಲವಲ್ಲ ಎಂದು ಖೇದವಾಗುತ್ತದೆ.

ಜನಸಂಖ್ಯೆಯು ಹೆಚ್ಚಾದಷ್ಟು ಜನತೆಯು ಪರಿಪುಷ್ಟವಾಗಿರುವಂತೆ ವಾತಾವರಣವನ್ನು ನಾವು ಕಲ್ಪಿಸಿಕೊಳ್ಳಲು ಪ್ರಯತ್ನ ಮಾಡಬೇಕು. ದಿನೇ ದಿನೇ ಜನಸಂಖ್ಯೆಯು ನಮ್ಮ ದೇಶದಲ್ಲಿ ಹೆಚ್ಚುತ್ತಿದೆಯೆಂದು ಅವರು ಪ್ರಪಂಚದಲ್ಲಿ ಜನ್ಮತಾಳುವುದಕ್ಕೆ ಮೊದಲೇ ಅವರ ನಾಮಾವಶೇಶವಾಗಬೇಕೆಂಬ ಅಭಿಪ್ರಾಯ ನಮ್ಮ ಜನತೆಯ ಮನಸ್ಸಿನಲ್ಲಿ ಮೂಡುವುದು ಅನುಚಿತವಾದುದು. ಪೂರ್ವ ಪಶ್ಚಿಮ ಎರಡು ಸಾವಿರ ಮೈಲಿ ಮತ್ತು ಉತ್ತರ ದಕ್ಷಿಣ ಎರಡು ಸಾವಿರ ಮೈಲಿ ವಿಸ್ತೀರ್ಣವುಳ್ಳ ನಮ್ಮ ಭಾರತ ದೇಶವು ದೊಡ್ಡ ಉತ್ಪತ್ತಿಯುಳ್ಳ ಸಂಪದ್ಯುಕ್ತ ರಾಷ್ಟ್ರ. ಆದುದರಿಂದ ಇಲ್ಲಿಯ ಜನತೆಯು ತಮ್ಮ ಜನಸಂಖ್ಯೆ ಹೆಚ್ಚಾಗುತ್ತಿದೆಯೆಂದು ಹೆದರಬೇಕಾಗಿಲ್ಲ. ಈ ಯೋಜನೆಯು ಏನಿದ್ದರೂ ಕೈಗಾರಿಕಾಪೂರ್ಣವಾದ ರಾಷ್ಟ್ರಗಳಿಗೆ ಹೊಂದಿಕೊಂಡಿರಬೇಕು. ಇದನ್ನು ವ್ಯವಸಾಯ ರಾಷ್ಟ್ರಗಳಿಗೆ ಅದರಲ್ಲಿಯೂ ಭಾರತಕ್ಕೆ

ಅನ್ವಯಿಸುವುದು ಎಷ್ಟು ಮಾತ್ರವೂ ಸಾಧುವಾದುದಲ್ಲ. ಇದನ್ನು ಕಾರ್ಯರೂಪಕ್ಕೆ ತರುವುದಾಗಲಿ ನಮ್ಮ ಜನತೆಯ ಹಿತ ದೃಷ್ಟಿಯಿಂದ ಒಳ್ಳೆಯದಲ್ಲ. ನಮ್ಮ ಪ್ರಾಚೀನ ಸಂಸ್ಕೃತಿ, ನಮ್ಮ ಜೀವನದ ವ್ಯವಸ್ಥಾ ಕ್ರಮ ಮತ್ತು ಸಂಪ್ರದಾಯಗಳು ಈ ಯೋಜನೆಯಿಂದ ಅಭಿವೃದ್ಧಿಗೊಳ್ಳಲು ಸಹಕಾರಿ ಯಾಗುವುದಿಲ್ಲ. ಸಾಧಕವಾಗುವುದಿಲ್ಲವೆಂಬ ದೃಷ್ಟಿಯಿಂದ ಯಾರೂ ಈ ನಿರ್ಣಯವನ್ನು ಅನುಮೋದಿಸಬಾರದು ಎಂದು ಬಿನ್ನವಿಸಿಕೊಳ್ಳುತ್ತೇನೆ.

ಶ್ರೀ ಆರ್.ಪಿ. ರೇವಣ್ಣ (ಸ್ಥಾನೀಯ ಪ್ರಾಧಿಕಾರಿ ಕ್ಷೇತ್ರ) :-

ಕಾಲ, ಸನ್ನಿವೇಶ ಮತ್ತು ಪರಿಸ್ಥಿತಿ ಬದಲಾವಣೆ ಆದಹಾಗೆಲ್ಲ ನಮ್ಮ ಅಭಿಪ್ರಾಯಗಳನ್ನು ಅಗತ್ಯವಾಗಿ ನಾವು ಬದಲಾವಣೆ ಮಾಡಿಕೊಳ್ಳಲೇ ಬೇಕು. ಇದಕ್ಕೆ ಈಗ ಒದಗಿರುವ ಕಾಲ ಸರಿಯಾಗಿದೆ. ಈ ಕ್ರಮ ಪ್ರತಿಯೊಬ್ಬರ ಮೇಲೂ ಬಲವಂತದಿಂದ ಹೇರಲ್ಪಟ್ಟಿಲ್ಲ. This is only a preventive measure.

ಈ ವಿಚಾರದಲ್ಲಿ ಅತ್ಯಂತ ಮೇಧಾವಿಗಳೆಂದು ಹೆಸರು ಗಳಿಸಿದ ಸರ್.ಎಂ. ವಿಶ್ವೇಶ್ವರಯ್ಯನವರೇ ಮೊದಲಾದ ಮಹನೀಯರುಗಳು ಹೇಳಿದ ವಾದದಲ್ಲಿ ತಿರುಳಿಲ್ಲವೆಂದು ಹೇಳಬೇಕಾಗುತ್ತದೆ. 92 ವರ್ಷ ಆ ಅನುಭವಿಗಳು ದೇಶದ ಹಿತದೃಷ್ಟಿಯಿಂದ ಈ Family Planning ಅಗತ್ಯವೆಂಬುದನ್ನು ಹೇಳಿದ್ದಾರೆಂಬುದನ್ನು ಸರ್ಕಾರದವರು ಮನಗಾಣಬೇಕು. ನಮ್ಮ ದೇಶದ ಜನಸಂಖ್ಯೆಯನ್ನು ಈ ರೀತಿ ಹೆಚ್ಚು ಮಾಡಿಕೊಳ್ಳುವುದು ಈಗಿನ ಕಾಲಕ್ಕೆ ಅನಾವಶ್ಯಕವಾಗಿದೆ. ನಮ್ಮ ದೇಶದಲ್ಲಿ ವ್ಯವಸಾಯ ಸಂಪತ್ತು ಬಹಳವಾಗಿದೆಯೆಂದು ನಮ್ಮ ದೇಶದ ವಿಸ್ತೀರ್ಣ 2,000 ಮೈಲಿಗಳಷ್ಟಿದೆಯೆಂದು ಜನಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತಾ ಹೋದರೆ ಆಫ್ರಿಕಾದ ಸಹರಾ ಮರಭೂಮಿಯನ್ನೇ ನಮ್ಮ ದೇಶಕ್ಕೆ ಸೇರಿಸಿಕೊಂಡರೂ ಸಾಕಾಗುವುದಿಲ್ಲ. ಈಗ ಕೇಂದ್ರ ಸರ್ಕಾರದವರೂ ಸಹ ಈ Family Planning ವಿಚಾರದಲ್ಲಿ ಬಹುಮಟ್ಟಿಗೆ ಮುತುವರ್ಜಿ ವಹಿಸಿದ್ದಾರೆ.

ಶ್ರೀ ಟಿ.ಪಿ. ಬ್ರಹ್ಮಯ್ಯ (ಮೈಸೂರು ವಿಧಾನ ಸಭಾ ಕ್ಷೇತ್ರ):-

ನಮ್ಮ ದೇಶದಲ್ಲಿ ಅನೇಕವಿಧವಾದ ಸಾಧನ ಸಂಪತ್ತಿದೆ. ವ್ಯವಸಾಯದ ಪ್ರಗತಿಗೇ ಆಗಲಿ, ಕೈಗಾರಿಕೆಯ ಪ್ರಗತಿಗೇ ಆಗಲಿ ಅನುಕೂಲವಾದ ದೇಶವಾಗಿದೆ. ಮಕ್ಕಳು ಜಾಸ್ತಿ ಆದಷ್ಟು ಗಂಡ ಹೆಂಡಿರ ಪ್ರೀತಿ, ಸಂಸಾರದಲ್ಲಿ ಸುಖ ಸಂತೋಷ ನೆಲೆಸುವುದಕ್ಕೆ ಅವಕಾಶವಾಗುವುದು. ಇದು ಪರಮಾತ್ಮನ ವೈಶಿಷ್ಟ್ಯವೆಂದು ಹೇಳುತ್ತೇನೆ. ಈ ಫ್ಯಾಮಿಲಿ ಪ್ಲಾನಿಂಗ್‌ಗೆ ದೇಶದಲ್ಲಿ ಅವಕಾಶ ಕೊಟ್ಟರೆ ಅನೀತಿ, ಅಧರ್ಮ ನೆಲೆಸುವುದಕ್ಕೆ ಅವಕಾಶಕೊಟ್ಟ ಹಾಗಾಗುತ್ತದೆಂದು ಘಂಟಾಘೋಷವಾಗಿ ಹೇಳುತ್ತೇನೆ.

ಶ್ರೀ ಎ.ಎನ್. ರಾಮರಾವ್ (ಪದವೀಧರರ ಕ್ಷೇತ್ರ):-

ಶ್ರೀ ಡಿ. ವೆಂಕಟರಾಮಯ್ಯನವರು ಸೂಚಿಸಿರುವ ಈ ಫ್ಯಾಮಿಲಿ ಪ್ಲಾನಿಂಗ್ ಕ್ಲಿನಿಕ್ ನಮ್ಮ ಸ್ತ್ರೀಯರ ಸಂಪ್ರದಾಯಗಳಿಗೆ ಬಹಳ ದೂರವಾಗಿದೆ. ನಮ್ಮ ಮೈಸೂರು ಸಂಸ್ಥಾನದಲ್ಲಿರತಕ್ಕ ಸ್ತ್ರೀಯರು ಬಹಳ ಮಾನಿಷ್ಟರು, ಗೌರವಯುತರು. ಇವರು ಹೆರಿಗೆಗಾಗಿ ಆಸ್ಪತ್ರೆಗೆ ಬರಲು ಹಿಂತೆಗೆಯುತ್ತಾರೆ. ಇಂಥಹವರು ಫ್ಯಾಮಿಲಿ ಪ್ಲಾನಿಂಗ್ ಕ್ಲಿನಿಕ್‌ಗೆ ಹೋಗಿ ಈ ಬಗ್ಗೆ ಚಿಕಿತ್ಸಾ

ವಿಧಾನಕ್ಕೆ ಸಲಹೆ ತೆಗೆದುಕೊಳ್ಳುವುದಕ್ಕೆ ಹಿಂತೆಗೆಯುವುದು ಹೆಚ್ಚೇನಲ್ಲ. ಇದೇನಾದರೂ ಒತ್ತಾಯಪೂರ್ವಕವಾದರೆ ನಮ್ಮ ಸಂಸಾರದ ಸುಖಕ್ಕೂ ಭಂಗಬರುತ್ತದೆ. ನಮ್ಮ ದೇಶದಲ್ಲಿ ಪಾಶ್ಚಾತ್ಯ ದೇಶದಲ್ಲಿರುವಂತೆ ಡೈವರ್ಸ್ ಪದ್ಧತಿ ಇಲ್ಲ. Marriage is a sacrement ಎಂಬ ಭಾವನೆ ನಮ್ಮ ದೇಶದ ಜನರ ಮನಸ್ಸಿನಲ್ಲಿ ಪೂರ್ಣವಾಗಿ ಮೂಡಿದೆ. ನಮ್ಮ ಹಿಂದೂ ಸ್ತ್ರೀಯರು ಪತಿವ್ರತಾ ಶಿರೋಮಣಿಗಳಾಗಿ, ಪತಿಯು ಏನೇ ಕಷ್ಟಕೊಟ್ಟರೂ ಅದನ್ನು ಅನುಭವಿಸಿಕೊಂಡು, ಸುಖ ಜೀವನದಲ್ಲಿ ನಿರತರಾಗಿರುತ್ತಾರೆ. ಇಂತಹವರ ಪಾತಿವ್ರತ್ಯ ಭಂಗಕ್ಕೆ ಎಡೆಕೊಟ್ಟಂತಾಗುತ್ತದೆ.

ಶ್ರೀ ಟಿ.ಎನ್. ಕೆಂಪಹೊನ್ನಯ್ಯ (ಸ್ಥಾನೀಯ ರಾಜಕಾರಿ ಕ್ಷೇತ್ರ):- .........

ಈಗಿನ ಆರ್ಥಿಕ ಮುಗ್ಗಟ್ಟಿನ ಪರಿಸ್ಥಿತಿಯಲ್ಲಿ ಇದು ಎಲ್ಲೆಲ್ಲಿಯೂ ತಾಂಡವವಾಡುತ್ತಿರುವ ಈ ಸಂದರ್ಭದಲ್ಲಿ, ಈ ಫ್ಯಾಮಿಲಿ ಪ್ಲಾನಿಂಗ್ ಎಂಬುದು ದೇಶಕ್ಕೆ ಶ್ರೇಯಸ್ಕರ. ಒಂದು ದೇಶದಲ್ಲಿ ಹುಚ್ಚಾಪಟ್ಟೆ ಮಕ್ಕಳಾದರೆ ಆ ದೇಶಕ್ಕೆ ಕಷ್ಟ. ಸೆನ್ಸಸ್ ಲೆಕ್ಕದ ಪ್ರಕಾರ ಇಪ್ಪತ್ತು ವರ್ಷಗಳಲ್ಲಿ ಇಂಗ್ಲೆಂಡಿನಲ್ಲಿ ಶೇ. 6 ರಂತೆ ಹೆಚ್ಚಿದರೆ ನಮ್ಮ ಮೈಸೂರು ದೇಶದಲ್ಲಿ ಶೇ. 23.6ರಷ್ಟು ಏರಿರುವುದು ನೋಡಿದರೆ ಭಯವಾಗುತ್ತದೆ. ಈ ಫ್ಯಾಮಿಲಿ ಪ್ಲಾನಿಂಗ್ ವಿಚಾರದಲ್ಲಿ ಒಂದು ವ್ಯವಸ್ಥೆ ಇಲ್ಲದಿದ್ದರೆ ದೇಶದಲ್ಲಿ ಎಕನಾಮಿಕ್ ಪ್ಲಾನಿಂಗ್ ಹೇಗೆ ಸಾಧ್ಯ ?

ನಾನು ಹಳ್ಳಿಯ ಜನರ ಕಷ್ಟ ಸುಖವನ್ನು ಅರಿತು ಆ ಅನುಭವದಿಂದ ಹೇಳಿದ್ದೇನೆ - ಈ ಫ್ಯಾಮಿಲಿ ಪ್ಲಾನಿಂಗ್ ಎಂಬುದು ಅಗತ್ಯವಾಗಿ ನಮ್ಮ ದೇಶಕ್ಕೆ ಬೇಕಾಗಿದೆ. ಹಳ್ಳಿಗಳ ಕಡೆ ಒಂದೊಂದು ಬಡ ಸಂಸಾರದವರು ಹತ್ತಾರು ಮಕ್ಕಳನ್ನು ಪಡೆದು ಹೊಟ್ಟೆಗೆ ಹಿಟ್ಟಿಲ್ಲದೆ ಸಾಯುವುದರ ಬದಲು ಅವರೆಲ್ಲರೂ ಈ ಫ್ಯಾಮಿಲಿ ಪ್ಲಾನಿಂಗ್ ಕ್ರಮವನ್ನು ಅನುಸರಿಸಿದ್ದೇ ಆದರೆ ಅವರ ಕಷ್ಟವು ಬಹು ಮಟ್ಟಿಗೆ ನಿವಾರಣೆಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಇದರಿಂದ ದೇಶದಲ್ಲಿ ಇಂದು ಉದ್ಭವಿಸಿರುವ ಆಹಾರ ಸಮಸ್ಯೆಯು ಬಹುಮಟ್ಟಿಗೆ ನಿವಾರಣೆಯಾಗುತ್ತದೆ. ಈ ಫ್ಯಾಮಿಲಿ ಪ್ಲಾನಿಂಗ್ ಯೋಜನೆಯು ನಮ್ಮ ದೇಶಕ್ಕೆ ಸಮಯೋಚಿತವಾಗಿದೆಯೆಂದು ಹೇಳಿ ಈ ನಿರ್ಣಯಕ್ಕೆ ನನ್ನ ಹೃತ್ಪೂರ್ವಕವಾಗಿ ಬೆಂಬಲ ಕೊಡುತ್ತೇನೆ.

ಶ್ರೀ ಜಿ. ದೇವಯ್ಯ (ಸ್ಥಾನೀಯ ಪ್ರಾಧಿಕಾರಿ ಕ್ಷೇತ್ರ):-

ಹಿಂದೂ ಸ್ತ್ರೀಯರು ಅನೇಕರು ತಮ್ಮ ಪಾತಿವ್ರತ್ಯ ಭಂಗಕ್ಕೆ ಸ್ವಲ್ಪವೂ ಅವಕಾಶ ಕೊಡಲು ಸಮ್ಮತಿಸುವುದಿಲ್ಲ. ಈ ಮಕ್ಕಳಾಗುವುದು ಅವರ ಯವ್ವನಕ್ಕೆ ಸಂಬಂಧಿಸಿದೆ. ಕೆಲವರಿಗೆ ಮಕ್ಕಳಾಗುತ್ತಿದ್ದರೆ ಅವರ ಯವ್ವನವು ಮತ್ತಷ್ಟು ವೃದ್ಧಿಯಾಗುತ್ತದೆ. ಕೆಲವರಿಗೆ ಹೆರಿಗೆ ಕಾಲದಲ್ಲೂ ಮತ್ತೆ ಕೆಲವರಿಗೆ ಹೆರಿಗೆಯಾದನಂತರವೂ ಯವ್ವನವು ವೃದ್ಧಿಯಾಗುತ್ತವೆ. ಇದು ಅವರವರ ದೇಹ ಪ್ರಕೃತಿಗೆ ಅನ್ವಯಿಸಿದೆ. ಆದಕಾರಣ ಇದಕ್ಕೆ ಯಾವ ಅಡ್ಡಿ ಆತಂಕಗಳು ಇರಬಾರದು. ಆದುದರಿಂದ ಶ್ರೀ ಡಿ. ವೆಂಕಟರಾಮಯ್ಯನವರು ಸೂಚಿಸಿರುವ ನಿರ್ಣಯವು ಎಷ್ಟು ಮಾತ್ರವೂ ಸಾಧುವಾದುದಲ್ಲ. ಅದು ನಮ್ಮ ಹಿಂದೂ ಸ್ತ್ರೀಯರ ಮನೋಧರ್ಮಕ್ಕೆ ವಿರುದ್ಧವಾದುದರಿಂದ, ಅವರು ಇದನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಕೋರುತ್ತೇನೆ.

8.2165

ಶ್ರೀ ಎಸ್. ಶಿವಪ್ಪ (ಮೈಸೂರು ವಿಧಾನಸಭಾ ಕ್ಷೇತ್ರ):-

ಈಗ ನಮ್ಮ ದೇಶದಲ್ಲಿ ಯಾವ ಒಂದು ಕಾರ್ಯವೇ ಆಗಲಿ ಒಂದು ಪ್ಲಾನ್ಡ್ ಬೇಸಿಸ್ ಮೇಲೆ ನಡೆಯಬೇಕು ಎಂಬ ಮನೋಭಾವ ಜನರಲ್ಲಿ ಮೂಡುತ್ತಿದೆ. ಈಗ ಎಲ್ಲಿ ಹೋದರೂ ನಿರುದ್ಯೋಗದ ಪ್ರಶ್ನೆ, ಆಹಾರದ ಪ್ರಶ್ನೆ ಅಧಿಕವಾಗಿದೆ. ಮಕ್ಕಳು ದೇಶದ ಆಸ್ತಿ ಎಂಬ ತತ್ವವು ಉದಾತ್ತವಾದುದಾದರೂ, ಮಕ್ಕಳನ್ನು ದೇಶದಲ್ಲಿ ಹೆಚ್ಚು ಹೆಚ್ಚಾಗಿ ಹುಟ್ಟಿಸಿದ ಮಾತ್ರದಿಂದಲೇ ದೇಶದ ಸಂಪತ್ತು ಹೆಚ್ಚುತ್ತದೆ ಎಂಬ ಮನೋಭಾವ ಸರಿಯಾದುದಲ್ಲ. ದೇಶದಲ್ಲಿರತಕ್ಕ ಜನರು ವಿದ್ಯಾವಂತರಾಗಿ, ದೃಢಕಾಯರಾಗಿ, ದೇಶಸೇವೆಯನ್ನು ಮಾಡುವುದರಲ್ಲಿ ಸಮರ್ಥರಾಗಿ, ದೇಶದ ನಾನಾ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಲು ಅರ್ಹತೆ ಪಡೆದವರಾಗಿ ಇರಲು ನಾವು ಶ್ರಮಿಸಿದರೆ ದೇಶದ ಏಳಿಗೆ ಆದೀತೇ ಹೊರತು ಹುಚ್ಚಾಪಟ್ಟೆ ಮಕ್ಕಳನ್ನು ಹುಟ್ಟಿಸಿ ದೇಶದ ಜನರನ್ನು ನಿರ್ಗತಿಕರನ್ನಾಗಿ ಮಾಡಿದರೆ ದೇಶವು ಅಧೋಗತಿಗ ಇಳಿಯುತ್ತದೆ.

ನಮಗಿಂತಲೂ ಕೈಗಾರಿಕೆಯಲ್ಲಾಗಲಿ ಅಥವಾ ವ್ಯವಸಾಯದಲ್ಲಾಗಲಿ ಮುಂದುವರೆದಿರತಕ್ಕ ದೇಶವಾದ ಅಮೇರಿಕಾದಲ್ಲಿ ಈ ಫ್ಯಾಮ್ಲಿ ಪ್ಲಾನಿಂಗ್ ಕಾರ್ಯವು ಬಹಳ ಯಶಸ್ವಿಯಾಗಿ ನಡೆಯುತ್ತಿದೆ. ನಾವು ಸಹ ಈ ಮಿತ ಸಂತಾನದ ಮಹತ್ವವವನ್ನರಿತು ದೇಶಕ್ಕೆ ಇದರಿಂದ ಕಲ್ಯಾಣವಾಗುತ್ತದೆಂಬುದನ್ನು ಅರಿತು, ಸಮಸ್ತರೂ ಇದನ್ನು ಅನುಸರಿಸಬೇಕೆಂದು ಬಿನ್ನವಿಸಿ ಈ ನಿರ್ಣಯಕ್ಕೆ ನನ್ನ ಹೃತ್ಪೂರ್ವಕವಾದ ಬೆಂಬಲವನ್ನು ಕೊಡುತ್ತೇನೆ.

ಶ್ರೀ ಜೆ.ಹೆಚ್. ವೀರಣ್ಣ (ನಾಮನಿರ್ದೇಶನ) :-

ಮಕ್ಕಳು ಆಗುವುದು ಅಥವಾ ಬಿಡುವುದು ದೈವ ಸಂಕಲ್ಪಕ್ಕೆ ಸೇರಿದ ಪ್ರಶ್ನೆ. ಕೆಲವರಿಗೆ ಬೇಡ ಬೇಡ ಎಂದರೂ ಮಕ್ಕಳಾಗುತ್ತವೆ. ಕೆಲವರಿಗೆ ಮಕ್ಕಳಾಗಬೇಕೆಂದು ಏನೇನು ಸಾಧನೆ ಮಾಡಿದರೂ ಆಗುವುದಿಲ್ಲ.

ಆದುದರಿಂದ ಇದು ದೈವದತ್ತವಾದ ಕೆಲಸವೇ ಹೊರತು ದಾಂಪತ್ಯ ಜೀವನದಿಂದಲೇ ಮಕ್ಕಳಾಗುತ್ತವೆಂದು ನಾನು ನಂಬಲಾರೆ. ಇದು ದೈವಾನುಗ್ರಹದಿಂದ ಬರತಕ್ಕದ್ದು. ಪೂರ್ವದ ಸಂಸ್ಕೃತಿಯನ್ನನುಸರಿಸಿ ಬಂದಿರುವುದರಿಂದ ಈಹೊತ್ತು ಹೆಚ್ಚು ಮಕ್ಕಳಾದರೆ ತೊಂದರೆ ಎಂದು ಹೇಳುವುದನ್ನು ಒಪ್ಪುವುದಕ್ಕಾಗುವುದಿಲ್ಲ. ಅನೇಕರು ಧನಿಕರಾಗಿರುತ್ತಾರೆ. ಅವರಿಗೆ ಮಕ್ಕಳಿರುವುದೇ ಇಲ್ಲ. ಅದೇ ಬಡವರಿಗೆ ಬೇಕಾದಷ್ಟು ಮಕ್ಕಳಿರುತ್ತಾರೆ. ಆದ್ದರಿಂದ ಪೂರ್ವ ಪುಣ್ಯದಿಂದ ಈ ಫಲ ಬರುತ್ತದೆಯೇ ಹೊರತು ನಮ್ಮ ಕೈಯಿಂದ ಏನೂ ಆಗುವುದಿಲ್ಲ.

ಕಡು ಬಡವನಾದರೂ ಮನೆಗೆ ಹೋದಕೂಡಲೆ ಮಕ್ಕಳನ್ನು ನೋಡಿ ಬಹಳ ಸಂತೋಷವಾಗುತ್ತದೆ. ಅವು ಹಿಂದೆ ಮುಂದೆ ತಿರುಗಿಕೊಂಡು ಚಿಕ್ಕಪ್ಪ, ತಾತಾ ಎಂದು ಸುತ್ತಾಡುತ್ತಿದ್ದರೆ ಏನು ಆನಂದವಾಗುತ್ತದೆ. ಎಂಬುದು ಅನುಭವಿಸಿದವರಿಗೇ ಗೊತ್ತು. ಬಲವಂತವಾಗಿ ಮಕ್ಕಳು ಬೇಡ ಎಂದು ವಾದ ಮಾಡುವವರು ಭಗವಂತನ ಸಂಕಲ್ಪವನ್ನು ಮೀರಿದಂತಾಗುತ್ತದೆ. ಮಾನ್ಯ ಮಿತ್ರರು ಹೇಳಿದ ಹಾಗೆ, ಧನಿಕರಿಗೆ ಮಕ್ಕಳನ್ನು ಮುಂದಕ್ಕೆ ತರುವುದಕ್ಕೆ ವಿದ್ಯಾವಂತರನ್ನಾಗಿ ಮಾಡಿ ಪ್ರಪಂಚದಲ್ಲಿ ಅವರನ್ನು ಉತ್ತಮ ಸ್ಥಿತಿಗೆ ತರುವುದಕ್ಕೆ

ಏನೂ ಕಷ್ಟವಿಲ್ಲ. ಅದೇ ರೀತಿಯಲ್ಲಿ ಸಾಮಾನ್ಯ ಜನರೂ ಕೂಡ ಮಾಡಬಹುದಾಗಿದೆ.

ಶ್ರೀ ಬಿ.ಟಿ. ರಾಮಯ್ಯ (ವಿಧಾನಸಭಾ ಕ್ಷೇತ್ರ):-

ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣ ಕರ್ತನಾದ ಪರಮಾತ್ಮ ಒಬ್ಬನಿದ್ದಾನೆ. ಅವನು ತನ್ನ ಇಚ್ಛಾನುಸಾರ ಅವರವರ ಕರ್ಮಕ್ಕನುಸಾರವಾಗಿ ಫಲ ಕೊಡುತ್ತಾನೆ. ಅದು ಮನುಷ್ಯನ ಕೈಯಲ್ಲಿಲ್ಲ ಎಂಬುದನ್ನು ಮರೆಯಬಾರದು. ಅವನಿಗಿರುವ ಶಕ್ತಿ ನಮಗಿಲ್ಲ. ಅವನ ಮಾಯಾ ಜಾಲವನ್ನರಿಯುವುದು ಕಷ್ಟ ಎಂಬುದನ್ನು ತಿಳಿಯಬೇಕು. ಪ್ರತಿಯೊಬ್ಬರನ್ನು ಕಾಪಾಡುವ ಭಾರ ಆ ಪರಮಾತ್ಮನಿಗೆ ಸೇರಿದೆ. ಹಾಗಿರುವಾಗ ಅದನ್ನು ಚೆನ್ನಾಗಿ ತಿಳಿದಿದ್ದರೆ. ಖಂಡಿತ ಇಂತಹ ನಿರ್ಣಯವನ್ನು ಇಲ್ಲಿ ತಂದು ಮಾನ್ಯ ಸದಸ್ಯರು ಇದನ್ನು ಸಮರ್ಥಿಸುತ್ತಿರಲ್ಲಿಲ್ಲ. ಮತ್ತು ಅಂಗೀಕರಿಸುತ್ತಿರಲಿಲ್ಲ.

ಒಬ್ಬರು ಐಶ್ವರ್ಯವಂತರಾಗುವುದಕ್ಕೂ ಮತ್ತು ಇನ್ನೊಬ್ಬರು ಬಡವರಾಗುವುದಕ್ಕೂ ಕಾರಣವೇನು? ಅದು ಅವರವರ ಕರ್ಮಕ್ಕೆ ತಕ್ಕಂತೆ ಭಗವಂತನ ಆಜ್ಞೆಯ ಪ್ರಕಾರ ದೊರೆಯತಕ್ಕದ್ದು. ಪ್ರತಿಯೊಬ್ಬನೂ ಅವನು ಮಾಡಿದ ಪಾಪ ಶೇಷವನ್ನು ಅನುಭವಿಸಲೇ ಬೇಕು. ಅದಕ್ಕೆ ತಕ್ಕಂತೆ ಮುಂದಿನ ಜೀವನ ಯಾವ ರೀತಿ ನಡೆಯಬೇಕೆಂಬುದನ್ನು ಪರಮಾತ್ಮ ನಿರ್ಣಯಿಸುತ್ತಾನೆ. ಕಷ್ಟಗಳು, ಅನುಕೂಲಗಳು ಕರ್ಮಾನುಸಾರವಾಗಿ ಬರುತ್ತಲಿರುತ್ತವೆ. ಅದು ಹೊರತು ಬೇರೆ ಕಾರಣಗಳೇನೂ ಇಲ್ಲ. ಕಷ್ಟ ಬರುತ್ತದೆ, ನಿಜ. ಆದರೆ ಅದನ್ನು ದಿಟ್ಟತನದಿಂದ, ಧೈರ್ಯದಿಂದ ಎದುರಿಸಿ ನಿಲ್ಲಬೇಕು. ಮಾನ್ಯ ಸ್ನೇಹಿತರು ಹೇಳಿದ ಹಾಗೆ ಹದಿನೆಂಟು ಜನ ಮಕ್ಕಳಿದ್ದರೂ ಅವರನ್ನು ವಿವೇಕದಿಂದ ಸಾಕಿ ಬುದ್ಧಿವಂತರನ್ನಾಗಿ ಮಾಡಬೇಕಾದುದು ನಮ್ಮ ಕರ್ತವ್ಯ. ಅವರಿಗೆ ತಕ್ಕ ಉದ್ಯೋಗಗಳನ್ನು ಕಲ್ಪಿಸಬೇಕು. ಅದು ಬಿಟ್ಟು ಈಗ ಆಹಾರ ಸಮಸ್ಯೆ ಉಲ್ಬಣವಾಗಿದೆ. ಸಂಪಾದನಾ ಶಕ್ತಿ ಕಡಿಮೆ, ಏಕಾನಮಿಯಾಗಬೇಕು ಎಂದು ಮಕ್ಕಳ ಸಂಖ್ಯೆ ಕಡಿಮೆ ಮಾಡಬೇಕೆಂದು ತಂದಿರುವ ನಿರ್ಣಯ ಸಾಧುವಾದುದಲ್ಲ. ಒಂದುವೇಳೆ ಈ ನಿರ್ಣಯವನ್ನು ಕಾರ್ಯ ರೂಪಕ್ಕೆ ತರುವುದಾದರೆ ನಾಳೆ ಯುದ್ಧ ಸಂಭವಿಸಿದರೆ ಸೈನ್ಯಕ್ಕೆ ಜನ ಬೇಕೆಂದರೆ ಸಾಕಷ್ಟು ಜನ ದೊರೆಯುತ್ತಾರೆಯೇ. ಮುಖ್ಯರಾಗಿ ಎಲ್ಲಾ ಸಂಪತ್ತು ಬೇಕು.

ಶ್ರೀಮತಿ ಎಂ.ಆರ್. ಲಕ್ಷಮ್ಮ (ವಿಧಾನಸಭಾ ಕ್ಷೇತ್ರ) :-

ಮಿತ ಸಂತಾನಕ್ಕೆ ಮೂಲ ಕಾರಣವೇನಿದೆ ಎಂದರೆ ಬಡತನ ಮತ್ತು ತಾಯಿಯ ದೌರ್ಬಲ್ಯ. ದೇವರೆ ಕೊಡುವನೆಂದು ಪ್ರೀತಿಯಿಂದ ಕಂಡರೂ ಸಾಕಲು ಶಕ್ತಿ ಇಲ್ಲದೆ ಮತ್ತು ಬಡತನ ಅನಾರೋಗ್ಯ ಮುಂತಾದ ಕಾರಣಗಳಿಂದ ಮಕ್ಕಳಾಗುತ್ತವೆ ಎಂದು ಹೆದರುತ್ತಾರೆ. ಆದರೆ ಮೂರು ನಾಲ್ಕು ವರ್ಷಗಳಿಗೊಂದು ಸಲ ಮನೆಯಲ್ಲಿ ಒಂದು ಮಗು ಹುಟ್ಟಲಿ ಎಂದು ಸಹಜವಾದ ಅಪೇಕ್ಷೆ ಅನೇಕ ತಾಯಂದಿರಿಗೆ ಇರುತ್ತದೆ. ಮೂರು ನಾಲ್ಕು ವರ್ಷಗಳಿಗೊಮ್ಮೆ ಮಗುವಾದರೆ ಬೇಜಾರು ಇರುವುದಿಲ್ಲ. ಇದನ್ನು ಮಿತ ಸಂತಾನವೆಂದು ಹೇಳುವುದು. ಮಿತ ಸಂತಾನವೆಂದರೆ ಕೃತ್ರಿಮ ವಿಧಾನದಿಂದ ನಿರೋಧ ಮಾಡುವುದಲ್ಲ.

ಸರ್ಕಾರ ಆಸ್ಪತ್ರೆಯಲ್ಲಿ ಮಕ್ಕಳು ಹುಟ್ಟದಿರಲು ಕ್ಲಿನಿಕ್ ಸ್ಥಾಪಿಸುವುದಕ್ಕಿಂತ ಮಕ್ಕಳು ಹೆಚ್ಚಾಗಿರುವ ಬಡ ಸಂಸಾರಗಳಿಗೆ ಅನುಕೂಲತೆ ಕಲ್ಪಿಸಿ ಕೊಡಲಿ. ಹೆಚ್ಚಿನ ಸಂಬಳ ಸಾರಿಗೆ ತುಟ್ಟಿ ಭತ್ಯೆ ಮುಂತಾದವನ್ನು ಹೆಚ್ಚಿಸಿ ಇವರಿಗೆ ಸಹಾಯ ಮಾಡಲಿ. ಅನೇಕರು ಒಳ್ಳೆಯ ಮಕ್ಕಳನ್ನು ಪಡೆದು ಸಾಕುವ ಸೌಕರ್ಯವಿಲ್ಲದೆ ಒದ್ದಾಡುತ್ತಿದ್ದಾರೆ. ಅಂತಹವರಿಗೆ ತಕ್ಕ ಸೌಕರ್ಯ ಕಲ್ಪಿಸಿ ಸಹಾಯ ಮಾಡಬಹುದು. ಕೇವಲ ಕ್ಲಿನಿಕ್ ಸ್ಥಾಪನೆ ಮಾಡುವುದರಿಂದ ಸದ್ಯದ ಸ್ಥಿತಿಯಲ್ಲಿ ಪ್ರಜೆಗಳಿಗೆ ಹೆಚ್ಚು ಸಹಾಯವಾಗಲಾರದು".

ಈ ಅಭಿಪ್ರಾಯಗಳನ್ನು ಮನನ ಮಾಡಿಕೊಂಡು ಸಭಾನಾಯಕರ ಸ್ಥಾನದಿಂದ ಸಿದ್ದಲಿಂಗಯ್ಯನವರು ನಿರ್ಣಯವನ್ನು ಎದುರಿಸಿದ ರೀತಿ ಹೀಗಿದೆ:

**ಶ್ರೀ ಟಿ. ಸಿದ್ದಲಿಂಗಯ್ಯ ಕೈಗಾರಿಕಾ ಶಾಖೆ ಮಂತ್ರಿಗಳು** :– ಅಧ್ಯಕ್ಷರೇ, ಶ್ರೀ ವೆಂಕಟರಾಮಯ್ಯನವರು ಮಂಡಿಸಿರತಕ್ಕ ಠರಾವು ಬಹಳ ಪ್ರಾಕ್ಟಿಕಲ್ ಆಗಿಯೂ ಮತ್ತು ಎಲ್ಲರ ಸಹಾನುಭೂತಿಗೆ ಅರ್ಹವಾಗಿಯೂ ಇದೆ ಎಂದು ಸರ್ಕಾರದ ಪರವಾಗಿ ನಾನು ಹೇಳುತ್ತೇನೆ. ಈ ಒಂದು ಚರ್ಚೆಯಲ್ಲಿ "ಸ್ಕೋಪ್ ಆಫ್ ದ ಡಿಸ್ಕಷನ್" ಬಹಳ ಜಾಸ್ತಿಯಾಯಿತು. ಅವರು ಕೇಳಿರುವುದು ಸರ್ಕಾರದವರು ಅಲ್ಲಲ್ಲಿ ಮಿತ ಸಂತಾನ ವ್ಯವಸ್ಥೆಗೆ ಸಂಬಂಧಪಟ್ಟ ಚಿಕಿತ್ಸಾ ಶಾಖೆಯನ್ನು ಏರ್ಪಡಿಸಬೇಕೆಂದು; ಇಷ್ಟೇ ಮಕ್ಕಳಿರಬೇಕೆಂದು ಕಾನೂನು ಮಾಡಿ ಎಂದು ಅವರು ಕೇಳುತ್ತಿಲ್ಲ. ಎಲ್ಲರೂ ಇದೇ ರೀತಿ ನಡೆಯಬೇಕೆಂದು ಹೇಳುತ್ತಿಲ್ಲ. ಬಡವರು ಅಥವಾ ಬೇಕಾದವರು ಇಷ್ಟಪಟ್ಟರೆ ಸಹಾಯ ಪಡೆಯಲು ಅನುಕೂಲವಾಗುವಂತೆ ಇಂತಹ ಕ್ಲಿನಿಕ್‌ಗಳನ್ನು ಪ್ರತಿಯೊಂದು ಕಡೆ ಆಸ್ಪತ್ರೆಯಲ್ಲಿ ಪ್ರಾರಂಭಿಸಬೇಕೆಂದು ಕೇಳಿದ್ದಾರೆಯೇ ವಿನಃ ಮತ್ತೇನೂ ಇಲ್ಲ. ಈಗ ಅನೇಕವಾಗಿ ವೇದಾಂತದ ಮಾತುಗಳು ಮುಂತಾದವು ಸಭೆಯ ಮುಂದೆ ಪ್ರಸ್ತಾಪಿಸಲ್ಪಟ್ಟಿವೆ. ಆದರೆ ಪ್ರಪಂಚದಲ್ಲಿರುವ ಕಷ್ಟ ಸುಖಗಳನ್ನು ನಾವು ಮರೆಯಬಾರದು. ಖಂಡಿತವಾಗಿ ನಾವೆಲ್ಲರೂ ಕೂಡ ನಮ್ಮ ಸಂಸ್ಕೃತಿಯನ್ನು ಆದಷ್ಟು ತಿಳಿದುಕೊಂಡಿದ್ದೇವೆ. ಅದನ್ನು ಆದಷ್ಟು ಅಭ್ಯಾಸ ಮಾಡಬೇಕಾದುದ್ದು ಕೂಡ ಬಹಳ ಅವಶ್ಯಕ. ಈಗ ಎಲ್ಲೆಲ್ಲಿಯೂ ಪ್ರತಿಯೊಂದರಲ್ಲೂ ಕಂಟ್ರೋಲ್ ಇದೆ. ಪ್ರಪಂಚದಲ್ಲೆಲ್ಲ ಕಂಟ್ರೋಲ್ ಇದೆ. ಪೂರ್ವದಲ್ಲಿ ನಮ್ಮ ದೇಶದಲ್ಲಿ ಜನಸಂಖ್ಯೆ ಬಹಳವಾಗಿ ಕಡಿಮೆ ಇದ್ದಾಗ ಇಂತಹದ್ದೇನೂ ಇರಬೇಕಾಗಿರಲಿಲ್ಲ. ಆಗ ಸೆಲ್ಫ್ ಕಂಟ್ರೋಲ್ ಇತ್ತು. ಈಗಲೂ ಸೆಲ್ಫ್ ಕಂಟ್ರೋಲಿಗೆ ಈ ನಿರ್ಣಯ ವಿರೋಧವಾಗೇನೂ ಇಲ್ಲ. ಈ ಸೆಲ್ಫ್ ಕಂಟ್ರೋಲ್ ಇಲ್ಲದಿರುವುದರಿಂದ ಬಹಳ ಕಷ್ಟ ಬಂದಿದೆ. ಎಲ್ಲ ತರಹ ತೊಂದರೆಯಾಗಿದೆ. ಇದನ್ನು ನಾವೆಲ್ಲರೂ ಮನಗಾಣಬೇಕು. ಆದರೆ ನಮ್ಮ ನೀತಿ, ಸಂಸ್ಕೃತಿ ಮುಂತಾದವನ್ನು ಮುರಿಯಬೇಕೆಂಬ ಅಭಿಪ್ರಾಯವಿಲ್ಲ. ಮಕ್ಕಳ ಸುಖವನ್ನು ತಂದೆ ತಾಯಿಗಳು ಹಾಳು ಮಾಡಬೇಕೆಂಬ 'ಉದ್ದೇಶ' ಎಂದ ಇದರಲ್ಲಿ ಕಾಣುವುದಿಲ್ಲ. ಅಲ್ಲದೆ ಪ್ರಪಂಚದ ಪರಿಸ್ಥಿತಿ ನೋಡಿ ಆದಷ್ಟು ಸುಖವಾಗಿ, ಚೆನ್ನಾಗಿ ಮಕ್ಕಳನ್ನು ಬೆಳೆಸಬೇಕೆಂಬ ಒಂದು ಸದುದ್ದೇಶದಿಂದ ಈ ಠರಾವನ್ನು ತಂದಿದ್ದಾರೆ. ಇದಕ್ಕೆ ಪ್ರಪಂಚದ ಎಲ್ಲ ನಾಗರೀಕ ದೇಶಗಳ ಬೆಂಬಲ ಸಹ ಇದೆ. ಈ ಇಂಗ್ಲೆಂಡ್ ಅಮೇರಿಕ ಮುಂತಾದ ಕಡೆ ನಾವೇನು ಕ್ಲಿನಿಕ್ಸ್ ತೆರೆಯಬೇಕಾಗಿಲ್ಲ. ಜನರು ತಾವಾಗಿಯೇ ಹೋಗಿ ತಮಗೆ ಮಕ್ಕಳು ಜಾಸ್ತಿಯಾಯಿತು, ಬದುಕುವುದು ಕಷ್ಟ ಎಂದು ಹೇಳಿ ಆಸ್ಪತ್ರೆಗಳಿಂದ ಸಹಾಯ ಪಡೆಯುತ್ತಾರೆ. ಅವರೆಲ್ಲರೂ ಈ

ತರಹ ಶೇಕಡ ನೂರರಷ್ಟು ವಿದ್ಯಾವಂತರಾಗಿರುವುದರಿಂದ ಆ ದೇಶಗಳಲ್ಲಿ ನಮ್ಮ ಕಷ್ಟವಿಲ್ಲ, ನಮ್ಮ ದೇಶದ ಬಡತನವೂ ಇಲ್ಲ. ಪ್ರಪಂಚದಲ್ಲಿ ಎಲ್ಲ ದೇಶಗಳಿಗಿಂತ ನಮ್ಮ ಇಂಡಿಯಾ ದೇಶದಲ್ಲಿ ಈ ಕಷ್ಟ ಬಹಳ ಜಾಸ್ತಿಯೆಂದು ಹೇಳಬಹುದು. ಸಂಪತ್ತಿದ್ದರೂ ಮಾನ್ಯ ಶಾಸ್ತ್ರಿಗಳು ಹೇಳಿದ ಹಾಗೆ ನಮ್ಮ ದೇಶದಲ್ಲಿರುವ ಸೋಮಾರಿತನ, ಉದಾಸೀನ ಮನೋಭಾವ ನೋಡಿದರೆ ಎಲ್ಲ ದೇವರು ನೋಡಿಕೊಳ್ಳುತ್ತಾನೆ ಎಂಬ ನಂಬಿಕೆಯಿಂದ ನಾವೇನು ಕೆಲಸ ಮಾಡದೇ ಇದ್ದರೆ ದೇವರು ಹೇಗೆ ಕಾಪಾಡುತ್ತಾನೆ? ಶಾಸ್ತ್ರಿಗಳು ಈ ಮಾತನ್ನು ಹೇಳಿದ ತಕ್ಷಣ ಎಲ್ಲರಿಗೂ ಈ ಅನುಮಾನ ಬಂತು. ಹೆಚ್ಚು ಸಂಪಾದನೆ ಆಗುವವರೆಗೆ ಅಥವಾ ಸೆಲ್ಫ್ ಕಂಟ್ರೋಲಿನಂತೆ ಸಂಸಾರ ನಡೆಸುವ ಶಕ್ತಿ ಜನರಿಗೆ ಬರುವವರೆಗೆ ಇಂತಹ ಕ್ಲಿನಿಕ್‌ಗಳು ಆಗಬೇಕು. ಈಗ ಪ್ರಪಂಚವೇ ಸ್ವಲ್ಪ ತಲೆ ಕೆಳಗಾಗಿದೆ.

ಆ ಪೂರ್ವದ ಸಂಸ್ಕೃತಿ ಹೋಯಿತು, ಪೂರ್ವದ ಕಂದಾಚಾರ ಪದ್ಧತಿ ಬಿಟ್ಟು ಬಿಡಬೇಕೆಂದು ಎಲ್ಲರೂ ಹೇಳುತ್ತಾರೆ. ಆದರೆ ಎಲ್ಲದರಲ್ಲೂ ಪೂರ್ವದ ಕಂದಾಚಾರ ಬಿಡಬೇಕಾಗಿಲ್ಲ. ನಮಗೆ ಯಾವುದರಲ್ಲಿ ಒಳ್ಳೆಯದು ಎಂದು ತೋರುತ್ತದೆಯೋ ಅದನ್ನು ಇಟ್ಟುಕೊಳ್ಳೋಣ. ಈ ಸೆಲ್ಫ್ ಕಂಟ್ರೋಲ್ ಎಂಬುದು ಬಹಳ ಮುಖ್ಯವಾದುದು. ಈ ಉದ್ದೇಶವನ್ನು ಸರ್ಕಾರ ಬಹಳವಾಗಿ ಮೆಚ್ಚುತ್ತದೆ. ಈಗಾಗಲೇ ಸರ್ಕಾರ ಏನು ಮಾಡಿದೆ ಎಂದರೆ ಪ್ರೋಸ್ ಅಂಡ್ ಕಾನ್ಸ್ ವಿಚಾರವಾಗಿ ಈಗಾಗಲೇ ಚರ್ಚೆ ನಡೆದಿರುವುದರಿಂದ ನಾನು ಅದಕ್ಕೆ ಹೋಗುವುದಿಲ್ಲ. 1930ಕ್ಕೆ ಇಸ್ವಿಯಲ್ಲೇ ಸರ್ಕಾರದವರು ಬರ್ತ್ ಕಂಟ್ರೋಲ್ ಕ್ಲಿನಿಕ್ಸನ್ನು ಪ್ರಾರಂಭ ಮಾಡಿದ್ದಾರೆ. ಅವರ ಉದ್ದೇಶ ಇನ್ನೇನು ಅಲ್ಲ. ಎಲ್ಲಕ್ಕಿಂತಲೂ ಫಂಡಮೆಂಟಲ್ ಕಾನ್ಷಸ್‌ನೆಸ್ ಎಂದರೆ ಪ್ಲಾನ್ ಮಾಡಿಕೊಂಡು ಜೀವನ ಮಾಡಿರಿ ಎಂಬ ಒಂದು ಪ್ಲಾನಿಂಗ್ ಅಷ್ಟೇ. ನಮ್ಮ ದೇಶದಲ್ಲಿ ಪ್ಲಾನಿಂಗ್ ಇಲ್ಲ. ಆದದ್ದು ಆಗುತ್ತದೆ, ಹೋದದ್ದು ಹೋಗುತ್ತದೆ. ದೇವರು ಕೊಡುತ್ತಾನೆ, ಹುಲ್ಲು ಮೇಯಿಸುತ್ತಾನೆ ಎಂಬ ನಂಬಿಕೆ ಇದೆ. ಪ್ಲಾನ್ ಇಲ್ಲ. ನಾವು ಒಂದು ಪ್ಲಾನ್ ಹಾಕಿಕೊಳ್ಳಬೇಕು. ಎಷ್ಟು ಮಟ್ಟಿಗೆ ಮಕ್ಕಳು ಕಡಿಮೆಯಾದರೆ ಅಷ್ಟು ಮಟ್ಟಿಗೆ ಸುಖವಾಗುತ್ತದೆ ಎಂದು ಅಷ್ಟೇ. ದೇವರು ಕೊಡುವುದಿಲ್ಲವೆಂದು ಅಲ್ಲ. ದೇವರು ಚೆನ್ನಾಗಿ ಬುದ್ದಿ ಕೊಟ್ಟಿದ್ದಕ್ಕೆ ಆ ಬುದ್ದಿಯಿಂದ ವಿಚಾರ ಮಾಡಿ ತಿಳಿದುಕೊಂಡು, ಸೆಲ್ಫ್ ಕಂಟ್ರೋಲ್ ಕೈಯಲ್ಲಿ ಆಗದಿದ್ದರೇ ಬೇರೆ ವಿಧವಾದ ಕಂಟ್ರೋಲ್‌ನಿಂದ ಸಂಸಾರ ಸುಖವನ್ನು ಚೆನ್ನಾಗಿ ಇಟ್ಟುಕೊಳ್ಳಬೇಕು: ಒಂದು ನಿಗದಿ ಮಾಡಿಕೊಳ್ಳಬೇಕು: one must lead a planned life. ಶಾಸ್ತ್ರಗಳು ಹೇಳುವುದೂ ಅಷ್ಟೇ. ವೇದಾಂತವೂ ಅಷ್ಟೇ. ಪ್ಲಾನ್ ಹಾಕಿಕೊಂಡು ಯಾವ ರೀತಿ ನಮ್ಮ ಜೀವನದಲ್ಲಿ ಬ್ರಹ್ಮಚರ್ಯ, ಗೃಹಸ್ಥಾಶ್ರಮ, ಸನ್ಯಾಸಾಶ್ರಮ ವಹಿಸಬೇಕೆಂದಿದೆಯೋ ಅದನ್ನು ಅನುಸರಿಸಿದರೆ ಸಾಕು. Western Ideas ಅನುಕರಣೆ ಮಾಡಬೇಡಿ ಎಂದು ಹೇಳಬೇಕಾಗಿಲ್ಲ. ವೇದಾಂತ ಹೇಳುವುದನ್ನು ಅನುಸರಿಸಿದರೆ ಸಾಕು. ನಮ್ಮ ದೇಶದಲ್ಲಿ ಕಷ್ಟ ತೋರುವುದಿಲ್ಲ. ದೇವರು ಬುದ್ದಿ ಕೊಟ್ಟಿರುವುದರಿಂದ ನಾವು ನಾಗರೀಕರು ಎಂದು ತಿಳಿದುಕೊಂಡಿದ್ದೇವೆ. ನಾಗರೀಕರು ಎಂದು ಹೇಳಿಕೊಳ್ಳುತ್ತಾ ಇರುವುದರಿಂದ ಈಗಿನ 1952ನೇ ಇಸವಿಯಲ್ಲಿ ನಾಗರೀಕರಿಗೆ ತಕ್ಕಂತೆ ನಮ್ಮ ಜೀವನವನ್ನು ಬದಲಾವಣೆ ಮಾಡಿಕೊಂಡು ಹೋಗಬೇಕು. ಅದು ಬಹಳ ಅವಶ್ಯಕವೆಂದು ಕಾಣುತ್ತದೆ. ಆ ದೃಷ್ಟಿಯಿಂದ ಎಲ್ಲ ನಾಗರೀಕ

ಸರ್ಕಾರಗಳೂ ಸಹ ಬರ್ತ್ ಕಂಟ್ರೋಲ್ ಕ್ಲಿನಿಕ್ಸ್ ತೆಗೆದು ತಿಳುವಳಿಕೆ ಕೊಟ್ಟರೆ ಅನುಕೂಲವಾಗುತ್ತದೆ. ಇಷ್ಟೇ ಮಕ್ಕಳು ಎಂದು ಪ್ಲಾನ್ ಹಾಕಿಕೊಳ್ಳಿ. ಸೆಲ್ಫ್ ಕಂಟ್ರೋಲ್ ಮಾಡಿಕೊಳ್ಳಿ. ಪ್ಲಾನ್ ಪ್ರಕಾರ ಪ್ರತಿಯೊಂದೂ ನಡೆಸಿ, ಉದಾಸೀನದಿಂದ, ತಾತ್ಸಾರದಿಂದ ಸಿಕ್ಕಿದಹಾಗೆ ಬೇಕಾಬಿಟ್ಟಿ ಜೀವನವನ್ನು ಸಂಸಾರವನ್ನು ನಡೆಸಿಕೊಂಡು ಹೋಗಬೇಡಿ. ಎಂಬ ಒಂದು ತತ್ವ ಇದರಲ್ಲಿ ಅಡಕವಾಗಿದೆಯೇ ಹೊರತು ಮತ್ತಾವುದೂ ಕಾಣುವುದಿಲ್ಲ. ಆದ್ದರಿಂದ ಸರ್ಕಾರದವರು ಅದನ್ನು ಅರಿತು 1930ನೇ ಇಸವಿಯಲ್ಲಿ ಬೆಂಗಳೂರು ಮತ್ತು ಮೈಸೂರು ಸಿಟಿಗಳಲ್ಲಿರತಕ್ಕ ಮೇಜರ್ ಆಸ್ಪತ್ರೆಗಳಲ್ಲಿ ಬರ್ತ್ ಕಂಟ್ರೋಲ್ ಕ್ಲಿನಿಕ್ಕುಗಳನ್ನು ಪ್ರಾರಂಭ ಮಾಡಿ ಅವರಿಗೆ ಬೇಕಾದಂತಹ ಸಲಕರಣೆಗಳನ್ನು ಮುಫತ್ತಾಗಿ ಒದಗಿಸಿದರು. ಯುದ್ಧಕಾಲದಲ್ಲಿ ಸಲಕರಣೆಗಳು ಬಹಳ ಬೆಲೆಯಾಗಿ ಸಿಕ್ಕದೇ ಹೋದುದರಿಂದ ಇದುವರೆಗೂ ನಿಲ್ಲಿಸಿಬಿಟ್ಟಿದ್ದರು. ಈಚೆಗೆ ಇಂಡಿಯಾ ಸರ್ಕಾರದವರು ಸಹ ಈ ತತ್ವವನ್ನು ಒಪ್ಪಿಕೊಂಡು ವರ್ಲ್ಡ್ ಹೆಲ್ತ್ ಆರ್ಗನೈಜೇಶನ್ ಜೊತೆಗೆ ಸಹಕರಿಸಿ ನಮ್ಮ ರಾಮನಗರದಲ್ಲಿ ಫ್ಯಾಮಿಲ್ಲಿ ಪ್ಲಾನಿಂಗ್ ಸೆಂಟರ್ ಎಂದು ಒಂದು ಸೆಂಟರನ್ನು ಪ್ರಾರಂಭ ಮಾಡಿದ್ದಾರೆ. ಮುಖ್ಯವಾಗಿ ಜನಗಳಿಗೆ ಬೋಧನೆ ಹೇಳುತ್ತಾರೆ. ನಿಮ್ಮ ಕಷ್ಟ ಸುಖ ತಿಳಿದುಕೊಂಡು ನೀವು ಒಂದು ಫ್ಯಾಮಿಲ್ಲಿ ಪ್ಲಾನಿಂಗ್ ಮಾಡಿಕೊಳ್ಳಿ. ಪ್ಲಾನ್ ಪ್ರಕಾರ ನಡೆಯಿರಿ, ಪ್ಲಾನ್ ಇಲ್ಲದೇ ದೇವರೇ ಎಲ್ಲವನ್ನು ನೋಡಿಕೊಳ್ಳುತ್ತಾನೆ ಎಂದು ಸ್ವೇಚ್ಛೆಯಾಗಿ ಇರಬೇಡಿ ಎಂಬ ಒಂದು ಉದ್ದೇಶವೇ ಹೊರತು ಇದರಲ್ಲಿ ಬರೀ ಪ್ರಾಪಂಚಿಕ ದೃಷ್ಟಿಯೊಂದೇ ಇಲ್ಲ, ಪಾರಮಾರ್ಥಿಕ ದೃಷ್ಟಿಯೂ ಇದೆ ಎಂದು ಹೇಳುತ್ತೇನೆ. ದೇವರು ಮಕ್ಕಳನ್ನು ಕೊಡುತ್ತಾನೆ ಎಂದು ವಾದ ಮಾಡುತ್ತಾರೆ. ದೇವರು ಕೊಡತಕ್ಕ ಪ್ರಪಂಚದಲ್ಲಿರತಕ್ಕ ಎಲ್ಲ ಮಕ್ಕಳೂ ಸುಖವಾಗಿದ್ದರೆ ಅದಕ್ಕೆ ಯಾರೂ ಆಕ್ಷೇಪಣೆಮಾಡಬೇಕಾಗಿಲ್ಲ. ಶ್ರೀಯುತ ಬ್ರಹ್ಮಯ್ಯನವರಿಗೆ 15ಜನ ಮಕ್ಕಳು. ಬೇಕಾದಷ್ಟು ಐಶ್ವರ್ಯ ದೇವರು ಕೊಟ್ಟಿದ್ದಾನೆ. 15 ಅಲ್ಲ ಇನ್ನೂ 18 ಕೊಡಲಿ (ಸಭೆಯಲ್ಲಿ ನಗು) ಇದು ಕಡ್ಡಾಯವಾಗಿ ಮಾಡತಕ್ಕ ಕೆಲಸ ಅಲ್ಲ; ಸ್ವಯಂ ಪ್ರೇರಿತರಾಗಿ ಯಾರಿಗೆ ಬೇಕೆಂದು ಕೇಳುತ್ತಾರೋ ಅವರಿಗೆ ಕೊಡುವುದೇ ಹೊರತು ಇದು ಒಂದು ಲೆಜಿಸ್ಲೇಷನ್ ಅಲ್ಲ. ಕಾನೂನು ಮಾಡಿ ಎಂದು ಹೇಳುತ್ತಿಲ್ಲ. ಇದರ ಅರ್ಥ ಏನೆಂದರೆ ಬರ್ತ್ ಕಂಟ್ರೋಲ್ ಕ್ಲಿನಿಕ್ ಪ್ರಾರಂಭ ಮಾಡಿ ಬಡವರಿಗೆ ಸಹಾಯ ಮಾಡಿ ಎಂದು, ಅಷ್ಟೇ. ರಾಮನಗರದಲ್ಲಿ ಒಂದು ಪ್ರಯೋಗ ನಡೆಯುತ್ತಾ ಇದೆ. ಸರ್ಕಾರದವರು ಯೋಚನೆ ಮಾಡಿ ಯಾರ ಮನಸ್ಸಿಗೂ ನೋವು ಮಾಡದೆ ಯಾರಿಗೆ ಅದರ ಅವಶ್ಯಕತೆ ಇದೆಯೋ ಯಾರಿಗೆ ಮನಸ್ಸು ಇದೆಯೋ, ಯಾರಿಗೆ ಒಳ್ಳೆಯದಾಗುತ್ತದೆಯೋ, ಅಂಥವರು ಯಾರು ತಾವೇ ಮುಂದುಬರುತ್ತಾರೆಯೋ ಅವರಿಗೆ ಸಹಾಯ ಮಾಡತಕ್ಕ ಒಂದು ಉದ್ದೇಶದಿಂದ ಇದನ್ನು ಏರ್ಪಾಡು ಮಾಡತಕ್ಕದ್ದು ಸರ್ಕಾರದ ಕರ್ತವ್ಯ ಮತ್ತು ಜವಾಬ್ದಾರಿ ಎಂದು ಹೇಳಿ ಸರ್ಕಾರ ತಿಳಿದುಕೊಂಡಿದೆ. ಈ ದೃಷ್ಟಿಯಿಂದ ನಾನು ಶ್ರೀಮಾನ್ ವೆಂಕಟರಾಮಯ್ಯನವರಿಗೆ ಎಲ್ಲರ ಸಹಾನುಭೂತಿಯಿದೆ ಎಂದು ಭಾವನೆ ಮಾಡುತ್ತೇನೆ. ಇನ್ನೂ ಸಂದೇಹವಿದ್ದರೆ ಚರ್ಚೆ ಮಾಡೋಣ. ದೇವರು ಎಲ್ಲರಿಗೂ ಒಂದೇ. ಎಲ್ಲರಿಗೂ ಕೊಡುತ್ತಾನೆ. ಪ್ರಪಂಚದಲ್ಲಿ last word ಎಂದು ಇಲ್ಲ. ಇವೊತ್ತು ಹೀಗಿದೆ. ನಾಳೆ ಬದಲಾವಣೆ ಆಗಬಹುದು. Across the table ಚರ್ಚೆ ಮಾಡಿ ಎಷ್ಟುಮಟ್ಟಿಗೆ ಬದಲಾವಣೆ ಮಾಡಬೇಕೋ ಅದನ್ನು ಮಾಡೋಣ. ಆ ರೀತಿ

ಮಾಡಿಕೊಂಡು ಇಂಥ ಪ್ರಶ್ನೆ ಪರಿಹರಿಸಬೇಕು. ಸರ್ಕಾರದ ಸಹಾನುಭೂತಿ ಇದೆ. ಕಷ್ಟದಲ್ಲಿರುವ ಜನಗಳಿಗೆ ಸಹಾಯ ಮಾಡುವುದಕ್ಕೆ. ಆದರಲ್ಲೂ ಈ ಸಹಾಯವನ್ನು ಎಷ್ಟು ಮಟ್ಟಿಗೆ ಮುಂದುವರಿಸಬಹುದೋ ಅಷ್ಟುಮಟ್ಟಿಗೆ ಮುಂದುವರಿಸುವುದಕ್ಕೆ ಸರ್ಕಾರದವರು ಸಿದ್ಧರಾಗಿದ್ದಾರೆ. ಆದರೆ ಹಣಕಾಸಿನ ಸ್ಥಿತಿ ನೋಡಿದರೆ ಸ್ವಲ್ಪ ಸ್ವಲ್ಪವಾಗಿ ಮಾಡಬೇಕಾಗಿದೆ. ಇದಕ್ಕೆ ಇನ್ನೂ ಅನೇಕ ವಾದಗಳು ಇವೆ. ಆಸ್ಪತ್ರೆಗಳೆಲ್ಲಾ ತುಂಬುತ್ತಾ ಇರುವುದು ಖಾಯಿಲೆ ಜಾಸ್ತಿಯಾಗಿರುವುದು ಯೋಚನೆ ಮಾಡಿದರೆ ಅವರು ತಂದಿರತಕ್ಕ ಉದ್ದೇಶ ಏನು ಎಂಬುದನ್ನು ನಾವೆಲ್ಲರೂ ಯೋಚನೆ ಮಾಡಬೇಕಾದದ್ದೇ. ಸರ್ಕಾರದವರ ನೀತಿ 1930ನೇ ಇಸವಿಯಿಂದ ಪ್ರಾರಂಭವಾಗಿ ಕಾರ್ಯ ಪ್ರಯೋಗದಲ್ಲಿರುವುದನ್ನು ಮುಂದೆ ಮುಂದುವರಿಸುತ್ತಾರೆ ಎಂದು ಹೇಳಿ ಭರವಸೆ ಕೊಡುತ್ತೇನೆ. ಶ್ರೀಮಾನ್ ವೆಂಕಟರಾಮಯ್ಯನವರು ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ".

ಸಭಾನಾಯಕರ ಈ ವಾದ ಸರಣಿಯನ್ನು ಮನಸಾರೆ ಮೆಚ್ಚಿಕೊಂಡ ಶ್ರೀ ಡಿ. ವೆಂಕಟರಾಮಯ್ಯನವರು ತಾವು ಮಂಡಿಸಿದ್ದ ನಿರ್ಣಯವನ್ನು ಹಿಂತೆಗೆದುಕೊಂಡರು.

*****

## ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಉರ್ದು ಪೀಠ

ಸಿದ್ದಲಿಂಗಯ್ಯನವರು ಶಿಕ್ಷಣ ಮತ್ತು ಆರೋಗ್ಯ ಖಾತೆ ಸಚಿವರಾಗಿದ್ದ ಕಾಲದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಉರ್ದು ಪೀಠ ಒಂದಿದ್ದು ಆ ಹುದ್ದೆಗೆ ನೇಮಕಾತಿ ಮಾಡಲು ಒಂದು ಸಮಿತಿ ರಚಿತವಾಗಿತ್ತು. ಅದು ಒಬ್ಬ ಪಂಡಿತರನ್ನು ಆಯ್ಕೆ ಮಾಡಲು ಸೂಚಿಸಿತ್ತಾದರೂ. ಆ ಪೀಠದ ಪ್ರಾಧ್ಯಾಪಕರ ಹುದ್ದೆ ಖಾಲಿಯಾಗಿದ್ದು ಅದನ್ನು ತುಂಬುವಲ್ಲಿ ಸರ್ಕಾರ ಒಂದು ಬಗೆಯ ಗೊಂದಲಕ್ಕೊಳಗಾಗಿತ್ತು. ಅದೇನೆಂದರೆ ಈ ಬಗ್ಗೆ ಉರ್ದು ಪೀಠಕ್ಕೆ ಬದಲಾಗಿ ಇಸ್ಲಾಮಿಯ ಶಿಕ್ಷಣ ಮಂಡಳಿಯೊಂದನ್ನು ಸ್ಥಾಪಿಸುವಂತೆ ಕೆಲ ಮೂಲಗಳಿಂದ ಸರ್ಕಾರಕ್ಕೆ ಸಲಹೆ ಬಂದಿತ್ತು. ಇದನ್ನು ಸರ್ಕಾರ ತಾನೇ ಪರಿಗಣಿಸುವಂತಿರಲಿಲ್ಲ. ಕಾರಣ ವಿಶ್ವವಿದ್ಯಾಲಯ ಸ್ವಾಯತ್ತ ಸಂಸ್ಥೆಯಾಗಿದ್ದು ಸರ್ಕಾರ ತನ್ನ ಅಭಿಪ್ರಾಯವನ್ನು ಅದರ ಮೇಲೆ ಹೇರುವಂತಿಲ್ಲ. ಇಂತಹ ಸಂದರ್ಭದಲ್ಲಿ ವಿಧಾನಸಭೆಯ ಮಾನ್ಯ ಸದಸ್ಯರೊಬ್ಬರು ಎತ್ತಿದ ಒಂದು ಪ್ರಶ್ನೆಗೆ ಸರ್ಕಾರದ ನಿಲುವನ್ನು ಸ್ವತಂತ್ರವಾಗಿ ಸ್ಪಷ್ಟವಾಗಿ ತಿಳಿಸಲಾಗದ ಸಂಕಟ ಪರಿಸ್ಥಿತಿಯನ್ನು ಶಿಕ್ಷಣ ಮಂತ್ರಿಯಾಗಿ ಸಿದ್ದಲಿಂಗಯ್ಯನವರು ನಿಭಾಯಿಸಿದ ರೀತಿ ಹೀಗಿದೆ:

*****

"ಜನಾಬ್ ಮಹಮದ್ ವಲಿಉಲ್ಲಾ (ಪ್ರಾಧ್ಯಾಪಕರ ನೇಮಕಾತಿ ಸಲುವಾಗಿ):- ಪ್ರಕಟಣೆ ಹೊರಡಿಸಿದ್ದೇಕೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಪ್ರಕಟಣೆ ಹೊರಡುವ ಮೊದಲೆ ಆಗಲೇ ನೇಮಕಗೊಂಡಿದ್ದಂತಹ ವ್ಯಕ್ತಿಯೊಬ್ಬರನ್ನು ಈ ಜಾಗಕ್ಕೆ ತುಂಬುವುದೆಂದು ನಿರೀಕ್ಷಿಸಲಾಗಿತ್ತು. ಇದಲ್ಲದೆ ಇನ್ನಿತರ ತೊಂದರೆಗಳು ಇದ್ದವು. ಆದರೆ ಅದನ್ನು ನಾನು ಈ ಸದನದಲ್ಲಿ ಬಹಿರಂಗಪಡಿಸುವುದು ಸಾಧ್ಯವಿಲ್ಲ.

ಜನಾಬ್ ಮುಹಮದ್ ವಲಿಉಲ್ಲಾ:- ಪ್ರಕಟಣೆ ತುಂಬಾ ಮೊದಲೇ ಹೊರಡಿಸಲಾಗಿತ್ತಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಸ್ವಲ್ಪ ಸಮಯದ ಹಿಂದೆ ಹೊರಡಿಸಲಾಗಿತ್ತು.

ಜನಾಬ್ ಮಹಮದ್ ವಲಿಉಲ್ಲಾ :- ಎರಡು ವರ್ಷಗಳ ಹಿಂದೇನು?

ಶ್ರೀ ಟಿ. ಸಿದ್ದಲಿಂಗಯ್ಯ :- ಎರಡು ವರ್ಷಗಳ ಹಿಂದೆ ಅಲ್ಲ. ಕೆಲವು ತಿಂಗಳ ಹಿಂದೆಯಷ್ಟೆ.

ಜನಾಬ್ ಮಹಮದ್ ವಲಿಉಲ್ಲಾ :- ಇಷ್ಟು ದಿನ ಈ ಹುದ್ದೆ ತುಂಬದೇ ಇರಲು ಯಾರು ಕಾರಣರು? ಸರ್ಕಾರವೊ ವಿಶ್ವವಿದ್ಯಾನಿಲಯವೊ?

ಶ್ರೀ ಟಿ. ಸಿದ್ದಲಿಂಗಯ್ಯ :- ಕ್ಷಮಿಸಿ. ನಾನದನ್ನು ಬಹಿರಂಗಗೊಳಿಸಲಾರೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್ (ಚಿಕ್ಕಮಗಳೂರು-ಶಿವಮೊಗ್ಗ ಮುಸ್ಲಿಂ ಕ್ಷೇತ್ರ):- ಸ್ವಾಮಿ, ಈ ಉದ್ದೇಶಕ್ಕಾಗಿ ಒಂದು ಸಮಿತಿ ನೇಮಕಗೊಂಡಿದ್ದು ಲಕ್ನೊ ಮತ್ತು ಆಲಿಘಡ್ ವಿಶ್ವವಿದ್ಯಾನಿಲಯಗಳಿಂದ ಕೆಲವು ಪ್ರಾಧ್ಯಾಪಕರುಗಳನ್ನು ಈ ಬಗ್ಗೆ ನಿರ್ಧಾರ ಕೈಗೊಳ್ಳುವ ಸಲುವಾಗಿ ಆಮಂತ್ರಿಸಿದ್ದು ಸಮಿತಿ ಇಲ್ಲಿ ಸಭೆ ಸೇರಿ ...........?

ಶ್ರೀ ಪುಟ್ಟಸ್ವಾಮಿ (ಮೈಸೂರು ಜಿಲ್ಲೆ ಸಾಮಾನ್ಯ) :- ಮಾನ್ಯ ಸಚಿವರು ನೀಡಿದ ಉತ್ತರದ ಸಂಬಂಧವಾಗಿ ಮಾನ್ಯ ಸಭಾಪತಿಗಳು ಸಚಿವರಿಗೆ ಮಾಹಿತಿ ಬಹಿರಂಗಗೊಳಿಸುವಂತೆ ನಿರ್ದೇಶಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಕಾರಣ ಅದು ರಹಸ್ಯ ಸ್ವರೂಪದ ವಿಚಾರವಲ್ಲ. ಪ್ರಶ್ನೆ ಈ ಸಂಬಂಧವಾದ ಕಡತ ತೀರ್ಮಾನಕ್ಕಾಗಿ ಸರ್ಕಾರದ ಮುಂದೆ ಬಾರದೇ ವಿಶ್ವವಿದ್ಯಾನಿಲಯದ ಮುಂದೆ ಬಾಕಿ ಇದೆಯೇ ಎಂಬುದಷ್ಟೆ. ಅದು ರಹಸ್ಯ ವಿಚಾರವೆಂದು ನನಗನ್ನಿಸುವುದಿಲ್ಲ. ಮಾನ್ಯ ಸಚಿವರು ಆ ಮಾಹಿತಿ ಸದಸ್ಯರಿಗೆ ನೀಡುವಂತೆ ನಿರ್ದೇಶಿಸಲು ಮಾನ್ಯ ಸಭಾಧ್ಯಕ್ಷರನ್ನು ವಿನಂತಿಸುತ್ತೇನೆ. ಪತ್ರಗಳು ವಿಶ್ವವಿದ್ಯಾನಿಲಯದ ಮುಂದಿದ್ದರೆ ವಿಶ್ವವಿದ್ಯಾನಿಲಯವನ್ನು ದೂಷಿಸಬೇಕಾಗುತ್ತದೆ. ಅದಿಲ್ಲದೆ ಸರ್ಕಾರದ ಮುಂದಿದ್ದರೆ ಇಷ್ಟು ಕಾಲ ನಿರ್ಧಾರ ಕೈಗೊಳ್ಳದೆ ಉಳಿಸಿರುವುದಕ್ಕಾಗಿ ಸರ್ಕಾರ ದೂಷಿತವಾಗಬೇಕಾಗುತ್ತದೆ. ಆದ್ದರಿಂದ ಆಡಳಿತದ ಹಿತದೃಷ್ಟಿಯಿಂದ ಮಾನ್ಯ ಸಚಿವರಿಗೆ ಮಾಹಿತಿ ಬಹಿರಂಗಪಡಿಸಲು ಹೇಳಬೇಕಾಗುತ್ತದೆ

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಅಂತಿಮ ನಿರ್ಧಾರ ಕೈಗೊಳ್ಳಲು ಉಪಕುಲಾಧಿಪತಿಗಳು ಲಕ್ನೊ ಮತ್ತು ಆಲೀಘರ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರುಗಳನ್ನುಳ್ಳ ಸಮಿತಿಯನ್ನು ನೇಮಿಸಿದ್ದು ಆ ಸಮಿತಿ ಸರ್ಕಾರಕ್ಕೆ ತನ್ನ ಶಿಫಾರಸನ್ನು ತಿಳಿಸಿರುವುದು ಸಂಗತಿಯಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ :- ಹೌದು, ಒಂದು ಸಮಿತಿ ರಚಿತವಾಗಿದೆ. ಜನಾಬ್ ಸೈಯದ್ ಅಬ್ದುರ್ ರಹಮಾನ್ ಸಮಿತಿ ರಚನೆಯಾಗಿ ಅದು ಸಭೆ ನಡೆಸಿ ಒಂದು ವರ್ಷದ ಹಿಂದೆಯೇ ಒಂದು ನಿರ್ಧಾರಕ್ಕೆ ಬಂದಿದೆ. ಒಬ್ಬ ಅಭ್ಯರ್ಥಿಯನ್ನು ಆಯ್ಕೆ ಮಾಡಿ ನೇಮಕಾತಿಗೆ ಶಿಫಾರಸನ್ನು ಮಾಡಿದೆ. ಒಂದು ವರ್ಷಕ್ಕೂ ಹಿಂದೆ ಇದು ಸಂಭವವಾಗಿದೆ.

ಶ್ರೀ ಎಂ.ಎಸ್. ಜೋಯಿಸ್ (ಮೈಸೂರು ಜಿಲ್ಲೆ ಸಾಮಾನ್ಯ) :– ಮಾನ್ಯ ಸದಸ್ಯರಲ್ಲಿ ಎಲ್ಲಾ ಮಾಹಿತಿ ಇದ್ದಂತಿಲ್ಲ.

ಜನಾಬ್ ಸೈಯದ್ ಅಬ್ದುರ್ ರಹಮಾನ್:– ಆ ಸಮಿತಿ ಈ ವಿಷಯದಲ್ಲಿ ನಿರ್ಧಾರ ಕೈಗೊಂಡಿಲ್ಲವೇನು?

ಶ್ರೀ ಟಿ. ಸಿದ್ದಲಿಂಗಯ್ಯ:– ಸಮಿತಿ ರಚನೆಯಾಗಿತ್ತು ಮತ್ತು ಅದು ನಿರ್ಧಾರ ಕೈಗೊಂಡಿತ್ತು. ಆದರೆ ಅದಕ್ಕೂ ಮುಂಚಿ ವಿಶ್ವವಿದ್ಯಾನಿಲಯ ಉರ್ದು ಪೀಠವನ್ನು ಇಸ್ಲಾಮಿಯ ಅಧ್ಯಯನ ಪೀಠವಾಗಿ ಪರಿವರ್ತಿಸುವ ಸಲುವಾದ ಕೆಲವು ನಿರ್ಣಯಗಳನ್ನು ಕೈಗೊಂಡಿತು. ಅದಾದಮೇಲೆ ಸ್ವಲ್ಪ ಗೊಂದಲವಾಗಿದೆ. ಆದ್ದರಿಂದ ಸಮಿತಿ ಶಿಫಾರಸ್ಸುಗಳನ್ನು ಜಾರಿಗೊಳಿಸುವ ಕ್ರಮಗಳನ್ನು ಕೈಗೊಂಡಿಲ್ಲ.

ಜನಾಬ್ ಸೈಯದ್ ಅಬ್ದುರ್ ರಹಮಾನ್:– ವಿಷಯ ಸರ್ಕಾರದ ಪರಿಶೀಲನೆಯಲ್ಲಿದೆಯೆಂದು ತಿಳಿಯಬಹುದೆ?

ಶ್ರೀ ಟಿ. ಸಿದ್ದಲಿಂಗಯ್ಯ :– ಎಲ್ಲವೂ ಸರ್ಕಾರದ ಪರಿಗಣನೆಯಲ್ಲಿದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:– ವಿಶ್ವವಿದ್ಯಾನಿಲಯದ ಅಧಿಕರಣಕ್ಕೆ ಕಳುಹಿಸಿಕೊಟ್ಟ ನಿರ್ಣಯಗಳು ಉರ್ದು ಪ್ರಾಧ್ಯಾಪಕರ ಸಂಬಂಧವಾದದ್ದಲ್ಲದ ಬೇರೆ ಹೊಸ ವಿಷಯಕ್ಕೆ ಸಂಬಂಧಿಸಿದ್ದೆಂದು ಭಾವಿಸಬಹುದೆ?

ಶ್ರೀ ಟಿ. ಸಿದ್ದಲಿಂಗಯ್ಯ :– ಅದು ಸಂಬಂಧಿಸಿದ್ದಾಗಿದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್ :– ಇದಕ್ಕೆ ಸಂಬಂಧಪಟ್ಟ ಇನ್ನೊಂದು ವಿಷಯ, ಅದೇನು?

ಶ್ರೀ ಟಿ. ಸಿದ್ದಲಿಂಗಯ್ಯ :– ಪ್ರಶ್ನೆ ನನಗೆ ಅರ್ಥವಾಗಲಿಲ್ಲ.

ಜನಾಬ್ ಸೈಯದ್ ಅಬ್ದುರ್ ರಹಮಾನ್:– ಅದು ಉರ್ದುವಿಗಿಂತ ಬೇರೆಯೇ ಆದದ್ದೇನು?

ಶ್ರೀ ಟಿ. ಸಿದ್ದಲಿಂಗಯ್ಯ :– ನಾನು ಹೇಳಿದಂತೆ ಉರ್ದು ಪೀಠವನ್ನು ಇಸ್ಲಾಮಿಯ ಅಧ್ಯಯನ ಪೀಠಕ್ಕೆ ಬದಲಾಯಿಸುವ ಹೊಸ ನಿರ್ಣಯ. ಆ ನಿರ್ಣಯ ಈಗ ಪರಿಗಣನೆಯಲ್ಲಿದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:– ಉರ್ದುಗಾಗಿ ಈಗಾಗಲೇ ಪೀಠ ಇಲ್ಲವೇನು?

ಶ್ರೀ ಟಿ. ಸಿದ್ದಲಿಂಗಯ್ಯ :– ನಂತರದ ನಿರ್ಣಯ ಅದನ್ನು ಬದಲಾಯಿಸಿದೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:– ನಂತರದ ನಿರ್ಣಯ ಅದನ್ನು ಬಾಧಿಸಿಲ್ಲ. ಉರ್ದು ಪೀಠ ಹಾಗೆಯೇ ಇದೆ.

**ಸಭಾಧ್ಯಕ್ಷರು** :– ಮಾನ್ಯ ಸದಸ್ಯರು ಮಾಹಿತಿಯನ್ನು ಕೇಳತಕ್ಕದ್ದಷ್ಟೆ.

ಜನಾಬ್ ಸೈಯದ್ ಅಬ್ದುರ್ ರಹಮಾನ್:- ಸರ್ಕಾರ ತಾನು ಉರ್ದು ಪ್ರಾಧ್ಯಾಪಕರುಗಳ ವಿಷಯದಲ್ಲಿ ಒಂದು ಶೀಘ್ರ ನಿರ್ಧಾರ ಕೈಗೊಳ್ಳುವುದೇ ಎಂಬ ಬಗ್ಗೆ ದಯಮಾಡಿ ತಿಳಿಸುವುದೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಖಂಡಿತವಾಗಿ.

ಜನಾಬ್ ಮಹಮದ್ ಹನೀಫ್ (ಬೆಂಗಳೂರು ಮುಸ್ಲಿಂ ಕ್ಷೇತ್ರ):- ಸರ್ಕಾರ ಉರ್ದು ಪೀಠವನ್ನು ರದ್ದು ಮಾಡಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ :- ಅದು ಪರಿಗಣನೆಯಲ್ಲಿದೆ.

ಜನಾಬ್ ಮಹಮದ್ ಹನೀಫ್ :- ರದ್ದಿಯಾತಿ?

ಶ್ರೀ ಟಿ. ಸಿದ್ದಲಿಂಗಯ್ಯ :- ಸರ್ಕಾರ ಆ ಬಗ್ಗೆ ಏನು ನಿರ್ಧಾರ ಕೈಗೊಂಡಿಲ್ಲ.

ಜನಾಬ್ ಮಹಮದ್ ಹನೀಫ್:- ರದ್ದು ಮಾಡುವ ಸಾಧ್ಯತೆ ಇದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಅದು ಊಹಾತ್ಮಕ.

ಜನಾಬ್ ಮಹಮದ್ ಹನೀಫ್:- ಸರ್ಕಾರ ಅದನ್ನು ರದ್ದುಗೊಳಿಸುವ ಕ್ರಮ ಕೈಗೊಂಡಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ವಿಶ್ವವಿದ್ಯಾಲಯ ಒಂದು ಸ್ವಾಯತ್ತ ಸಂಸ್ಥೆ ಎಂದು ಪರಿಗಣಿಸಲಾಗಿದೆ. ಸರ್ಕಾರ ವಿಶ್ವವಿದ್ಯಾಲಯ ಪರಿಷತ್ತಿನ ನಿರ್ಣಯಗಳನ್ನು ಅನುಸರಿಸಿ ತೀರ್ಮಾನಗಳನ್ನು ಕೈಗೊಳ್ಳಬೇಕಾಗುತ್ತದೆ.

ಜನಾಬ್ ಮಹಮದ್ ಹನೀಫ್:- ವಿಶ್ವವಿದ್ಯಾಲಯ ಪರಿಷತ್ತು ಉರ್ದು ಪೀಠವನ್ನು ರದ್ದು ಮಾಡಲು ತೀರ್ಮಾನಿಸಿದೆಯೆ.

ಶ್ರೀ ಟಿ. ಸಿದ್ದಲಿಂಗಯ್ಯ:- ಅದನ್ನು ಇಸ್ಲಾಮಿಯಾ ಅಧ್ಯಯನ ಪೀಠವೆಂದು ಮಾರ್ಪಡಿಸಲು ತೀರ್ಮಾನಿಸಿದೆ.

ಮಾಂಷೀರ್ - ಉಲ್ ಮುಲ್ಕ್ ಜಿ ಮಹಮದ್ ಇಮಾಮ್ (ಚಿತ್ರದುರ್ಗ-ತುಮಕೂರು ಮುಸ್ಲಿಂ ಕ್ಷೇತ್ರ) :- ವಿಶ್ವವಿದ್ಯಾಲಯ ಪರಿಷತ್ತು ಉರ್ದು ಪ್ರಾಧ್ಯಾಪಕರ ಹುದ್ದೆ ತುಂಬಲು ಒಬ್ಬ ನಿರ್ದಿಷ್ಟ ವ್ಯಕ್ತಿಯನ್ನು ಬಹುಮತದಿಂದ ಶಿಫಾರಸು ಮಾಡಿ ನಿರ್ಣಯ ಕೈಗೊಂಡಿತೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಹೌದು.

ಜನಾಬ್ ಜಿ ಮಹಮದ್ ಇಮಾಮ್:- ಅದು ಯಾವಾಗ.

.............

............

ಜನಾಬ್ ಜಿ ಮಹಮದ್ ಇಮಾಮ್:- ಎರಡು ವರ್ಷದ ಹಿಂದೆ ಎಂದು ಸೂಚಿಸಬಹುದೋ?

ಶ್ರೀ ಟಿ. ಸಿದ್ದಲಿಂಗಯ್ಯ:- ಸಾಧ್ಯವಿರಬಹುದು.

ಜನಾಬ್ ಜಿ ಮಹಮದ್ ಇಮಾಮ್:- ಇಷ್ಟು ಕಾಲವೂ ಸರ್ಕಾರ ಈ ಬಗ್ಗೆ ಯಾವುದೇ ಆದೇಶ ಹೊರಡಿಸದೇ ಇರುವುದೇಕೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಅದು ಸರ್ಕಾರದ ಪರಿಶೀಲನೆಯಲ್ಲಿದೆ.

ಜನಾಬ್ ಜಿ ಮಹಮದ್ ಇಮಾಮ್:- ಮಾರ್ಪಡಿಸಬೇಕೆ ಬೇಡವೇ, ಎಂಬಷ್ಟೇ ಸರಳ ವಿಷಯವನ್ನು ಪರಿಗಣಿಸಲು ಸರ್ಕಾರಕ್ಕೆ ಒಂದು ವರ್ಷ ಬೇಕಾಯಿತೇನು?

ಶ್ರೀ ಟಿ. ಸಿದ್ದಲಿಂಗಯ್ಯ:- ಸಾಂಪ್ರದಾಯಿಕ ವಿಧಿಯಿಂದಾಗಿ ಅದನ್ನು ಸ್ವಲ್ಪ ಸಾವಕಾಶವಾಗಿ ಎಚ್ಚರದಿಂದ ಪರಿಗಣಿಸಬೇಕಾಗಿದೆ.

ಜನಾಬ್ ಜಿ ಮಹಮದ್ ಇಮಾಮ್:- ಸಾಂಪ್ರದಾಯಿಕ ವಿಧಿ ಯಾವುದು? ಇದನ್ನು ಪರಿಗಣಿಸಿ "ಹೌದು" "ಇಲ್ಲ" ಎನಲು ನಿಮಗೆ ಒಂದು ವರ್ಷ ಬೇಕೇ? ಈ ವಿಷಯದಲ್ಲಿ ಯಾವುದೇ ನಿರ್ಧಾರ ತೆಗೆದುಕೊಳ್ಳುವುದು ಸರ್ಕಾರಕ್ಕೆ ಬೇಡವಾಗಿತ್ತೆನ್ನುವುದು ಸತ್ಯ ಸಂಗತಿಯಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಸದನದಲ್ಲಿ ಬಹಿರಂಗಪಡಿಸಲು ನಾನು ಇಚ್ಛಿಸದ ಗೋಪ್ಯವಾದ ಕೆಲವು ವಿಷಯಗಳಿವೆ ಎಂದು ನಾನು ಹೇಳಿದುದು ಅದಕ್ಕೆ.

ಜನಾಬ್ ಜಿ ಮಹಮದ್ ಇಮಾಮ್:- ನಿರ್ಣಯ ಕಳುಹಿಸಿಯಾದನಂತರದಲ್ಲಿ ಸರ್ಕಾರ ತೆರವಾದ ಖಾಲಿ ಹುದ್ದೆಯನ್ನು ತುಂಬುವ ಬಗ್ಗೆ ವಿಶ್ವವಿದ್ಯಾನಿಲಯದೊಂದಿಗೆ ಸರ್ಕಾರ ಸಮಾಲೋಚಿಸಿತೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಹೌದು.

ಜನಾಬ್ ಮಹಮದ್ ಇಮಾಮ್:- ಈ ವಿಷಯದಲ್ಲಿ ಸರ್ಕಾರಕ್ಕೆ ಯಾವುದಾದರೂ ಮನವಿ ಬಂದಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಯಾರಿಂದ?

ಜನಾಬ್ ಜಿ ಮಹಮದ್ ಇಮಾಮ್:- ಸಾರ್ವಜನಿಕರಿಂದ.

ಶ್ರೀ ಟಿ. ಸಿದ್ದಲಿಂಗಯ್ಯ:- ಇಲ್ಲ. ಸರ್ಕಾರಕ್ಕೆ ತಿಳಿದುಬಂದಂತೆ ಯಾವುದೂ ಇಲ್ಲ.

ಜನಾಬ್ ಜಿ ಮಹಮದ್ ಇಮಾಮ್:- ಸರ್ಕಾರ ಸಾರ್ವಜನಿಕರಲ್ಲಿ, ಸಂಬಂಧಪಟ್ಟ ಜನರಲ್ಲಿ, ಉರ್ದು ಪೀಠವನ್ನು ಉಳಿಸಿಕೊಳ್ಳುವುದೂ ಅಥವಾ ಬಿಡುವುದೋ ಯಾವುದು ಉಚಿತ ಎಂಬ ಬಗ್ಗೆ ಸಮಾಲೋಚಿಸಿದೆಯಾ?

ಶ್ರೀ ಟಿ. ಸಿದ್ದಲಿಂಗಯ್ಯ:- ಅದು ಅವಶ್ಯಕವೆಂದು ನಾನು ಎಣಿಸುವುದಿಲ್ಲ.

ಜನಾಬ್ ಜಿ ಮಹಮದ್ ಇಮಾಮ್:- ಉರ್ದು ಪೀಠವನ್ನು ಸೃಜಿಸಿದಾಗ ಸಾರ್ವಜನಿಕರೊಡನೆ ಸಂಬಂಧಪಟ್ಟ ಜನರೊಡನೆ ಸರ್ಕಾರ ಸಮಾಲೋಚಿಸಿತ್ತು ಮತ್ತು ಸಾರ್ವಜನಿಕ ಅಭಿಪ್ರಾಯವನ್ನನುಸರಿಸಿ ಉರ್ದು ಪೀಠವನ್ನು ಸ್ಥಾಪಿಸಲಾಗಿತ್ತೆನ್ನುವುದು ಸರ್ಕಾರಕ್ಕೆ ತಿಳಿದಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಈ ವಿಷಯದ ಬಗ್ಗೆ ನಿರ್ಧರಿಸಲು ಒಂದು ಸ್ವಾಯತ್ತ ಸಂಸ್ಥೆ, ವಿಶ್ವವಿದ್ಯಾಲಯ ಇದೆ; ಅದು ಸಾರ್ವಜನಿಕ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳುತ್ತದೆ.

ಜನಾಬ್ ಜಿ ಮಹಮದ್ ಇಮಾಮ್:- 1941ರಲ್ಲಿ ಉರ್ದು ಪೀಠ ಸ್ಥಾಪಿಸಿದಾಗ ಸರ್ಕಾರ ಉರ್ದು ಪೀಠ ಇರುವುದರ ಅವಶ್ಯಕತೆ ಮತ್ತು ಯುಕ್ತತೆ ಬಗ್ಗೆ ಎಲ್ಲ ಸಂಬಂಧಪಟ್ಟ ಜನರೊಡನೆ ಮತ್ತು ಸಾರ್ವಜನಿಕರೊಡನೆ ಸಮಾಲೋಚಿಸಿತ್ತೆಂಬುದು ಸತ್ಯವಲ್ಲವೆ.

ಶ್ರೀ ಟಿ. ಸಿದ್ಧಲಿಂಗಯ್ಯ:- ಎಷ್ಟು ಬಾರಿಯಾದರೂ ಸಾರ್ವಜನಿಕರೊಡನೆ ಸಮಾಲೋಚಿಸಬಹುದು. ಎಷ್ಟಾದರೂ ಸರ್ಕಾರ ಕೈಗೊಳ್ಳಬಹುದು. ಅದಕ್ಕೆ ಅಡ್ಡಿ ಇಲ್ಲ.

ಜನಾಬ್ ಜಿ ಮಹಮದ್ ಇಮಾಮ್:- ಈಗ ಈ ಪ್ರಮುಖ ವಿಚಾರದಲ್ಲಿ ಸರ್ಕಾರ ಯಾವುದೇ ಆತುರದ ಕ್ರಮ ಕೈಗೊಳ್ಳುವ ಮೊದಲು ಸಾರ್ವಜನಿಕರೊಂದಿಗೆ ಸಂಬಂಧಪಟ್ಟ ಜನರೊಂದಿಗೆ ಸಮಾಲೋಚಿಸುವುದೆ?

ಶ್ರೀ ಟಿ. ಸಿದ್ಧಲಿಂಗಯ್ಯ:- ಸಮಾಲೋಚಿಸಬೇಕಾದ ಸಾರ್ವಜನಿಕರು ಯಾರೆನ್ನುವುದು ನನಗೆ ಅಸ್ಪಷ್ಟವಾಗಿದೆ.

ಜನಾಬ್ ಜಿ ಮಹಮದ್ ಇಮಾಮ್:- ಸಾರ್ವಜನಿಕರೆಂದರೆ ಉರ್ದು ಪೀಠದಲ್ಲಿ ಆಸಕ್ತಿ ಇದ್ದವರು. ಯಾವುದೇ ಕ್ರಮ ಜರುಗಿಸುವ ಮೊದಲು ಸರ್ಕಾರ ಅವರೊಂದಿಗೆ ಸಮಾಲೋಚಿಸುವುದೇ? ಇದೊಂದು ಬಹಳ ವಿವಾದಾಸ್ಪದ ಪ್ರಶ್ನೆಯೆಂಬುದು ನನಗೆ ತಿಳಿದಿದೆ. ಆದರೂ ಅಂತಿಮ ಆದೇಶ ಹೊರಡಿಸುವ ಮೊದಲು ಸರ್ಕಾರ ಸಂಬಂಧಪಟ್ಟ ಸಾರ್ವಜನಿಕರೊಡನೆ ಸಮಾಲೋಚಿಸುವುದೇ?

ಶ್ರೀ ಟಿ. ಸಿದ್ಧಲಿಂಗಯ್ಯ:- ಅವರುಗಳಿಂದ ಬರಬಹುದಾದ ಮನವಿಗಳನ್ನು ಪರಿಗಣಿಸಲಾಗುವುದು.

ಜನಾಬ್ ಜಿ ಮಹಮದ್ ಇಮಾಮ್:- ಕಳೆದ ಬಾರಿಯಂತೆ ಸರ್ಕಾರ ಎಲ್ಲಾ ಪ್ರಮುಖರಿಗೆ ವಿಷಯ ತಿಳಿಸಿ ಅವರ ಅಭಿಪ್ರಾಯ ಪಡೆಯುವುದೇ? ಅದರಿಂದ ಸರ್ಕಾರಕ್ಕೇನೂ ನಷ್ಟವಿಲ್ಲ.

ಶ್ರೀ ಟಿ. ಸಿದ್ಧಲಿಂಗಯ್ಯ:- ಈ ವಿಷಯದಲ್ಲಿ ಸರ್ಕಾರ ಮುಂದಾಗಬೇಕೆಂದು ನನಗನಿಸುವುದಿಲ್ಲ. ಅವುಗಳನ್ನೆಲ್ಲಾ ನೋಡಿಕೊಳ್ಳಲು ವಿಶ್ವವಿದ್ಯಾನಿಲಯದ ಪರಿಷತ್ತು ಇದೆ.

ಜನಾಬ್ ಜಿ ಮಹಮದ್ ಇಮಾಮ್:- ಸರ್ಕಾರ ಇದನ್ನು ಹೆಚ್ಚುಕಾಲದಿಂದ ಬಾಕಿ ಇರುವ ಕಾರಣ ಶೀಘ್ರಕ್ರಮ ಕೈಗೊಳ್ಳಬೇಕೆಂದು ನಿರ್ದೇಶನ ನೀಡಿ ಕಳಿಸಿಕೊಡುವಿರಾ?

ಶ್ರೀ ಟಿ. ಸಿದ್ಧಲಿಂಗಯ್ಯ:- ಇದನ್ನು ಪರಿಶೀಲಿಸುತ್ತೇವೆ.”

***

### ಕೈಗಾರಿಕೆ ಮತ್ತು ವಾಣಿಜ್ಯ ಮಂತ್ರಿಯಾಗಿ

1952ರಲ್ಲಿ ಭಾರತ ನೂತನ ಸಂವಿಧಾನಕ್ಕನುಗುಣವಾಗಿ ರಾಜ್ಯದಲ್ಲಿ ಗಣತಂತ್ರ ಸರ್ಕಾರ ಏರ್ಪಟ್ಟಿತು. ಈ ಸಚಿವ ಸಂಪುಟದಲ್ಲಿ ಸಿದ್ದಲಿಂಗಯ್ಯ ಎರಡನೇ ಸ್ಥಾನವನ್ನು ಅಲಂಕರಿಸಿ ಕೈಗಾರಿಕೆ ಮತ್ತು ವಾಣಿಜ್ಯ ಖಾತೆಯ ಸಚಿವರಾಗಿದ್ದರು. ಈ ಬಾರಿಗೂ ಇವರ ಸಚಿವ ಪದವಿ

ಹತ್ತು ತಿಂಗಳಿಗೇ ಮುಕ್ತಾಯವಾಯಿತು. ಈ ಬಾರಿ ಅವರು ಇಲ್ಲ ಸಲ್ಲದ ಆರೋಪಗಳನ್ನು ಹೇರುವ ಪಟ್ಟಭದ್ರ ಹಿತಾಸಕ್ತಿಗಳ ಕೃತ್ರಿಮ ನೀತಿಯಿಂದ ಜಿಗುಪ್ಸೆಗೊಂಡು ಉನ್ನತ ಸ್ಥಾನಗಳ ಘನತೆ ಗೌರವಗಳನ್ನು ಕಾಪಾಡುವ ಘನ ನೀತಿಯನ್ನನುಸರಿಸಿ ರಾಜೀನಾಮೆ ನೀಡಿದರು.

ಈ ಅವಧಿಯಲ್ಲಿ ಅವರು ನಿರ್ವಹಿಸಿದ ಅನೇಕ ಮಹತ್ವದ ಸಂಗತಿಗಳ ಕಿರಾಣ ವರದಿಯನ್ನು ಈ ಮುಂದೆ ನೀಡಲಾಗಿದೆ:

ರಾಜ್ಯದ ಸಾಮಾನ್ಯ ಕೈಗಾರಿಕಾ ನೀತಿ ವಿವರಣೆ

ಸಿದ್ಧಲಿಂಗಯ್ಯನವರು ರಾಜ್ಯದ ಪ್ರಪ್ರಥಮ ಗಣತಂತ್ರ ಸರ್ಕಾರದ ಕೈಗಾರಿಕಾ ಮಂತ್ರಿಯಾಗಿದ್ದು ಎರಡು ಶತಮಾನಗಳ ಪರಕೀಯ ಆಳ್ವಿಕೆಗೆ ಸಿಕ್ಕ ರಾಜ್ಯದ ಜನ ತಮ್ಮ ಅಭ್ಯುದಯಕ್ಕಾಗಿ ಸರ್ಕಾರದ ಕೈಗಾರಿಕಾ ನೀತಿಯನ್ನು ಅತ್ಯುತ್ತಮವಾದದ್ದಾಗಿರಬೇಕೆಂದು ನಿರೀಕ್ಷಿಸಿದ್ದರು. ಒಂದು ಆರೋಗ್ಯಕರ ನೀತಿ ಕೈಗಾರಿಕೆಗಳನ್ನು ಉತ್ತೇಜಿಸುವುದೇ ಅಲ್ಲದೆ ಸಾರ್ವತ್ರಿಕ ಮತ್ತು ಖಾಸಗಿ ವಲಯಗಳನ್ನು ಪರಸ್ಪರ ಪೂರಕವಾಗಿ ನಡೆಸಿಕೊಳ್ಳಬೇಕಾಗುತ್ತದೆ. ಹಾಗಾಗಿ ಸರ್ಕಾರದ ಇಂಥ ನೀತಿ ಧೋರಣೆಗಳನ್ನು ತಿಳಿದುಕೊಳ್ಳಲು ಪ್ರಜಾಪ್ರತಿನಿಧಿಗಳು ಉತ್ಸುಕರಾಗಿರುತ್ತಿದ್ದರು. ಸದನದ ಕಲಾಪಗಳು ಇದಕ್ಕೆ ಉತ್ತಮ ಅವಕಾಶಗಳನ್ನು ಒದಗಿಸುತ್ತವೆಯಷ್ಟೆ. ಹಾಗಾಗಿ ಸಿದ್ದಲಿಂಗಯ್ಯನವರು ಕೈಗಾರಿಕಾ ಮಂತ್ರಿಯಾಗಿ ಸದನಗಳಲ್ಲಿ ಸರ್ಕಾರದ ಕೈಗಾರಿಕಾ ನೀತಿಧೋರಣೆಗಳ ಬಗ್ಗೆ ನಿರಂತರ ಪ್ರಶ್ನೆಗಳನ್ನು ಎದುರಿಸಬೇಕಾಯಿತು. [illegible] ಜೂನ್-ಜುಲೈ ಅಧಿವೇಶನದಲ್ಲಿ ಈ ವಿಷಯವಾಗಿ ಮೂಡಿಬಂದ ಚರ್ಚೆಗಳಿಂದ ಸಿದ್ದಲಿಂಗಯ್ಯನವರು ಸಾದರಪಡಿಸಿದ ಸರ್ಕಾರದ ಕೈಗಾರಿಕಾ ನೀತಿಯನ್ನು ಸಂಗ್ರಹಿಸಿ ಇಲ್ಲಿ ಕೊಡಲಾಗಿದೆ.

ಜನರಲ್ಲಿ ಕೈಗಾರಿಕಾ ಪ್ರಜ್ಞೆ ಬೆಳೆಯಲು ಮತ್ತು ಕೈಗಾರಿಕೆಗೆ ಹೆಚ್ಚು ಪ್ರೋತ್ಸಾಹ ದೊರೆಯುವಂತಾಗಲು ಸರ್ಕಾರ ಕಾಲದಿಂದ ಕಾಲಕ್ಕೆ ಕೈಗಾರಿಕಾ ಯೋಜನೆಗಳನ್ನು ಕೈಗೊಳ್ಳುತ್ತಿತ್ತು. ಇಂಥವುಗಳಲ್ಲಿ ಸರ್.ಎಂ. ವಿಶ್ವೇಶ್ವರಯ್ಯ ಗ್ರಾಮೀಣ ಕೈಗಾರಿಕಾ ಯೋಜನೆಯೂ ಒಂದು. ಈ ಯೋಜನೆಗಳು ಸರ್ಕಾರಕ್ಕೆ ಲಾಭ ತರುವ ದೃಷ್ಟಿಯಿಂದ ಕೈಗೊಂಡವುಗಳಲ್ಲ, ಕೈಗಾರಿಕಾ ಪ್ರಜ್ಞೆ, ಪ್ರವೃತ್ತಿ ನಾಡಿನಲ್ಲಿ ಬೆಳೆಯುವಂತದು ಇವುಗಳ ಉದ್ದೇಶ. ಇದೇ ಉದ್ದೇಶಕ್ಕಾಗಿ ಸರ್ಕಾರ ಜಂಟಿ ಉದ್ಯಮಗಳಲ್ಲಿ ತೊಡಗುತ್ತಿತ್ತು. ಇವುಗಳ ಉತ್ಪಾದನೆ-ಲಾಭಗಾರಿಕೆ ಮೇಲೆ ನಿಗಾ ಇಡಲಾಗುತ್ತಿತ್ತು. ಇಂಥ ಕೈಗಾರಿಕೆಗಳಲ್ಲಿ ಒಬ್ಬ ಸರ್ಕಾರೀ ಪ್ರತಿನಿಧಿ ಇರುತ್ತಿದ್ದರು. ಆದರೆ ಅವರ ನಿಯಾಮಕ ವ್ಯಾಪ್ತಿ ಕೇವಲ ಸರ್ಕಾರದ ಹಿತಾಸಕ್ತಿಯನ್ನು ಅಂದರೆ ಸರ್ಕಾರ ಕೈಗಾರಿಕೆಯಲ್ಲಿ ತೊಡಗಿಸಿದ ಹಣವನ್ನು ಸಂರಕ್ಷಿಸುವುದಕ್ಕೆ ಮಾತ್ರ ಸೀಮಿತವಾಗಿತ್ತು. ಈ ಕೈಗಾರಿಕೆಗಳ ಒಳಾಡಳಿತದಲ್ಲಿ ಸರ್ಕಾರ ಹಸ್ತಕ್ಷೇಪ ಮಾಡುತ್ತಿರಲಿಲ್ಲ. ಅವುಗಳ ಆಡಳಿತದ ಮೇಲೂ ಯಾವುದೇ ಹತೋಟಿ ಇಟ್ಟುಕೊಳ್ಳಲು ಇಚ್ಛಿಸಲಿಲ್ಲ.

ಕೈಗಾರಿಕಾ ಅಭಿವೃದ್ಧಿಯನ್ನು ಸಾಧಿಸುವ ದೃಷ್ಟಿಯಿಂದ ಒಂದು ಕೈಗಾರಿಕಾ ಮಂಡಲಿಯನ್ನು ಸರ್ಕಾರ ಸ್ಥಾಪಿಸಿತ್ತು. ಆದರೆ ವಿಧಾನಸಭೆ ವಿಸರ್ಜನೆಗೊಂಡ ಸಂದರ್ಭದಲ್ಲಿ ಅದೂ ವ್ಯಾಪಗತವಾಯಿತು. ನಂತರ ಒಂದು ಹೈ ಪವರ್ ಡೈರೆಕ್ಟರೇಟನ್ನು ಸಂಸ್ಥಾಪಿಸುವ ಉದ್ದೇಶವನ್ನು

ಸರ್ಕಾರ ತಾಳಿದರೂ ಅದು ಕೈಗೂಡುವವರೆಗೆ ಸಿದ್ದಲಿಂಗಯ್ಯನವರು ಮಂತ್ರಿ ಪದವಿಯಲ್ಲಿ ಮುಂದುವರಿಯಲಿಲ್ಲ. ಅದರ ರಚನೆ ಬಗ್ಗೆ ಭಿನ್ನಾಭಿಪ್ರಾಯಗಳಿದ್ದುದು ಸದನ ಕಲಾಪಗಳಿಂದ ವ್ಯಕ್ತವಾಗಿದೆ.

ಕೈಗಾರಿಕೆಯನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ವೈಯಕ್ತಿಕ ಉದ್ದಿಮೆದಾರರಿಗೂ ಕಂಪನಿಗಳಿಗೂ ಸರ್ಕಾರ ಸಾಲ ನೀಡುತ್ತಿತ್ತು. ಆದರೆ ಅನೇಕ ವೇಳೆ ಸಾಲ ಪಡೆದ ಕೈಗಾರಿಕೆಗಳು ಮರುಪಾವತಿ ಮಾಡಲು ತಪ್ಪುತ್ತಿದ್ದವು. ಈ ಸನ್ನಿವೇಶದಲ್ಲಿ ಸರ್ಕಾರ ಗೊತ್ತುಗುರಿ ಇಲ್ಲದೆ ಕೈಗಾರಿಕಾ ಸಾಲಗಳನ್ನು ನೀಡಿ ಬೊಕ್ಕಸವನ್ನು ಬರಿದು ಮಾಡುತ್ತಿವೆ ಎನ್ನುವಂಥ ದೂರುಗಳು ಬರುತ್ತಿದ್ದುವು. ಇಂಥ ಎಲ್ಲಾ ಪ್ರಶ್ನೆಗಳಿಗೂ ಸಿದ್ದಲಿಂಗಯ್ಯನವರು ತಾಳ್ಮೆಯಿಂದ ಇದ್ದ ವಿಚಾರಗಳನ್ನು ತಿಳಿಯಪಡಿಸಿ ಸಂದೇಹಗಳನ್ನು ನಿವಾರಿಸುತ್ತಿದ್ದರು.

ಸರ್ಕಾರ ತಾನೇ ಕೈಗಾರಿಕೆಗಳನ್ನು ಸ್ಥಾಪಿಸುವುದು ಒಂದು ನೀತಿ, ಆದರೆ ಖಾಸಗಿ ಕಂಪನಿಗಳಿಂದ ಪೈಪೋಟಿ ಒದಗಿದಾಗ ಸರ್ಕಾರೀ ಕಂಪನಿಗಳಿಗೆ ಖಾಸಗಿಯವರು ಉತ್ಪಾದಿಸುವಷ್ಟು ಕಡಿಮೆ ಖರ್ಚಿನಲ್ಲಿ ಉತ್ಪಾದನೆ ಕಾರ್ಯಕೈಗೊಳ್ಳುವುದು ಆಗುತ್ತಿರಲಿಲ್ಲ. ಹಾಗಿಲ್ಲದಿದ್ದಲ್ಲಿ ಖಾಸಗೀ ಉದ್ಯಮ ನಿರುತ್ತೇಜಕವಾಗುತ್ತಿತ್ತು. ದೊಡ್ಡ ದೊಡ್ಡ ಕಂಪನಿಗಳು ಹೆಚ್ಚು ಬಂಡವಾಳ ಹೂಡಿ ಕಡಿಮೆ ವೆಚ್ಚದಲ್ಲಿ ಸರಕುಗಳನ್ನು ಉತ್ಪಾದಿಸುತ್ತಿದ್ದವು. ಅಂಥ ಸಂದರ್ಭಗಳಲ್ಲಿ ಅನಿವಾರ್ಯಗಳನ್ನನುಸರಿಸಿ ಸರ್ಕಾರೀ ಕಂಪನಿಗಳಲ್ಲಿ ಉತ್ಪಾದನೆಯನ್ನು ನಿಲ್ಲಿಸಿ ಖಾಸಗಿಯವರಿಂದ ಅಗ್ಗದ ದರದಲ್ಲಿ ಆ ಸರಕುಗಳನ್ನು ಕೊಳ್ಳಲಾಗುತ್ತಿತ್ತು. ಇದು ಮಿತವ್ಯಯ ಸಾಧಿಸುವುದರ ಜತೆಗೆ ಖಾಸಗಿ ವಲಯವನ್ನು ಪ್ರೋತ್ಸಾಹಿಸುವ ಕ್ರಮವೇ ಆಗಿತ್ತು. ಖಾಸಗೀ ಕಂಪನಿಗಳು ಅಗ್ಗದ ದರದಲ್ಲಿ ಸರಕುಗಳನ್ನು ಉತ್ಪಾದಿಸುವುದಾದರೆ ಅದೇ ಸರಕುಗಳನ್ನು ಸರ್ಕಾರಿ ಕಂಪನಿಗಳು ಉತ್ಪಾದಿಸುವುದು ಅವಶ್ಯಕವಲ್ಲವೆಂಬುದು ಸಿದ್ದಲಿಂಗಯ್ಯನವರ ಧೋರಣೆಯಾಗಿತ್ತು. ಒಂದುವೇಳೆ ಖಾಸಗಿ ಪೈಪೋಟಿಯನ್ನು ಎದುರಿಸಲಾಗದ ಪಕ್ಷಕ್ಕೆ ಓವರ್‌ಹೆಡ್ ಚಾರ್ಜ್‌ಗಳನ್ನು ಕಡಿಮೆ ಮಾಡಿಕೊಳ್ಳಲಾಗುತ್ತಿತ್ತು. ಅದೇ ರೀತಿ ಉತ್ಪಾದನೆಯನ್ನು ಬೇಡಿಕೆಯನ್ನನುಸರಿಸಿ ಮಾಡಲಾಗುತ್ತಿತ್ತು. ಇದರಿಂದ ಸರಕುಗಳನ್ನು ಸ್ಟಾಕ್ ಮಾಡುವ ವೆಚ್ಚ ತಪ್ಪುತ್ತಿತ್ತು. ಇದಾವುದೂ ಸಾಧ್ಯವಿರದಿದ್ದರೆ ಖಾಸಗೀ ವಲಯದಲ್ಲಿ ಉದ್ಯೋಗ ಸಿಗುವ ಸನ್ನಿವೇಶಗಳನ್ನು ಗಮನಿಸಿ ಹೆಚ್ಚುವರಿ ಕಾರ್ಮಿಕರನ್ನು ಭರಕಾಸ್ತು ಮಾಡುವುದಾಗುತ್ತಿತ್ತು. ಒಟ್ಟಿನಲ್ಲಿ ಖಾಸಗೀವಲಯ ಮಾರುಕಟ್ಟೆ ಧೋರಣೆಗಳನ್ನನುಸರಿಸಿ ಸ್ವತಂತ್ರವಾಗಿ ಬೆಳೆಯುವಂತೆ ಮಾಡುವುದು ಸರ್ಕಾರದ ನೀತಿಯಾಗಿತ್ತು.

ಹಿಂದೆ ಹೇಳಿದಂತೆ ಸಾಲ ಪಡೆದುಕೊಂಡ ಕೈಗಾರಿಕೆಗಳು ಒಮ್ಮೊಮ್ಮೆ ಮರುಪಾವತಿ ಮಾಡಲು ಅಶಕ್ತವಾಗುತ್ತಿದ್ದುವು. ಅಂಥ ಸಂದರ್ಭಗಳಲ್ಲಿ ಸರ್ಕಾರ ಅವುಗಳಲ್ಲಿ ತೊಡಗಿಸಿರುವ ಸಾರ್ವತ್ರಿಕ ಹಣ ನಷ್ಟವಾಗದಂತೆ ನೋಡಿಕೊಳ್ಳುತ್ತಿತ್ತು. ಸಾಲಕ್ಕೆ ತಕ್ಕಂತೆ ಸೆಕ್ಯುರಿಟಿ ಪಡೆದು ಕೊಳ್ಳಲಾಗುತ್ತಿತ್ತು. ಈ ಸೆಕ್ಯುರಿಟಿ ಮೊತ್ತವನ್ನು ಕಾನೂನಿನಲ್ಲಿ ನಿಶ್ಚಿತಗೊಳಿಸಲಾಗುತ್ತಿತ್ತು. ಮರುಪಾವತಿಯ ಮೊತ್ತ, ಬಡ್ಡಿದರ ಮತ್ತು ಸಾಲದ ಅವಧಿಗಳನ್ನು ಒಪ್ಪಂದಗಳ ಮೂಲಕ ನಿಶ್ಚಯಮಾಡಿಕೊಳ್ಳಲಾಗುತ್ತಿತ್ತು. ಮರುಪಾವತಿ ಮಾಡಲು ತಪ್ಪಿದ ಕಂಪನಿಗಳ ವಿರುದ್ಧ ಸೆಕ್ಯೂರಿಟಿಯಿಂದ ವಸೂಲಿ ಪಡೆದುಕೊಳ್ಳುವ ಕಾನೂನು ಕ್ರಮ ಜರುಗಿಸಲಾಗುತ್ತಿತ್ತು. ಇಂಥ ವಹಿವಾಟುಗಳ ಅಂಕಿ ಅಂಶಗಳನ್ನು ಸರ್ಕಾರ ಪಡೆದುಕೊಂಡು ಯಾವಾಗಲೂ ಅಪ್‌ಡೇಟ್

ಮಾಡಿಕೊಳ್ಳುತ್ತಿತ್ತು. ಇಂಥ ಪ್ರವೃತ್ತಿ ಒಮ್ಮೊಮ್ಮೆ ಹೆಚ್ಚು ಸಂಭವಿಸಿದರೂ ಈ ಸಾಲ ಯೋಜನೆಗಳನ್ನು ನಿಲ್ಲಿಸಿಬಿಡುವ ಅಭಿಪ್ರಾಯವನ್ನು ಸರ್ಕಾರ ಹೊಂದಿರಲಿಲ್ಲ. ಬದಲಾಗಿ ಹಾಗೇ ಮುಳುಗುತ್ತಿರುವ ಕಂಪನಿಗಳಿಗೆ ನೆರವು ನೀಡುವ ಇನ್ನಿತರ ಯೋಜನೆಗಳನ್ನು ರೂಪಿಸಲಾಗುತ್ತಿತ್ತು.

ನಿರ್ದಿಷ್ಟ ಕಂಪನಿಗಳ ನಿರ್ವಹಣೆ ಕುರಿತಾದ ಅನೇಕ ಪ್ರಶ್ನೆಗಳು ಸದನದಲ್ಲಿ ಮಂಡಿತವಾಗುತ್ತಿದ್ದವು. ಯಥಾ ಸಂಗತಿಗಳ ಪ್ರಾಮಾಣಿಕ ನಿರೂಪಣೆಯಿಂದ ಅನಗತ್ಯ ಸಂದೇಹಗಳನ್ನು ಪ್ರಜಾಪ್ರತಿನಿಧಿಗಳ ಮನಸ್ಸಿನಿಂದ ದೂರ ಮಾಡಲು ಸಿದ್ದಲಿಂಗಯ್ಯನವರು ಕಾತುರರಾಗಿರುತ್ತಿದ್ದರು. ಈ ಕಾರ್ಯನೀತಿಗಳನ್ನು ಸದಾ ಗಮನದಲ್ಲಿಟ್ಟುಕೊಂಡು ಸಿದ್ದಲಿಂಗಯ್ಯನವರು ಸದಸ್ಯರ ಎಲ್ಲ ಸಂದೇಹಗಳನ್ನು ಪರಿಣಾಮಕಾರಿಯಾಗಿ ನಿವಾರಿಸುತ್ತಿದ್ದುದರ ಪುರಾವೆ ಇವರ ಅಧಿಕಾರಾವಧಿಯ ಸದನಕಲಾಪಗಳ ವರದಿಗಳಲ್ಲಿ ಯಥೇಚ್ಛವಾಗಿದೆ. ಇಂಥ ಒಂದು ನಿದರ್ಶನವಾಗಿ 30-6-1952 ರಂದು ವಿಧಾನ ಸಭೆಯಲ್ಲಿ ಎಂ. ರಾಜಶೇಖರಮೂರ್ತಿಯವರು (ಯಳಂದೂರು ಕ್ಷೇತ್ರ) ಮೈಸೂರಿನ ಗಂಧದ ಎಣ್ಣೆ ಕಾರ್ಖಾನೆಯ ಉತ್ಪಾದನೆ ಮತ್ತು ಕಾರ್ಯನಿರ್ವಹಣೆ ವಿಷಯವಾಗಿ ಎತ್ತಿದ ಪ್ರಶ್ನೆಯಿಂದ ಉದ್ಭವಿಸಿದ ಚರ್ಚೆಯ ಒಂದು ತುಣುಕನ್ನು ಇಲ್ಲಿ ಕೊಡಲಾಗಿದೆ.

*****

"ಶ್ರೀ ಎಂ. ರಾಜಶೇಖರ ಮೂರ್ತಿ:- ಆ ಸ್ಥಾವರದ ಉತ್ಪಾದನೆಯ 36-37, 37-38 ಮತ್ತು 41-42ರಲ್ಲಿ ಅದರ ಸಾಮರ್ಥ್ಯವನ್ನು ಮೀರಿರುವುದು ಹೇಗೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಅವರು ಒಂದು ಪಾಳಿಗಿಂತ ಹೆಚ್ಚಾಗಿ ಕೆಲಸ ಮಾಡಿದ್ದಾರೆ.

ಶ್ರೀ ಎಂ. ರಾಜಶೇಖರ ಮೂರ್ತಿ:- ಉತ್ಪಾದನೆಯಲ್ಲಿ ಬಹಳಷ್ಟು ಇಳಿತ ಉಂಟಾಗಿದ್ದರೂ ಸಹ ಸಿಬ್ಬಂದಿ ವೆಚ್ಚ ಹೆಚ್ಚಾಗಿರುವುದಕ್ಕೆ ಕಾರಣಗಳೇನು?

ಶ್ರೀ ಟಿ. ಸಿದ್ದಲಿಂಗಯ್ಯ:- ವೇತನ ಶ್ರೇಣಿಗಳ ಪರಿಷ್ಕರಣೆ ಮತ್ತು ಇತರ ವಿಷಯಗಳು ಇದಕ್ಕೆ ಕಾರಣ.

ಶ್ರೀ ಎ. ಭೀಮಪ್ಪ ನಾಯಕ (ಮೊಳಕಾಲ್ಮೂರು):- ಅರಣ್ಯ ಇಲಾಖೆಯೇ ಈ ಕಾರ್ಖಾನೆಯನ್ನು ನಿರ್ವಹಿಸುವ ಅವಕಾಶ ನೀಡುವ ಪ್ರಸ್ತಾವನೆ ಇದೆಯೇ ಎಂಬುದನ್ನು ಘನ ಸರ್ಕಾರವು ದಯವಿಟ್ಟು ತಿಳಿಸುವುದೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಮಾನ್ಯ ಸದಸ್ಯರು ಮಂಡಿಸಿದಂತ ಪ್ರಸ್ತಾವನೆ ಸರಿಯಲ್ಲ. ಪ್ರಸ್ತಾವನೆ ಇರುವುದು ಹೀಗೆ-ಕಾರ್ಯ ನಿರ್ವಹಣೆಯು ಕೈಗಾರಿಕಾ ಇಲಾಖೆಯ ವಶದಲ್ಲಿಯೇ ಇರುತ್ತದೆ. ಆದರೆ ಅದರ ಲಾಭವನ್ನು ಅರಣ್ಯ ಇಲಾಖೆಗೆ ಜಮೆ ಮಾಡಬಹುದು.

ಶ್ರೀ ಎ. ಭೀಮಪ್ಪ ನಾಯಕ:- ಅರಣ್ಯ ಇಲಾಖೆಯೇ ಇದನ್ನು ನಿರ್ವಹಿಸುವುದು ಒಳ್ಳೆಯದಲ್ಲವೇ? ಇದರಿಂದ ಶ್ರೀಗಂಧದ ಮರ ಮತ್ತು ಇತರ ವಿಷಯಗಳ ಬಗ್ಗೆ ಲೆಕ್ಕ ಇಡಬಹುದು ಮತ್ತು ಉತ್ತಮವಾಗಿ ಕಾರ್ಯ ನಿರ್ವಹಿಸಬಹುದಾಗಿದೆ.

ಶ್ರೀ ಟಿ. ಸಿದ್ದಲಿಂಗಯ್ಯ:- ಈ ವಿಚಾರವನ್ನು ಕೆಲವು ದಶಕಗಳ ಹಿಂದೆಯೇ

ಪರಿಗಣಿಸಲಾಗಿತ್ತು. ಆ ತರುವಾಯ ಕಾರ್ಖಾನೆಯನ್ನು ಕೈಗಾರಿಕಾ ಇಲಾಖೆಗೆ ನಿರ್ವಹಣೆಗಾಗಿ ಒಪ್ಪಿಸಲಾಯಿತು.

ಶ್ರೀ ಎ. ಭೀಮಪ್ಪ ನಾಯಕ:- ಸರ್ಕಾರವು ಈ ವಿಚಾರವನ್ನು ಹೊಸದಾಗಿ ಪರಿಗಣಿಸಿ, ಈಗಿನ ಪರಿಸ್ಥಿತಿಯಲ್ಲಿ ಎಲ್ಲ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪರಿಶೀಲಿಸುವುದೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಆಕ್ಷೇಪಣೆ ಇಲ್ಲ.

ಜನಾಬ್ ಜಿ. ಮಹಮದ್ ಇಮಾಮ್ (ಜಗಳೂರು):- ಆದಾಯವನ್ನು ತೋರಿಸುವಲ್ಲಿ ಶ್ರೀಗಂಧದ ಮರದ ಮೌಲ್ಯವನ್ನು ಕಡಿಮೆ ಮಾಡದಿರುವುದು ನಿಜವೇ?

ಶ್ರೀ ಟಿ. ಸಿದ್ದಲಿಂಗಯ್ಯ:- ವಿಷಯ ಹೀಗಿದೆ. ಗಂಧದ ಎಣ್ಣೆಯನ್ನು ಅರಣ್ಯ ಇಲಾಖೆಯ ಪರವಾಗಿ ಮತ್ತು ಈ ಇಲಾಖೆಗಾಗಿ ಉತ್ಪಾದಿಸಲಾಗುತ್ತಿದೆ ಮತ್ತು ಅರಣ್ಯ ಇಲಾಖೆಯ ಪರವಾಗಿಯೇ ಮಾರಾಟ ಮಾಡಲಾಗುತ್ತಿದೆ. ಶ್ರೀಗಂಧದ ಮರವನ್ನು ಅರಣ್ಯ ಇಲಾಖೆಯಿಂದ ಕೊಂಡುಕೊಳ್ಳುವ ಮತ್ತು ಅದರ ಬೆಲೆಯನ್ನು ಇಲಾಖೆಗೆ ಸಂದಾಯ ಮಾಡುವ ಪ್ರಶ್ನೆಯೇ ಇಲ್ಲ. ನಿರ್ವಹಣೆಯನ್ನು ಅರಣ್ಯ ಇಲಾಖೆಯ ಪರವಾಗಿಯೇ ಮಾಡಲಾಗುತ್ತಿದೆ. ಆದ್ದರಿಂದ, ಗಂಧದ ಮರವನ್ನು ಕೊಳ್ಳುವ ಮತ್ತು ಬೆಲೆಯನ್ನು ಸಂದಾಯ ಮಾಡುವ ಪ್ರಶ್ನೆಯೇ ಇಲ್ಲ.

ಜನಾಬ್ ಜಿ. ಮಹಮದ್ ಇಮಾಮ್:- ಸರಿಯಾದ ಅಂಕಿ ಅಂಶಗಳನ್ನು ಪಡೆಯಲು, ಗಂಧದ ಮರಕ್ಕೆಂದು ಪ್ರತ್ಯೇಕ ಲೆಕ್ಕವನ್ನಿಟ್ಟು, ಎಣ್ಣೆಯನ್ನು ತಯಾರಿಸುವ ನಮ್ಮ ಶ್ರಮಕ್ಕೆ ಎಷ್ಟು ಅಧಿಕ ಲಾಭ ಬರುತ್ತದೆ ಎಂದು ತಿಳಿಯುವುದು ಅಪೇಕ್ಷಣೀಯವಲ್ಲವೇ.

ಶ್ರೀ ಟಿ. ಸಿದ್ದಲಿಂಗಯ್ಯ:- ಈ ಸಲಹೆಗಾಗಿ ನಾನು ಮಾನ್ಯ ಸದಸ್ಯರನ್ನು ಅಭಿನಂದಿಸುತ್ತೇನೆ. ಇದನ್ನು ನಾವು ಈಗಾಗಲೇ ಗಣನೆಗೆ ತೆಗೆದುಕೊಂಡಿದ್ದೇವೆ.”

*****

## ಭದ್ರಾವತಿ ರಸಗೊಬ್ಬರ ತಯಾರಿಕಾ ಘಟಕ

ಭದ್ರಾವತಿಯಲ್ಲಿ ರಸಗೊಬ್ಬರ ತಯಾರಿಕಾ ಘಟಕವನ್ನು ಸ್ಥಾಪಿಸುವ ಬಗ್ಗೆ ಬಡ್ಜೆಟ್ ಭಾಷಣದಲ್ಲಿ ಹೇಳಿತ್ತಾದರೂ ಅದನ್ನು ಕೈಗೆತ್ತಿಕೊಳ್ಳದಿದ್ದ ಕಾರಣ ಮಾನ್ಯ ಸದಸ್ಯರೊಬ್ಬರು ಎತ್ತಿದ ಪ್ರಶ್ನೆಗೆ ಹೊನ್ನೆಮರಡು ಯೋಜನೆ ಇನ್ನೂ ಕೈಗೂಡದಿರುವುದರಿಂದ ಭದ್ರಾವತಿ ಯೋಜನೆಯನ್ನು ಕೈಗೆತ್ತಿಕೊಳ್ಳುವುದು ಸಾಧ್ಯವಾಗಲಿಲ್ಲ ಎಂದು ವಿವರಿಸಿ ನೀಡಿದ ಉತ್ತರದಿಂದ ಮೂಡಿ ಬಂದ ಉಪ ಪ್ರಶ್ನೆಗಳನ್ನು ಸಿದ್ದಲಿಂಗಯ್ಯನವರು ನಿರ್ವಹಿಸಿದ ರೀತಿ:

“ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- I have got a copy also ಆಗ ಹೊನ್ನೆ ಮರಡು ಪ್ರಾಜೆಕ್ಟನ್ನು ಅಂಡರ್‌ಟೇಕ್ ಮಾಡದ ಹೊರತು ಈ ಫರ್ಟಿಲೈಸರ್ ಪ್ರಾಜೆಕ್ಟ್ ಶುರು ಮಾಡುವುದಕ್ಕಾಗುವುದಿಲ್ಲ. ಅಥವಾ ಪ್ರಯೋಜನ ಮಾಡುವುದಕ್ಕಾಗುವುದಿಲ್ಲ ಎಂಬುದು ತಿಳಿದಿರಲಿಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಆಗ ಅಷ್ಟು ಖಚಿತವಾಗಿ ಗೊತ್ತಾಗಿರಲಿಲ್ಲ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಇದನ್ನು ಕೈಗೊಳ್ಳಬೇಕೆಂದು ನಿರ್ಧಾರ ಮಾಡುವುದಕ್ಕೆ ಮೊದಲು ಟೆಕ್ನಿಕಲ್ ಎಕ್ಸ್‌ಪರ್ಟ್ ಯಾರೂ ಕೂಡ ಈ ವಿಷಯದಲ್ಲಿ ಸಲಹೆ ಮಾಡಿರಲಿಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ:- ವಿದ್ಯುಚ್ಛಕ್ತಿ ಕೊಡುವುದು ಡಿಮ್ಯಾಂಡ್ ಮೇಲೆ ಅವಲಂಬಿಸುತ್ತದೆ. ಈಗ ವಿದ್ಯುಚ್ಛಕ್ತಿಗೆ ಡಿಮ್ಯಾಂಡ್ ಬಹಳ ಜಾಸ್ತಿಯಾಗುತ್ತಾ ಇರುವುದರಿಂದ ಹೊಸದಾಗಿ ಆಗುವ ಈ ಫರ್ಟಿಲೈಸರ್ಸ್ ಫ್ಯಾಕ್ಟರಿಗೆ ಕೊಡಲು ಉಳಿಯುತ್ತದೆಯೇ ಇಲ್ಲವೊ ಎಂದು ಸಂದೇಹವಾಗಿದೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ನನ್ನ ಪ್ರಶ್ನೆ, ಈ ಫರ್ಟಿಲೈಸರ್ಸ್ ಕೈಗೊಳ್ಳಬೇಕೆಂದು ಯೋಚನೆ ಮಾಡಿದಾಗ ಇದಕ್ಕೆ ಏನು ಸೌಲಭ್ಯಗಳು ಬೇಕು? ಯಾವ ಯಾವ ಸಾಧನ ಸಂಪತ್ತಿದ್ದರೆ ಆಗಬಹುದು, ತಗಲುವ ವೆಚ್ಚ ಎಷ್ಟಾಗುತ್ತದೆ, ಎಂಬ ಬಗ್ಗೆ ಟೆಕ್ನಿಕಲ್ ಎಕ್ಸ್‌ಪರ್ಟ್ಸ್ ಸಲಹೆಗಳನ್ನು ತೆಗೆದುಕೊಂಡು ನಿರ್ಧಾರಕ್ಕೆ ಬಂದಿಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಸಲಹೆಗಳನ್ನು ತೆಗೆದುಕೊಂಡೇ ನಿರ್ಧಾರಕ್ಕೆ ಬಂದಿದೆ. ನಾನು ಹೇಳಿದ್ದು ಸಲಹೆ ತೆಗೆದುಕೊಂಡಾಗ ಪವರ್ ಡಿಮ್ಯಾಂಡ್ ಕಡಿಮೆ ಇತ್ತು. ಈಚೆಗೆ ಪವರ್ ಡಿಮ್ಯಾಂಡ್ ಜಾಸ್ತಿ ಆಗಿದೆ. ಆದ್ದರಿಂದ ಫರ್ಟಿಲೈಸರ್ಸ್ ಫ್ಯಾಕ್ಟರಿಗೆ ಪವರ್ ಸಪ್ಲೈ ಮಾಡುವುದು ಅನುಮಾನದಲ್ಲಿದೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ವಿದ್ಯುಚ್ಛಕ್ತಿ ಡಿಮ್ಯಾಂಡು ಜಾಸ್ತಿಯಾಗಿ ಹೊನ್ನೆಮರಡು ಪ್ರಾಜೆಕ್ಟ್ ಮಾಡಿದ ಹೊರತು ಆಗುವುದಿಲ್ಲ ಎಂದು ಇತ್ತೀಚೆಗೆ ಮೊದಲನೇ ಸಾರಿ ಗೊತ್ತಾದದ್ದು ಯಾವಾಗ?

ಶ್ರೀ ಟಿ. ಸಿದ್ದಲಿಂಗಯ್ಯ:- ಮೊದಲಿನಿಂದಲೂ ಹೇಳುತ್ತಾ ಇದ್ದೇವೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಕೆಮಿಕಲ್ ಕಾರ್ಪೊರೇಷನ್ ಆಫ್ ನ್ಯೂಯಾರ್ಕ್ ರವರೊಂದಿಗೆ ಅಗ್ರಿಮೆಂಟ್ ಮಾಡಿಕೊಂಡದ್ದು ಯಾವ ವರ್ಷದಲ್ಲಿ?

ಶ್ರೀ ಟಿ. ಸಿದ್ದಲಿಂಗಯ್ಯ:- ಸುಮಾರು ಮೂರು ವರ್ಷಗಳಾಗಿವೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಹಾಗೆ ಕೆಮಿಕಲ್ ಕಾರ್ಪೊರೇಷನ್ ಆಫ್ ನ್ಯೂಯಾರ್ಕ್ ಇವರು ಈ ಫರ್ಟಿಲೈಸರ್ಸ್ ಫ್ಯಾಕ್ಟರಿ ಶುರು ಮಾಡಬೇಕೆಂದು ಅಗ್ರಿಮೆಂಟ್ ಮಾಡಿಕೊಂಡಾಗ ಹೊನ್ನೆಮರಡು ಪ್ರಾಜೆಕ್ಟ್ ಮಾಡದಿದ್ದರೂ ಪರವಾಗಿಲ್ಲ. ಶುರು ಮಾಡಬಹುದೆಂದು ಮಾಡಿಕೊಂಡಿತ್ತೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಇಲ್ಲ. ಆಗ ಪವರ್ ಸಪ್ಲೈ ಮಾಡಬಹುದು ಎಂಬ ಅಭಿಪ್ರಾಯ ಇತ್ತು.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಕೆಮಿಕಲ್ ಕಾರ್ಪೊರೇಷನ್ ಆಫ್ ನ್ಯೂಯಾರ್ಕ್ ನೊಂದಿಗೆ ಮಾಡಿಕೊಂಡಿರುವ ಅಗ್ರಿಮೆಂಟ್ ಏನು ಎಂಬುದನ್ನು ಹೇಳುವುದಕ್ಕಾಗುತ್ತದೆಯೇ? ಈಗ ಮುಖ್ಯವಾದುದನ್ನು ಹೇಳಿದರೂಸಾಕು.

9- 2165

ಶ್ರೀ ಟಿ. ಸಿದ್ದಲಿಂಗಯ್ಯ:- ಮುಖ್ಯವಾದುದನ್ನು ಹೇಳುವುದಕ್ಕಾಗುವುದಿಲ್ಲ. ಅದು ಕಾನ್‌ಫಿಡೆನ್ಷಿಯಲ್.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಎಷ್ಟು ವರ್ಷಕ್ಕೆ ಅಗ್ರಿಮೆಂಟ್ ಆಗಿದೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಇಲ್ಲಿ ನನ್ನ ಹತ್ತಿರ ಅಗ್ರಿಮೆಂಟ್ ಇಲ್ಲ. ಕೆಲಸ ಪೂರ್ತಿ ಆಗುವವರೆಗೂ ಇರಬಹುದು.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಎಷ್ಟು ವರ್ಷಕ್ಕೆ ಅಗ್ರಿಮೆಂಟ್ ಆಗಿದೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಇಷ್ಟೇ ವರ್ಷವೆಂದೇನು ಗೊತ್ತಾಗಿಲ್ಲ. ಇದು ಕಾರ್ಯಗತವಾದರೆ ಇದು ಪೂರ್ತಿಯಾಗುವವರೆಗೆ ಇದಕ್ಕೆ ಹಣ ಖರ್ಚಾಗುತ್ತದೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಎಷ್ಟು ಖರ್ಚಾಗಬಹುದು.

ಶ್ರೀ ಟಿ. ಸಿದ್ದಲಿಂಗಯ್ಯ:- ಸುಮಾರು ಒಂದೂವರೆ ಲಕ್ಷ ರೂಪಾಯಿಗಳು ಆಗಬಹುದು.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಈಗಾಗಲೇ ಕಂಪನಿಗೆ ಕೊಟ್ಟಿರುವುದೂ ತಾವು ಹೇಳಿರುವ ಮೊಬಲಗಿನಲ್ಲಿ ಸೇರಿರುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಎಲ್ಲಾ ಸೇರಿ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಈ ಫರ್ಟಿಲೈಸರ್ಸ್ ಪ್ರಾಜೆಕ್ಟಿಗಾಗಿ ಪ್ಲಾನಿಂಗ್ ಕಮಿಷನ್‌ರವರನ್ನು ಹಣ ಒದಗಿಸಬೇಕೆಂದು ತಾವು ಕೇಳಿದ್ದು ಯಾವಾಗ?

ಶ್ರೀ ಟಿ. ಸಿದ್ದಲಿಂಗಯ್ಯ:- ಸುಮಾರು ಒಂದೂವರೆ ವರ್ಷದಿಂದಲೂ ಈ ವ್ಯವಹಾರ ನಡೆಯುತ್ತಿದೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ತಾವು ಮೊದಲು ಕೇಳಿದ್ದು ಯಾವಾಗ?

ಶ್ರೀ ಟಿ. ಸಿದ್ದಲಿಂಗಯ್ಯ:- ಒಂದೂವರೆ ವರ್ಷದ ಹಿಂದೆ ಎಂಬುದು ಈಗ ತಾನೆ ಕೊಟ್ಟ ಉತ್ತರದಿಂದ ಸ್ಪಷ್ಟವಾಗುತ್ತದೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಅವರಿಂದ ಆಗಬಹುದು. ಈ ಬಗ್ಗೆ ನೀವು ಪತ್ರ ವ್ಯವಹಾರ ನಡೆಸಿ ಎಂಬುದಾಗಿ ಜವಾಬು ಯಾವಾಗ ಬಂತು?

ಶ್ರೀ ಟಿ. ಸಿದ್ದಲಿಂಗಯ್ಯ:- ಉತ್ತರ ಬಂದಿಲ್ಲ. ಹೇಗೆ ನೀವು ಹಾಗಂದುಕೊಳ್ಳುತ್ತೀರಿ?

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- (c) ಭಾಗದ ಉತ್ತರದಲ್ಲಿ "the planning commission has proposed to include the scheme in the supplimentary plan to be financed from foreign capital" ಎಂಬುದಾಗಿ ತಿಳಿಸಿರುವುದು ಯಾವ ಆಧಾರದ ಮೇಲೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಇದನ್ನು ತಾವಾಗಿ ಪ್ರಸ್ತಾಪಿಸಿದ್ದರು.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ನೀವು ಈ ವಿಚಾರವಾಗಿ ಏನನ್ನೂ ಹೇಳದೆ ಅವರಾಗಿ ಅವರೇ ಈ ರೀತಿ ತಿಳಿಸಿದರೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಇದಕ್ಕಾಗಿ ಬೇಕಾಗುವಷ್ಟು ವಿದ್ಯುಚ್ಛಕ್ತಿಯನ್ನು ಒದಗಿಸುವ ಭರವಸೆ ಕೊಟ್ಟ ಪಕ್ಷದಲ್ಲಿ ಪ್ಲಾನಿಂಗ್ ಕಮಿಷನ್ ಕಾಂಟ್ರಿಬ್ಯೂಟ್ ಮಾಡುವುದಾಗಿ ಹೇಳಿದರು. ಆಗ ಹೊನ್ನೆಮರಡು ಪ್ರಾಜೆಕ್ಟಿಗೂ ಹಣ ಒದಗಿಸದಿದ್ದರೆ, ಫರ್ಟಿಲೈಸರ್ ಪ್ರಾಜೆಕ್ಟ್ ಒಂದಕ್ಕೆ ಹಣ ಬೇಕಿಲ್ಲವೆಂದು ಪ್ಲಾನಿಂಗ್ ಕಮಿಷನ್‌ಗೆ ತಿಳಿಸಲಾಯಿತು.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ವಿದ್ಯುಚ್ಛಕ್ತಿಯನ್ನು ಇದಕ್ಕಾಗಿ ಒದಗಿಸುವುದಕ್ಕಾಗುವುದಿಲ್ಲವೆಂದು ಹೇಳಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಎರಡು ಪ್ರಾಜೆಕ್ಟ್‌ಗಳನ್ನು ತೆಗೆದುಕೊಂಡರೆ ಒಳ್ಳೆಯದೆಂದೂ, ಹೊನ್ನೆಮರಡು ಪ್ರಾಜೆಕ್ಟಿಗೂ ಹಣವನ್ನು ಒದಗಿಸಿ, ಫರ್ಟಿಲೈಸರ್ಸ್ ಪ್ರಾಜೆಕ್ಟ್ ಒಂದೇ ತೆಗೆದುಕೊಳ್ಳುವುದಕ್ಕಾಗುವುದಿಲ್ಲವೆಂದು ಹೇಳಿದೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಹಾಗಿದ್ದರೆ ಯಾವುದೂ ಬಂಧನಕಾರಿ ಆಗಿಲ್ಲ. ನೀವು ಉತ್ತರದಲ್ಲಿ ಈ ಪ್ರಾಜೆಕ್ಟ್‌ನ ಸಂಬಂಧವಾಗಿ ಇಂಟರ್ ನ್ಯಾಷನಲ್ ಬ್ಯಾಂಕಿಗೆ ಯಾವುದೇ ಉಲ್ಲೇಖ ನೀಡುವ ಪ್ರಸ್ತಾವವಿಲ್ಲವೆಂದು ಸರ್ಕಾರಕ್ಕೆ ತಿಳಿಸಲಾಗಿದೆ ಎಂದು ಹೇಳಿದ್ದೀರಿ. ತಾವು ಇಂಟರ್‌ನ್ಯಾಷನಲ್ ಬ್ಯಾಂಕಿನಿಂದ ಸಾಲ ಪಡೆಯಲು ಪ್ರಯತ್ನಿಸಿದ್ದು ಪ್ಲಾನಿಂಗ್ ಕಮಿಷನ್ ಮೂಲಕ ತಾನೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಅದು ವಾಸ್ತವ ಸಂಗತಿ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಆ ಸುದ್ದಿ ನಿಮಗೆ ತಿಳಿದದ್ದು ಯಾವಾಗ?

ಶ್ರೀ ಟಿ. ಸಿದ್ದಲಿಂಗಯ್ಯ:- ನಾಲ್ಕಾರು ತಿಂಗಳ ಹಿಂದೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ತಮಗೆ ಇಂಟಿಮೇಷನ್ ಬಂದಿರುವುದು ಸದ್ಯಕ್ಕೆ ಫರ್ಟಿಲೈಜರ್ ಪ್ರಾಜೆಕ್ಟ್ ಅಂಡರ್‌ಟೇಕ್ ಮಾಡುವುದಕ್ಕಾಗುವುದಿಲ್ಲ ಎಂದೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಈ ವಿಚಾರವನ್ನೇನೂ ನಾವು ಕೈಬಿಟ್ಟಿಲ್ಲ. ನಮಗೆ ಈ ಬಗ್ಗೆ ಕೇಂದ್ರ ಸರ್ಕಾರದ ಸಹಾಯವೂ ದೊರಕಬಹುದೆಂಬ ಆಶೆ ಇತ್ತು.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ತಾವು ಮೊದಲೇ ಈ ವಿಚಾರದಲ್ಲಿ ಕೇಂದ್ರ ಸರ್ಕಾರದ ಸಹಾಯ ಕೇಳಿದ್ದೀರಾ?

ಶ್ರೀ ಟಿ. ಸಿದ್ದಲಿಂಗಯ್ಯ:- ಮೊದಲೇ ಕೇಳಿದ್ದೆವು. ಅವರು ಈ ವಿಚಾರವನ್ನು ಪ್ಲಾನಿಂಗ್ ಕಮಿಷನ್ ಮೂಲಕ ಇಂಟರ್ ನ್ಯಾಷನಲ್ ಬ್ಯಾಂಕಿಗೆ ರೆಫರ್ ಮಾಡಿ ನೋಡಿ ಎಂದು ಸಲಹೆ ಇತ್ತರು. ಅಲ್ಲಿಗೆ ನಿಂತಿದೆ.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್:- ಹಾಗಿದ್ದರೆ ಇಂಟರ್ ನ್ಯಾಷನಲ್ ಬ್ಯಾಂಕಿನಿಂದ ಸಹಾಯವು ದೊರೆಯದಿದ್ದರೆ ಇದನ್ನು ಸ್ವಂತ ಹಣದಿಂದ ಕೈಗೊಳ್ಳಲು ಸಾಧ್ಯವೆ?

ಶ್ರೀ **ಕೆ. ಹನುಮಂತಯ್ಯನವರು (ಮುಖ್ಯಮಂತ್ರಿಗಳು)**:- ಸ್ವಾಮಿ, ಈ ಎಲ್ಲಾ ಪೂರಕ ಪ್ರಶ್ನೆಗಳ ಹಿಂದೆ ಮಾನ್ಯ ಸದಸ್ಯರ ಉದ್ದೇಶ ಏನಿದೆ ಎಂಬುದನ್ನು ನಾನು ತಿಳಿಯಬಯಸುತ್ತೇನೆ.

ಅಧ್ಯಕ್ಷರು:- ನಾನೇ ಅದನ್ನು ತಿಳಿಯಬಯಸಿದ್ದೇನೆ.

ಶ್ರೀ **ಟಿ.ಎಸ್. ರಾಜಗೋಪಾಲ ಅಯ್ಯಂಗಾರ್**:- ಇಂಟರ್ ನ್ಯಾಷನಲ್ ಬ್ಯಾಂಕಿನಿಂದ ಹಣವನ್ನೊದಗಿಸಿಕೊಳ್ಳುವ ಸಂಬಂಧದಲ್ಲಿ ಫರ್ಟಿಲೈಸರಲ್ ಪ್ರಾಜೆಕ್ಟಿನೊಂದಿಗೆ ಹೊನ್ನೆಮರಡು ಪ್ರಾಜೆಕ್ಟನ್ನು ಸೇರಿಸಿರುವ ವಿಚಾರವನ್ನು ಹೇಳಿದಿರಿ. ಸೆಂಟ್ರಲ್ ಗೌರ್ನಮೆಂಟಿನವರು ಹಣವನ್ನೊದಗಿಸುವುದಕ್ಕಾಗುವುದಿಲ್ಲವೆಂದು ಹೇಳಿದರೆ ನೀವೇ ಇದನ್ನು ಕೈಗೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಇದರ ಪರಿಣಾಮವಾಗಿ ಸರ್ಕಾರದವರು ಈಗ ಕೆಮಿಕಲ್ ಕಾರ್ಪೊರೇಷನ್ ಆಫ್ ನ್ಯೂಯಾರ್ಕ್ ನೊಡನೆ ಮಾಡಿಕೊಂಡಿರುವ ಒಪ್ಪಂದದ ಪರಿಣಾಮವೇನಾಗುತ್ತದೆಂಬುದನ್ನೂ, ಎರಡನೆಯದಾಗಿ ಭದ್ರಾವತಿಯಲ್ಲಿ ಕೈಗೊಳ್ಳಲಾದ ಫರ್ಟಿಲೈಸರ್ ಯೋಜನೆಯಿಂದ ನಷ್ಟವು ಎಷ್ಟಾಗಿದೆ ಎಂಬುದನ್ನು ತಿಳಿದುಕೊಳ್ಳುವುದೇ ನನ್ನ ಪ್ರಶ್ನೆಯ ಉದ್ದೇಶ.

ಶ್ರೀ ಟಿ. ಸಿದ್ದಲಿಂಗಯ್ಯ:- ಈ ಬಗ್ಗೆ ನಡೆಯುತ್ತಿರುವ ವ್ಯವಹಾರವು ಪೂರ್ಣವಾಗಿಲ್ಲ. ಈ ಪ್ರಾಜೆಕ್ಟನ್ನು ಪೂರ್ಣವಾಗಿ ಕೈಬಿಟ್ಟಿಲ್ಲ. ಈ ಸಂಬಂಧದ ವ್ಯವಹಾರವನ್ನು ಸರ್ಕಾರದವರು ಇನ್ನೂ ಮುಂದುವರೆಸುತ್ತಿದ್ದಾರೆ.

ಶ್ರೀ ಎಚ್.ಆರ್. ಅಬ್ದುಲ್ **ಗಫಾರ್** (ಶಿಕ್ಷಕರ ಕ್ಷೇತ್ರ):- ಜೋಗ್ ಮತ್ತು ಶಿವಮೊಗ್ಗಗಳಿಂದ ಎಷ್ಟು ಕಿಲೋವ್ಯಾಟ್ ವಿದ್ಯುಚ್ಛಕ್ತಿ ಉತ್ಪನ್ನವಾಗುತ್ತಿದೆ.

ಶ್ರೀ ಟಿ. ಸಿದ್ದಲಿಂಗಯ್ಯ:- ಸುಮಾರು ಒಂದು ಲಕ್ಷ ನಲವತ್ತು ಸಾವಿರ ಕಿಲೋವ್ಯಾಟ್.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ):- ಹೊನ್ನೆಮರಡು ವಿದ್ಯುತ್ ಯೋಜನೆಯನ್ನು ಕೈಗೊಳ್ಳದೆ ಫರ್ಟಿಲೈಸರ್ ಯೋಜನೆಯನ್ನು ಕೈಗೊಳ್ಳಲಾಗುವುದಿಲ್ಲವೆಂಬುದು ಸರ್ಕಾರದ ಖಚಿತ ಅಭಿಪ್ರಾಯವೆ?

ಸಭಾಪತಿಯುವರು:- ಅದಕ್ಕೆ ಆಗಲೇ ಸರ್ಕಾರದ ಪರವಾಗಿ ಉತ್ತರ ದೊರೆತಿದೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ:- ಪ್ಲಾನಿಂಗ್ ಕಮಿಷನ್‌ನವರು ಇದನ್ನು ಒಪ್ಪಿಕೊಳ್ಳದೇ ಇರುವುದಕ್ಕೆ ಕಾರಣವೇನು?

ಶ್ರೀ ಟಿ. ಸಿದ್ದಲಿಂಗಯ್ಯ:- ಅವರ ಎಕ್ಸ್‌ಪರ್ಟ್ ಅಡ್ವೈಸ್ ಪ್ರಕಾರ ಆ ರೀತಿ ಮಾಡಿದ್ದಾರೆ".

*****

ಚಿಕ್ಕಬಳ್ಳಾಪುರದ ಸ್ಟಾರ್ [illegible] ಫ್ಯಾಕ್ಟರಿ

ಸರ್ಕಾರದ ಷೇರುಗಳನ್ನುಳ್ಳ ಒಂಟಿ ಸ್ಟಾರ್ ಕಂಪನಿಯೊಂದರಲ್ಲಿ ಸರಕು ಮಾರಾಟವಾಗದೇ ಉಳಿದುದರ ಕಾರಣವನ್ನು ಕೇಳಿ ಸದನದಲ್ಲಿ ಪ್ರಶ್ನೆ ಎತ್ತಲಾಗಿತ್ತು. ಸದರಿ ಕಂಪನಿಗೆ ಸಂಬಂಧಿಸಿದ ಎಲ್ಲ ಸಂಗತಿಗಳೂ ಸರ್ಕಾರಕ್ಕೆ ಲಭ್ಯವಿದ್ದುವಾದರೂ ಪ್ರಶ್ನೆಯನ್ನು ಎತ್ತಿದ ಮಾಹಿತಿಯನ್ನು ನೀಡಲು

ಸರ್ಕಾರ ನಿರಾಕರಿಸಿತು. ಕೈಗಾರಿಕಾ ಸಚಿವರಾದ ಸಿದ್ದಲಿಂಗಯ್ಯನವರು ಸರ್ಕಾರದ ನೀತಿಯನ್ನು ನಿಖರವಾಗಿಯೂ ನಿಷ್ಠುರವಾಗಿಯೂ ಪ್ರತಿಪಾದಿಸಿದ ಬಗೆ:

"ಶ್ರೀ ಜಿ. ಪಾಪಣ್ಣನವರು:- ಈ ಕಾರ್ಖಾನೆಯಲ್ಲಿ ಸರ್ಕಾರದ ಷೇರು ಎಷ್ಟಿದೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಸುಮಾರು ಎರಡೂವರೆ ಲಕ್ಷ ರೂಪಾಯಿಗಳಷ್ಟು ಇದೆ.

ಶ್ರೀ ಜಿ. ಪಾಪಣ್ಣನವರು:- ಈ ಕಂಪನಿಗೆ ಸಂಬಂಧಪಟ್ಟ ಯಾವ ವಿವರವನ್ನೂ ಸರ್ಕಾರದವರು ಒದಗಿಸಲು ಸಾಧ್ಯವಿಲ್ಲ ಎಂದು ಹೇಳಿದ್ದೀರಿ. ಇದರ ಹಣಕಾಸಿನ ಸ್ಥಿತಿ ಹೇಗಿದೆಯೆಂದು ತಿಳಿದುಕೊಳ್ಳಬಹುದೆ?

ಶ್ರೀ ಟಿ ಸಿದ್ದಲಿಂಗಯ್ಯ:- ತಿಳಿದುಕೊಳ್ಳಬಹುದು.

ಶ್ರೀ ಜಿ. ಪಾಪಣ್ಣನವರು:- ಈ ಕಂಪನಿ ಲಾಭದಲ್ಲಿಯೇ? ಅಥವಾ ನಷ್ಟದಲ್ಲಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಲಾಭದಲ್ಲಿಯೇ ಇದೆ.

ಶ್ರೀ ಜಿ. ಪಾಪಣ್ಣನವರು:- ಲಾಭ ನಷ್ಟದ ತಃಖ್ತೆ ಪ್ರತಿ ವರ್ಷವೂ ತಮಗೆ ಬರುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಬರುತ್ತದೆ.

ಶ್ರೀ ಜಿ. ಪಾಪಣ್ಣನವರು:- ಲಾಭ ನಷ್ಟ ತಿಳಿದುಕೊಳ್ಳುವಾಗ ಸ್ಟಾಕ್ ಎಷ್ಟಿದೆ ಎಂಬ ವಿವರ ಕಳುಹಿಸುವುದಿಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಎಲ್ಲವೂ ಬರುತ್ತದೆ.

ಶ್ರೀ ಜಿ. ಪಾಪಣ್ಣನವರು:- ಹಾಗಾದರೆ ಏಕೆ ತಿಳಿಸಬಾರದು?

ಶ್ರೀ ಟಿ. ಸಿದ್ದಲಿಂಗಯ್ಯ:- ಅದನ್ನು ಪಬ್ಲಿಕ್ ಮಾಡತಕ್ಕ ಪದ್ದತಿ ಸರಿಯಲ್ಲ. ಕಾರಣ ಅದು ಜಾಯಿಂಟ್ ಸ್ಟಾಕ್ ಕಂಪನಿ".

*****

## ಗ್ರಾಮಾಂತರ ಕೈಗಾರಿಕಾ ಯೋಜನೆ

ರಾಜ್ಯದ ಪ್ರಜೆಗಳ ಜೀವನ ಮಟ್ಟ ಉತ್ತಮಗೊಳ್ಳಲು ಕೃಷಿ ಮತ್ತು ದೊಡ್ಡ ಕೈಗಾರಿಕೆಗಳ ಜೊತೆಜೊತೆಗೆ ಗ್ರಾಮೀಣ ಕೈಗಾರಿಕೆಗಳೂ ಅತ್ಯವಶ್ಯವೆಂಬುದನ್ನು ಮನಗಂಡ ರಾಜ್ಯ ಸರ್ಕಾರದ ಗ್ರಾಮೀಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಸರ್.ಎಂ. ವಿಶ್ವೇಶ್ವರಯ್ಯ ಕೈಗಾರಿಕಾ ಯೋಜನೆಯನ್ನು ಹಮ್ಮಿಕೊಂಡಿತ್ತು. ಈ ಯೋಜನೆಯ ಅನುಷ್ಠಾನದ ಬಗ್ಗೆ ಸದನದಲ್ಲಿ ಎತ್ತಿದ ಪ್ರಶ್ನೆಗಳು ಸರ್ಕಾರ ತನ್ನ ನಿಲುವು, ಮತ್ತು ಕಾರ್ಯನಿಷ್ಠೆಗಳು ಜನರಿಗೆ ತೋರಿಸಿಕೊಡುವಲ್ಲಿ ಅತ್ಯುಪಯುಕ್ತವಾಗಿ ಒದಗಿ ಬಂದವು. ಇಂತಹ ಒಂದು ಚರ್ಚೆಯ ಉದ್ಧೃತ ಭಾಗ ಇಲ್ಲಿದೆ.

"ಶ್ರೀ ಎನ್.ಪಿ. ಗೋವಿಂದೇಗೌಡ:- ಈ ಯೋಜನೆಯನ್ನು ಜಾರಿಗೆ ತಂದುದರ ಉದ್ದೇಶವೇನು?

ಶ್ರೀ ಟಿ. ಸಿದ್ದಲಿಂಗಯ್ಯ:- ನಮ್ಮ ದೇಶದಲ್ಲಿ ಜೀವನದ ಮಟ್ಟವನ್ನು ಹೆಚ್ಚಿಸಬೇಕಾದರೆ ಜಿರಾಯ್ತಿ ಕಸುಬಿನ ಆದಾಯದಲ್ಲಿ ಹಳ್ಳಿಯವರು ಕೆಲವು ಕೈಗಾರಿಕೆಗಳ ಮುಖಾಂತರ ತಮ್ಮ ಆದಾಯವನ್ನು ಜಾಸ್ತಿ ಮಾಡಿಕೊಳ್ಳಬೇಕು, ಕೈಗಾರಿಕೆಗಳಿಂದ ಹೆಚ್ಚು ಹಣ ಕೈಗೆ ಬರುತ್ತದೆ. ಅದಕ್ಕೆ ಉತ್ಸಾಹದಿಂದ ಕೆಲಸ ಮಾಡಬೇಕಾದುದು ಅಗತ್ಯ ಎಂದು ಯೋಚಿಸಿ ಹಳ್ಳಿಯವರಿಗೆ ಆ ರೀತಿ ಉತ್ಸಾಹ ಹುಟ್ಟಿಸಬೇಕು. ಅವರ ಕೈಯಲ್ಲಿ ಹಣ ಓಡಾಡುವ ಹಾಗೆ ಮಾಡಬೇಕು, ಅಂತಹ ಮನೋಭಾವ ಬೆಳೆಸಬೇಕು ಎಂದು ಜಪಾನಿನ ತರಹ ಸಣ್ಣ ಕೈಗಾರಿಕೆಗಳಲ್ಲಿ ಹಳ್ಳಿಗಳಿಗೆ ಮೊದಲು ಉತ್ಸಾಹ ಹುಟ್ಟಿಸಬೇಕೆಂಬ ಉದ್ದೇಶದಿಂದ ಸರ್.ಎಂ. ವಿಶ್ವೇಶ್ವರಯ್ಯನವರ ಯೋಜನೆಯನ್ನು ಸರ್ಕಾರದವರು ಪ್ರಾರಂಭಿಸಿದ್ದಾರೆ.

ಶ್ರೀ ಎನ್.ಪಿ. ಗೋವಿಂದೇಗೌಡ:- ಅದನ್ನು ಜಾರಿಗೆ ತಂದು ಎಷ್ಟು ವರ್ಷವಾಯಿತು?

ಶ್ರೀ ಟಿ. ಸಿದ್ದಲಿಂಗಯ್ಯ:- ಎರಡು ವರ್ಷ

ಶ್ರೀ ಎನ್.ಪಿ. ಗೋವಿಂದೇಗೌಡ:- ಅದನ್ನು ಈಗ ಎರಡು ಜಿಲ್ಲೆಗಳಲ್ಲಿ ಮಾತ್ರ ಜಾರಿಗೆ ತಂದಿದೆಯೆಂದು ಹೇಳುತ್ತೀರಿ. ಅದನ್ನು ಬೇರೆ ಜಿಲ್ಲೆಗಳಲ್ಲಿ ವಿಸ್ತರಿಸಲು ಏನಾದರೂ ತೊಂದರೆ ಇದೆಯೇ, ಅಥವಾ ಎಷ್ಟು ವರ್ಷಗಳಿಗೊಂದು ಸಲ ಅದನ್ನು ಬೇರೆ ಜಿಲ್ಲೆಗಳಿಗೆ ಅನ್ವಯಿಸಬೇಕೆಂದಿದೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಈ ಎರಡು ಜಿಲ್ಲೆಗಳಲ್ಲಿ ಅದನ್ನು ಮೊದಲು ಪ್ರಾರಂಭಿಸಿ ಅದರ ಫಲಾಫಲಗಳು, ಲಾಭ ನಷ್ಟ ಏನೆಂಬುದನ್ನು ನೋಡಿ ತಿಳಿದುಕೊಂಡಿದೆ. ಈ ಸಲ ಮಂಡ್ಯ ಜಿಲ್ಲೆಯೊಂದಕ್ಕೆ ಆ ಯೋಜನೆಯನ್ನು ವಿಸ್ತರಿಸಬೇಕೆಂದು ಈಚೆಗೆ ಆರ್ಡರ್ ಆಗಿದೆ. ಇನ್ನೂ ಅನುಕೂಲವಾದಂತೆ ಜನರ ಅಭಿಪ್ರಾಯವನ್ನು ತಿಳಿದು ಇದಕ್ಕೆ ಅವರು ಸಮರ್ಥನೆ ಕೊಡುವುದಾದರೆ, ಮುಂದೆ ಸಂಸ್ಥಾನಕ್ಕೆಲ್ಲ ವಿಸ್ತರಿಸುವ ಆಲೋಚನೆ ಮಾಡಬೇಕಾಗಿದೆ.

ಶ್ರೀ ಎನ್.ಪಿ. ಗೋವಿಂದೇಗೌಡ:- ಈ ಯೋಜನೆಯನ್ನು ಜಾರಿಗೆ ತರಬೇಕಾದರೆ ಒಂದು ಸುವ್ಯವಸ್ಥಿತವಾದ ಕಾರ್ಯಕ್ರಮವಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಇದಕ್ಕೆ ಒಂದು ಸಮಿತಿ ಇದೆ. ಸರ್ ಎಂ. ವಿಶ್ವೇಶ್ವರಯ್ಯನವರೇ ಅದಕ್ಕೆ ಛೇರ್ಮನ್ ಆಗಿದ್ದಾರೆ. ಇನ್ನೂ ಒಬ್ಬ ಸ್ಪೆಷಲ್ ಆಫೀಸರು ಇದ್ದಾರೆ. ವಿಶ್ವೇಶ್ವರಯ್ಯನವರ ನೇತೃತ್ವದಲ್ಲೇ ಈ ಕೆಲಸವೆಲ್ಲ ನಡೆಯುತ್ತಿದೆ.

ಶ್ರೀ ಎನ್.ಪಿ. ಗೋವಿಂದೇಗೌಡ:- ಈಗ ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಈ ಜಿಲ್ಲೆಗಳಲ್ಲಿ ಸಣ್ಣ ಕೈಗಾರಿಕೆಗೆ ಬೇಕಾದ ಕಚ್ಚಾ ಮಾಲು ಸಿಕ್ಕುತ್ತದೆ. ಅದು ಅಲ್ಲದೆ ಅಲ್ಲಿ ಭತ್ತವೇ ಪ್ರಾಮುಖ್ಯವಾದ ಬೆಳೆ. ಜನರಿಗೆ ಬಿಡುವು ಇರುತ್ತದೆ. ಆದ್ದರಿಂದ ಇಂತಹ ಯೋಜನೆ ಅಲ್ಲಿ ಮಾಡಿದರೆ ಇದರಿಂದ ರೈತರಿಗೆ ಬಹಳ ಸಹಾಯವಾಗಿ ಯೋಜನೆಯು ಫಲಕಾರಿಯಾಗುತ್ತದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಮಾನ್ಯ ಸಚಿವರ ಅಭಿಪ್ರಾಯವನ್ನು ನಾನು ಪೂರ್ಣವಾಗಿ ಒಪ್ಪುತ್ತೇನೆ. ಆದರೆ ಹಣದ ಪ್ರಶ್ನೆ ಅಡ್ಡಿಯಾಗಿದೆ. ಅಲ್ಲದೆ ಈ ಯೋಜನೆಯನ್ನು ಇತರ ಜಿಲ್ಲೆಗಳಿಗೆ

ವಿಸ್ತರಿಸುವ ಮೊದಲು ಈ ಮೂರು ಜಿಲ್ಲೆಗಳಲ್ಲಿ ದೊರೆತ ಫಲಿತಾಂಶವನ್ನು ಗಣನೆಗೆ ತೆಗೆದುಕೊಳ್ಳುತ್ತೇವೆ.

ಶ್ರೀ ಎಸ್. ಶಿವಪ್ಪ (ವಿಧಾನಸಭಾ ಕ್ಷೇತ್ರ):- ಈ ಯೋಜನೆಯಿಂದ ನಾಡಿನ ಉತ್ಪಾದನೆ ಎಷ್ಟು ಹೆಚ್ಚಾಗಿದೆ ಎಂದು ತಿಳಿಯಬಹುದೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಇದರಲ್ಲಿ ಸರ್ಕಾರದವರು 1950-51, 1951-52 ಮತ್ತು 1952-53ನೆಯ ಸಾಲುಗಳಲ್ಲಿ ಇಲ್ಲಿಯವರೆಗೆ ಖರ್ಚು ಮಾಡಿರುವ ಮೊಬಲಗು ಸುಮಾರು ಆರೂಕಾಲು ಲಕ್ಷ ರೂಪಾಯಿಗಳು. ಇದುವರೆಗೆ ಎಷ್ಟು ಈ ವಿಧವಾದ ಕೈಗಾರಿಕೆಗಳಿಂದ ಉತ್ಪತ್ತಿಯಾಗಿದೆಯೆಂದರೆ ಬೆಂಗಳೂರು ಜಿಲ್ಲೆಯಲ್ಲಿ ಸುಮಾರು 40ಲಕ್ಷ ರೂಪಾಯಿಗಳಷ್ಟು, ಕೋಲಾರ ಜಿಲ್ಲೆಯಲ್ಲಿ ಸುಮಾರು 98ಲಕ್ಷ ರೂಪಾಯಿಗಳಷ್ಟು. ಇದರಲ್ಲಿ ಜನರು ತಮ್ಮ ಸ್ವಂತ ತಮ್ಮ ಷೇರನ್ನು ಕೂಡ ಸೇರಿಸಿ ಒಂದು ತರಹ ಸರ್ಕಾರದ ಮೇಲೆ ಕೆಲಸ ಮಾಡುತ್ತಿದ್ದುದರ ಫಲವಾಗಿ ಇಷ್ಟು ಉತ್ಪತ್ತಿಯಾಗಿದೆಯೆಂದು ನಾನು ತಿಳಿಸುತ್ತೇನೆ.

ಶ್ರೀ ಎಸ್. ಶಿವಪ್ಪ :- ಇಲ್ಲಿ ಕೈಕೊಂಡಿರತಕ್ಕ ಕೈಗಾರಿಕೆಗಳು ಯಾವ ತರಹ ಕೈಗಾರಿಕೆ ಎಂಬುದನ್ನು ಹೇಳುವುದಕ್ಕಾಗುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಈಗ ತಾನೆ ಮಾನ್ಯ ಸದಸ್ಯರು ಹೇಳಿದ ಪ್ರಕಾರ ಅಂಥಾ ಸ್ಥಳಗಳಲ್ಲಿ ಯಾವ ಕಚ್ಚಾವಸ್ತುಗಳು ಸಿಗುತ್ತದೆಯೋ ಯಾವ ಯಾವ ಉದ್ಯೋಗ ಪೂರ್ವಕಾಲದಿಂದ ಬಂದಿದೆಯೋ ಅಂಥ ಉದ್ಯೋಗ, ಕಚ್ಚಾವಸ್ತುಗಳು ಉಪಯೋಗಿಸಿಕೊಂಡು ಕೈಗಾರಿಕೆಗಳನ್ನು ಪ್ರಾರಂಭ ಮಾಡುತ್ತಾರೆ. ಸಾವಿರಾರು ತರಹ ಉದ್ಯೋಗಗಳು ಇವೆ.

ಶ್ರೀ ಎಸ್. ಶಿವಪ್ಪ :- ಮೇಲ್ವಿಚಾರಣೆ ನಡೆಸತಕ್ಕ ಅಧಿಕಾರಿಗಳಿಗೆ ಕೈಗಾರಿಕೋದ್ಯಮದಲ್ಲಿ ಯಾವುದಾದರೂ ಒಂದು ಟೆಕ್ನಿಕಲ್ ಕ್ವಾಲಿಫಿಕೇಷನ್ ಇದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಇದರಲ್ಲಿ ನಾವು ಯಾವುದನ್ನೂ ಸರ್ಕಾರಿ ಕೈಗಾರಿಕೋದ್ಯಮ ಎಂದು ಬೇರೆ ಮಾಡಿಲ್ಲ. ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟಿನ ಸೂಪರ್ವಿಷನ್ ಮಾತ್ರ ಇದೆ. ಲೋಕಲ್ ಇಂಡಸ್ಟ್ರೀಸ್‌ಗೆ ಉತ್ತೇಜನ ಕೊಡುವುದು, ಯಾವುದಾದರೂ ಉದ್ಯಮ ನಮ್ಮ ದೇಶದಲ್ಲಿ ಈಚೆಗೆ ಬಿಟ್ಟುಬಿಟ್ಟಿದ್ದರೆ ಅದನ್ನು ಪುನಃ ಪ್ರಾರಂಭ ಮಾಡಿಸುವುದು ಮತ್ತು ಆ ಊರಿನಲ್ಲಿ ಬೇಕಾಂದಥ ಸಾಮಾನು ಅಲ್ಲೇ ತಯಾರುಮಾಡಿಸತಕ್ಕ ಉದ್ದೇಶ ಇರುವುದರಿಂದ ನಾವು ಟೆಕ್ನೀಷಿಯನ್ಸ್ ಯಾರನ್ನೂ ನೇಮಕ ಮಾಡಬೇಕಾದ ಅವಶ್ಯಕತೆ ಇಲ್ಲ.

ಶ್ರೀ ಎಸ್. ಶಿವಪ್ಪ :- ಈಗ ಹೇಳಿದ ಅಂಕಿ ಅಂಶಗಳನ್ನು ಯಾವ ಆಧಾರದ ಮೇಲೆ ಶೇಖರಿಸಿದ್ದೀರಿ.

ಶ್ರೀ ಟಿ. ಸಿದ್ದಲಿಂಗಯ್ಯ:- ಇದಕ್ಕಾಗಿಯೇ ಒಬ್ಬ ಸ್ಪೆಷಲ್ ಆಫೀಸರು ಅವರ ಸಿಬ್ಬಂದಿ ಇವೆಲ್ಲ ಇವೆ. ಅವರು ಇದನ್ನು ಶೇಖರಿಸಿ ಕೊಟ್ಟಿದ್ದಾರೆ.

ಶ್ರೀ ಎಸ್. ಶಿವಪ್ಪ:- ಸರ್.ಎಂ.ವಿ. ಅವರು ಈ ಸ್ಕೀಂ ಬಗ್ಗೆ ಸಾಕಾದಷ್ಟು ಮುಂದುವರೆದಿದೆ ಎಂದು ಹೇಳಿದ್ದಾರೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಅವರ ಇನ್ಸ್ಪಿರೇಶನ್ನೇ ಇದಕ್ಕೆ ಕಾರಣ.

ಶ್ರೀ ಎಸ್. ಶಿವಪ್ಪ:- ಈಗ ಜಾರಿಗೆ ತರುತ್ತಾ ಇರತಕ್ಕ ಸ್ಕೀಮಿನ ಮೇಲ್ವಿಚಾರಣೆ ಜವಾಬ್ದಾರಿ ಸರ್ಕಾರಕ್ಕೆ ಸೇರಿದ್ದು ತಾನೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಯಾವ ಮೂಲಕ ಕೆಲಸ ನಡೆಸಿದರೂ ಜವಾಬ್ದಾರಿ ಸರ್ಕಾರದ್ದೇ.

ಶ್ರೀ ಎಸ್. ಶಿವಪ್ಪ:- ಇದಕ್ಕೆ ವಿಶ್ವೇಶ್ವರಯ್ಯನವರ ಹೆಸರು ಯಾವ ರೀತಿ ಉಪಯೋಗಿಸುತ್ತೀರೋ ಅದೇ ರೀತಿ ಸ್ಕೀಂ ಡೈರೆಕ್ಷನ್ ಕೂಡ ಅವರು ಹೇಳಿದ ಹಾಗೆಯೇ ನಡೆಯುತ್ತಾ ಇದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ನಾನೀಗಾಗಲೇ ಹೇಳಿದಂತೆ ಇದು ಅವರ ಸ್ಫೂರ್ತಿ ಮತ್ತು ಮಾರ್ಗದರ್ಶನದಲ್ಲೆ ನಡೆಯುತ್ತಿದೆ. ಬರೀ ಅವರ ಹೆಸರನ್ನಿಟ್ಟಿರುವುದಲ್ಲ, ವಾಸ್ತವವಾಗಿ ಅವರೇ ಇದರ ನೆರವಿಗೆ ನಿಂತು ನಡೆಸುತ್ತಿದ್ದಾರೆ.

ಶ್ರೀ ಎಸ್. ಶಿವಪ್ಪ:- ಇದರಿಂದ ನಿರುದ್ಯೋಗ ಸಮಸ್ಯೆ ಎಷ್ಟು ಪರಿಹಾರವಾಗಿದೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಸಾಧ್ಯವಿದ್ದಷ್ಟುಮಟ್ಟಿಗೆ ಪರಿಹಾರ ದೊರೆತಿದೆ.

ಶ್ರೀ ಎಸ್. ಶಿವಪ್ಪ:- ನಿಖರವಾದ ಅಂಕಿ ಅಂಶಗಳನ್ನು ನಾನು ತಿಳಿಯಬಯಸುತ್ತೇನೆ. ಅದಿಲ್ಲದೆ ನೀವು ಹೇಗೆ ಹೇಳುತ್ತೀರಿ.

ಶ್ರೀ ಟಿ. ಸಿದ್ದಲಿಂಗಯ್ಯ:- ಬೆಂಗಳೂರು ಜಿಲ್ಲೆಯಿಂದ ಸುಮಾರು 800 ಮಂದಿ ಮತ್ತು ಕೋಲಾರ ಜಿಲ್ಲೆಯಿಂದ 5200ಕ್ಕೂ ಹೆಚ್ಚುಮಂದಿ ಈ ಯೋಜನೆಯಡಿ ಉದ್ಯೋಗ ಪಡೆದಿದ್ದಾರೆ.

ಶ್ರೀ ಎಸ್. ಶಿವಪ್ಪ:- ಸರ್ಕಾರದಲ್ಲಿ ಈ ಕೈಗಾರಿಕೆ ಬಗ್ಗೆ ಅಂಕಿ ಅಂಶಗಳೇ ಇಲ್ಲವೆನ್ನುವುದು ಸಾಕಷ್ಟು ಪ್ರಗತಿಯಾಗಿಲ್ಲವೆಂದು ತೋರಿಸುತ್ತದೆ ಅಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಕ್ಷಮಿಸಿ, ನಾನು ಸರಿಯಾದ ಅಂಕಿ ಅಂಶಗಳನ್ನೇ ಒದಗಿಸಿದ್ದೇನೆ. ಅದನ್ನು ಮಾನ್ಯ ಸದಸ್ಯರು ಮನ್ನಿಸುತ್ತಿಲ್ಲ. ಇದು ಸ್ವಲ್ಪಮಟ್ಟಿಗೆ ಸಮಸ್ಯೆಯನ್ನು ಬಗೆಹರಿಸಿದೆ ಎಂದು ತೋರಿಸುವಷ್ಟು ಮಾಹಿತಿ ಅಂಕಿ ಅಂಶ ನೀಡಿದ್ದೇನೆ. ಸರ್ಕಾರದಲ್ಲಿ ಎಲ್ಲ ಅಂಕಿ ಅಂಶಗಳೂ ಇವೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ):- ಆರು ಕಾಲು ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿರುವುದರಲ್ಲಿ ಎಷ್ಟು ಹಣ ಸಂಬಳ ಸಾರಿಗೆಗೆ ಖರ್ಚಾಗುತ್ತದೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಅಷ್ಟು ವಿವರ ಹೇಳುವುದಕ್ಕೆ ಸಾಧ್ಯವಿಲ್ಲ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ :- ಶೇಕಡಾವಾರು ಹೇಳುವುದಕ್ಕೆ ಸಾಧ್ಯವಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಸುಮಾರು 10% ಇರಬಹುದು. ಅದಕ್ಕಿಂತ ಹೆಚ್ಚಿಲ್ಲ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ :- ಎಷ್ಟು ಜನ ಸ್ಟೇಟ್ ಆಫೀಸರುಗಳು, ಎಷ್ಟು ಜನ ಇತರ ಅಧಿಕಾರಿಗಳು ನೇಮಿಸಿದೆ.

ಶ್ರೀ ಟಿ. ಸಿದ್ದಲಿಂಗಯ್ಯ:- ಸ್ಪೆಷಲ್ ಆಫೀಸರು ಒಬ್ಬರು ಇದ್ದಾರೆ. ಅವರ ಕೈ ಕೆಳಗೆ ಒಬ್ಬರು ಅಸಿಸ್ಟೆಂಟ್ ಕಮೀಷನರ್ ಗ್ರೇಡಿನವರು ಇದ್ದಾರೆ. ಇನ್ಸಪೆಕ್ಟರುಗಳು ಇದ್ದಾರೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ :- ಸ್ಪೆಷಲ್ ಆಫೀಸರು ಅವರ ಸಿಬ್ಬಂದಿ ಖರ್ಚು ಹೇಳುವುದಕ್ಕಾಗುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಸುಮಾರು 10% ಎಂದು ನಾನು ಹೇಳಿದ್ದೇನೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ:- ಬೆಂಗಳೂರು ಮತ್ತು ಕೋಲಾರ ಜಿಲ್ಲೆಯಲ್ಲಿ ಎಷ್ಟು ಹಳ್ಳಿಗಳಲ್ಲಿ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲಾಗಿದೆ?

ಶ್ರೀ ಟಿ. ಸಿದ್ದಲಿಂಗಯ್ಯ:- ತಿದ್ದುಪಡಿಗೊಳಪಟ್ಟಂತೆ ಸುಮಾರು 57 ಕೇಂದ್ರಗಳು. ಒಂದೊಂದು ಸೆಂಟರಿನಲ್ಲಿ 20,000 ಜನಸಂಖ್ಯೆ ಎಂದು ಸುಮಾರು 25 ಹಳ್ಳಿಗಳಿಗೆ ಒಂದೊಂದು ಸರ್ಕಲ್ ಎಂದು ಹೇಳಿ ಏರ್ಪಾಡು ಮಾಡಲಾಗಿದೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ :- ಈ ಸ್ಥಳದಲ್ಲಿ ತಯಾರಾದ ಮಾಲುಗಳನ್ನು ಹೊರದೇಶಗಳಿಗೆ ರಫ್ತು ಮಾಡಲಾಗಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಅವು ಪರದೇಶಕ್ಕೆ ರಫ್ತಾಗತಕ್ಕವಲ್ಲ. ಹಳ್ಳಿ ಕೈಗಾರಿಕೆಯಿಂದ ತಯಾರಾದ ಮಾಲು ಹಳ್ಳಿಯವರಿಗೇ ಉಪಯೋಗವಾಗಬೇಕೆಂದು ಉದ್ದೇಶ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ :- ಈ ಯೋಜನೆಯನ್ನು ಜಪಾನಿನ ಆರ್ಥಿಕ ವ್ಯವಸ್ಥೆಯ ಮೇಲೆ ಆ ಮಾದರಿಯಲ್ಲಿ ನಿರ್ಮಾಣ ಮಾಡಲಾಗಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಈಗಾಗಲೇ ಉತ್ತರಿಸಿದ್ದೇನೆ, ಸ್ವಾಮಿ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ :- ಜಪಾನಿನ ಆರ್ಥಿಕ ವ್ಯವಸ್ಥೆಗೆ ಇಂಡಿಯಾ ದೇಶದ ಆರ್ಥಿಕ ವ್ಯವಸ್ಥೆ ಹೊಂದಿಕೊಂಡು ಹೋಗುವುದಿಲ್ಲ ಎಂಬುದು ಸರ್ಕಾರದವರ ಗಮನದಲ್ಲಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಹಾಗೆ ಹೇಳುವುದಕ್ಕೆ ಕಾರಣವಿಲ್ಲ ಇನ್ನೊಂದು ರೀತಿಯಲ್ಲಿ........

ಅಧ್ಯಕ್ಷರು:- ಅಷ್ಟಲ್ಲದೆ ಅದೊಂದು ಅಭಿಪ್ರಾಯದ ವಿಷಯ.

ಶ್ರೀ ವೈ. ಧರ್ಮಪ್ಪ (ಸ್ಥಾನೀಯ ಪ್ರಾಧಿಕಾರಿ ಕ್ಷೇತ್ರ):- ಈ ಸ್ಕೀಮನ್ನು ಕೋ-ಆಪರೇಟಿವ್ ಬೇಸಿಸ್ ಮೇಲೆ ನಡೆಸುತ್ತಾ ಇದ್ದೀರಾ?

ಶ್ರೀ ಟಿ. ಸಿದ್ದಲಿಂಗಯ್ಯ:- ಈಚೆಗೆ ಇದನ್ನು ಆ ಬೇಸಿಸ್‌ಗೇ ತಿರುಗಿಸಲಾಗಿದೆ.

ಶ್ರೀ ವೈ. ಧರ್ಮಪ್ಪ :- ಹಾಗಾದರೆ ಸರ್ಕಾರದವರು ಎಷ್ಟು ಹಣ ಇನ್ವೆಸ್ಟ್ ಮಾಡಿದ್ದೀರಿ, ಸಾರ್ವಜನಿಕರು ಷೇರು ಮೂಲಕ ಎಷ್ಟು ಹಣ ಇನ್ವೆಸ್ಟ್ ಮಾಡಿದ್ದಾರೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಸರ್ಕಾರದವರು ಆರೂ ಕಾಲು ಲಕ್ಷ ರೂಪಾಯಿ ಹಾಕಿದ್ದಾರೆಂದು ಆಗಲೇ ಹೇಳಿದ್ದೇನೆ. ಒಟ್ಟು 39 ಲಕ್ಷ ರೂಪಾಯಿ ಇದೆ. ಅದರಲ್ಲಿ ಆರೂ ಕಾಲು ಲಕ್ಷ ರೂಪಾಯಿ

ಹೋದರೆ ಬಾಕಿಯದೆಲ್ಲ ಜನಗಳೇ ಇನ್ವೆಸ್ಟ್ ಮಾಡಿ ಅದು ವರ್ಕಿಂಗ್ ಕ್ಯಾಪಿಟಲ್ ಆಗಿ ರೋಲ್ ಆಗುತ್ತಾ ಇದೆ.

ಶ್ರೀ ವೈ. ಧರ್ಮಪ್ಪ :- ಈ ಸ್ಕೀಮನ್ನು ಪ್ರಾಯೋಗಿಕವಾಗಿ ಪ್ರಾರಂಭ ಮಾಡಿದ್ದಿರಾ?

ಶ್ರೀ ಟಿ. ಸಿದ್ದಲಿಂಗಯ್ಯ:- ಪ್ರಾಯೋಗಿಕವಾಗಿ ಪ್ರಾರಂಭ ಮಾಡಿದ್ದೇವೆ. ಬರು ಬರುತ್ತಾ ದೊಡ್ಡದಾಗುತ್ತದೆ.

ಶ್ರೀ ವೈ. ಧರ್ಮಪ್ಪ :- ಈ ಎರಡು ಡಿಸ್ಟ್ರಿಕ್ಟ್‌ಗಳಲ್ಲಿ ಖಾಯಂ ಆಗಿ ನಡೆಸಬೇಕೆಂದು ಅಭಿಪ್ರಾಯ ಇದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಈಗ ಮೂರನೇ ಡಿಸ್ಟ್ರಿಕ್ಟ್‌ಗೂ ಎಕ್ಸಟೆಂಡ್ ಮಾಡಿದ್ದೇವೆ. ಅಲ್ಲಿ ಏನು ಪರಿಸ್ಥಿತಿ ಉಂಟಾಗುತ್ತದೆ ಎಂಬುದನ್ನು ಮುಂದೆ ಕಾದು ನೋಡಿ ಎಲ್ಲೆಲ್ಲಿ ಫಲಪ್ರದವಾಗುತ್ತದೆ ಅಲ್ಲೆಲ್ಲಾ ಸಾಧ್ಯವಾದಮಟ್ಟಿಗೆ ತೆರೆಯಬೇಕೆಂಬ ಅಭಿಪ್ರಾಯ.

ಶ್ರೀ ವೈ. ಧರ್ಮಪ್ಪ :- ಈಗ ಶೇರ್ ಕಲೆಕ್ಟಾಗಿರುವುದು ಕಡಿಮೆ. ಈ ಸ್ಕೀಂ ಲಾಭದಾಯಕವಲ್ಲವೆಂಬ ಭಾವನೆ ಇದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಹಾಗಿಲ್ಲ, ಯೋಜನೆ ಚೆನ್ನಾಗಿ ಕೆಲಸ ಮಾಡುತ್ತಾ ಇದೆ ಎಂದು ಗೊತ್ತಾಗಿದೆ.

ಶ್ರೀ ವೈ. ಧರ್ಮಪ್ಪ :- ಈಗ ಮಂಡ್ಯ ಡಿಸ್ಟ್ರಿಕ್ಟ್‌ನಲ್ಲಿ ಇಂಡಿಯಾ ಸರ್ಕಾರದವರು ಹೊಸ ಇಂಡಸ್ಟ್ರಿಯಲ್ ಸ್ಕೀಂ ಪ್ರಾರಂಭ ಮಾಡಿದ್ದಾರೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಮಾಡಿದೆ.

ಶ್ರೀ ವೈ. ಧರ್ಮಪ್ಪ :- ಈ ಸ್ಕೀಂ ಸಣ್ಣ ಕೈಗಾರಿಕೆಗಳ ಸ್ಕೀಮಿಗೆ ಒಳಪಟ್ಟಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಒಳಪಟ್ಟಿಲ್ಲ.

ಶ್ರೀ ವೈ. ಧರ್ಮಪ್ಪ :- ಇಂಡಿಯಾ ಸರ್ಕಾರದ ಯೋಜನೆಯಲ್ಲಿ ಸಣ್ಣ ಕೈಗಾರಿಕೆಗಳನ್ನು ಪ್ರಾರಂಭಿಸುವುದು ಒಂದು ಅಂಶ.

ಶ್ರೀ ಟಿ. ಸಿದ್ದಲಿಂಗಯ್ಯ:- ಅದು ಸಣ್ಣ ಪ್ರದೇಶಕ್ಕಷ್ಟೇ ಸೀಮಿತವಾಗಿದೆ.

ಶ್ರೀ ವೈ. ಧರ್ಮಪ್ಪ :- ನನ್ನ ಅಭಿಪ್ರಾಯ ಇಂಡಿಯಾ ಸರ್ಕಾರದ 60-70 ಲಕ್ಷ ರೂಪಾಯಿಗಳ ಯೋಜನೆ ಇದ್ದು ಈ ಸ್ಕೀಂ ಇದ್ದರೆ ಡೂಪ್ಲಿಕೇಟ್ ಆಗುವುದಿಲ್ಲವೇ ಎಂದು?

ಶ್ರೀ ಟಿ. ಸಿದ್ದಲಿಂಗಯ್ಯ:- ಇಲ್ಲ; ಇನ್ನೂ ಒಂದಕ್ಕೊಂದಕ್ಕೆ ಸಹಾಯಕವಾಗಿದ್ದು ಚೆನ್ನಾಗಿ ಕೆಲಸ ಮಾಡುತ್ತವೆ.

ಶ್ರೀ ವೈ. ಧರ್ಮಪ್ಪ :- ಒಂದೇ ಜಾಗದಲ್ಲಿ ಎರಡು ದ್ವಾರದಿಂದ ಅನುಕೂಲ ಮಾಡಿಕೊಡುವುದು ಅನ್ಯಾಯವಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಬದಲಾಗಿ ಅದು ತುಂಬಾ ಸಹಾಯಕಾರಿಯಾಗುತ್ತದೆ. ಜನರ ಪುರೋಭಿವೃದ್ಧಿಯನ್ನು ಅದು ಪ್ರೋಷಿಸುತ್ತದೆ.

ಶ್ರೀ ವೈ. ಧರ್ಮಪ್ಪ :- ಮಲೆನಾಡಿನಲ್ಲಿ ಅಂದರೆ ಚಿಕ್ಕಮಗಳೂರು, ಹಾಸನ ಜಿಲ್ಲೆಗಳಲ್ಲಿ ಎಲ್ಲಾದರೂ ಈ ವಿಶ್ವೇಶ್ವರಯ್ಯ ಸ್ಕೀಂ ಆಗಲೀ ಇಂಡಿಯಾ ಸರ್ಕಾರದ ಸ್ಕೀಂ ಆಗಲಿ ಪ್ರಾರಂಭ ಮಾಡಿದ್ದೀರಾ?

ಶ್ರೀ ಟಿ. ಸಿದ್ದಲಿಂಗಯ್ಯ:- ಬಹಳ ಸಂತೋಷ. ಮಲೆನಾಡಿನ ಮಾನ್ಯ ಸದಸ್ಯರು ಕೊಟ್ಟಿರತಕ್ಕ ಸಲಹೆಯನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದೇವೆ. ಈಗಾಗಲೇ ಮಂಡ್ಯ ಜಿಲ್ಲೆಗೆ ಮುಂದುವರೆಸಿದ್ದೇವೆ. ಕೋಲಾರ, ಬೆಂಗಳೂರು ಕಂಟಿನ್ಯೂಯಸ್ ಡಿಸ್ಟ್ರಿಕ್ಟ್‌ಗಳು.

ಅಧ್ಯಕ್ಷರು:- ಮಲೆನಾಡು ಪ್ರದೇಶದಲ್ಲಿ ಅದನ್ನು ಪ್ರಕಟಿಸುವ ಉದ್ದೇಶ ನಿಮಗಿದೆಯೆ ಎನ್ನುವ ಪ್ರಶ್ನೆ.

ಶ್ರೀ ಟಿ. ಸಿದ್ದಲಿಂಗಯ್ಯ:- ಈಗ ಮಂಡ್ಯಾ ಡಿಸ್ಟ್ರಿಕ್ಟ್‌ಗೆ ಬಂದಿದ್ದೇವೆ. ಹಾಸನ ಜಿಲ್ಲೆಯಲ್ಲಿ ಏಕೆ ಮಾಡಲಿಲ್ಲ ಎಂದು ತಮ್ಮ ಪ್ರಶ್ನೆ. ಅದಕ್ಕೆ ಉತ್ತರ ಹೇಳುತ್ತಾ ಇದ್ದೇನೆ. ಮಂಡ್ಯಕ್ಕೆ ಕಂಟಿನ್ಯೂಯಿಟಿ ಇರುವುದರಿಂದ ಈಗ ಮಾಡಿದ್ದೇವೆ. ಮುಂದೆ ಮಲೆನಾಡಿನ ಪ್ರಶ್ನೆಯನ್ನು ನೋಡುತ್ತೇವೆ.

ಶ್ರೀ ಹೆಚ್.ಆರ್. ಅಬ್ದುಲ್ ಗಫಾರ್(ಶಿಕ್ಷಕರ ಕ್ಷೇತ್ರ):- ಈ ಕಾರ್ಯದ ಮೇಲ್ವಿಚಾರಣೆಗೆಂದೇ ಒಬ್ಬರು ವಿಶೇಷ ಅಧಿಕಾರಿ ಇದ್ದಾರೆಂದು ಹೇಳಲಾಗಿದೆ. ಅವರ ಅಧಿಕಾರಾವಧಿಯಲ್ಲಿ ಕಂಟಿನ್ಯೂಯಿಟಿ ಇದೆಯೇ ಅಥವಾ ಆಗಾಗ್ಗೆ ಬದಲಾವಣೆಗಳಾಗುವುವೊ?

ಶ್ರೀ ಟಿ. ಸಿದ್ದಲಿಂಗಯ್ಯ:- ಯಾವಾಗಲೂ ಸಾರ್ವಜನಿಕ ಸೇವೆಯ ಹಿತದೃಷ್ಟಿಯಿಂದ ಬೇಕಾದಷ್ಟು ಚೇಂಜ್ ಮಾಡುತ್ತಾರೆ.

ಶ್ರೀ ಹೆಚ್.ಆರ್. ಅಬ್ದುಲ್ ಗಫಾರ್:- ಇಂಥ ಯೋಜನೆಗಳಿಗೆ ಕಂಟಿನ್ಯೂಯಿಟಿ ಇರುವುದು ಒಳ್ಳೆಯದಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಮಾನ್ಯ ಸದಸ್ಯರ ಅಭಿಪ್ರಾಯವನ್ನು ನಾನು ಒಪ್ಪುತ್ತೇನೆ.

ಶ್ರೀ ಹೆಚ್.ಆರ್. ಅಬ್ದುಲ್ ಗಫಾರ್:- ಇಂಥ ಯೋಜನೆಗಳ ಉಸ್ತುವಾರಿಗೆ ಒಂದು ಸರ್ಕಾರೇತರ ಸದಸ್ಯರ ಸಮಿತಿ ಇರುವುದು ಒಳ್ಳೆಯದಲ್ಲವೆ?

ಅಧ್ಯಕ್ಷರ:- ಅದು ಅಭಿಪ್ರಾಯದ ವಿಷಯ.

ಶ್ರೀ ಡಿ. ವೆಂಕಟರಾಮಯ್ಯ (ಸ್ಥಾನೀಯ ಪ್ರಾಧಿಕಾರಿ ಕ್ಷೇತ್ರ):- ಸರ್. ಎಂ.ವಿ. ರವರ ಇನ್ಸ್‌ಪಿರೇಶನ್ ನಿಂದ ಈ ಯೋಜನೆ ಆರಂಭವಾಯಿತು ಎಂದು ಹೇಳಿದಿರಿ. ಈ ಎರಡು ವರ್ಷಗಳಾದ ಮೇಲೆ ಯೋಜನೆ ಯಾವ ರೀತಿ ನಡೆಯುತ್ತಾ ಇದೆ ಎಂದು ಅವರು ತಿಳಿಸಿದ್ದಾರೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಸರ್.ಎಂ. ವಿಶ್ವೇಶ್ವರಯ್ಯನವರೇ ಸಮಿತಿಯ ಅಧ್ಯಕ್ಷರು ಎನ್ನುವುದನ್ನು ನಾನು ಈಗಾಗಲೇ ಸ್ಪಷ್ಟಪಡಿಸಿದ್ದೇನೆ. ಅದರ ನೇರ ಮೇಲ್ವಿಚಾರಣೆಯಲ್ಲಿ ಇವೆಲ್ಲವೂ ನಡೆಯುತ್ತಿವೆ. ಯೋಜನೆ ಸಾಧಿಸಿರುವ ಮುನ್ನಡೆ ಅವರಿಗೆ ಸಂಪೂರ್ಣವಾಗಿ ತಿಳಿದಿದೆ.

ಶ್ರೀ ಡಿ. ವೆಂಕಟರಾಮಯ್ಯ :- ಈ ಎರಡು ವರ್ಷಗಳಿಂದ ನಡೆದಿರುವ ವಿಷಯದಲ್ಲಿ ಯಾವುದಾದರೂ ಒಂದು ವರದಿ ಸಿದ್ಧವಾಗಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ವರದಿ ವರ್ಷೇ ವರ್ಷೇ ಬರುತ್ತಾ ಇದೆ. ಪಬ್ಲಿಷ್ ಮಾಡುತ್ತಾ ಇದ್ದೇವೆ.

ಶ್ರೀ ಆರ್.ಪಿ. ರೇವಣ್ಣ (ಸ್ಥಾನೀಯ ಪ್ರಾಧಿಕಾರಿ ಕ್ಷೇತ್ರ):- ಅಕ್ಕಪಕ್ಕದ ಡಿಸ್ಟ್ರಿಕ್ಟ್‌ಗಳಿಗೆ ಮುಂದುವರಿಸುತ್ತೇವೆ ಎಂದು ಹೇಳಿದಿರಿ. ಮಂಡ್ಯ ಆದಮೇಲೆ ಮೈಸೂರು ಡಿಸ್ಟ್ರಿಕ್ಟ್ ತೆಗೆದುಕೊಳ್ಳುವುದಕ್ಕಾಗುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಆಲೋಚನೆ ಮಾಡುತ್ತೇವೆ.

ಶ್ರೀ ಸಿ.ಜೆ. ದೇವನಾಥ್:- ಕೈಗಾರಿಕಾ ಇಲಾಖೆಯಲ್ಲಿ ಕೆಲಸ ಮಾಡಿದ ಅಧಿಕಾರಿಗಳು ಲಭ್ಯವಿದ್ದರೆ ಅಂಥವರನ್ನು ಈ ಜಾಗಗಳಿಗೆ ನೇಮಿಸುವುದು ಒಳ್ಳೆಯದಾಗುವುದಿಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಕೈಗಾರಿಕಾ ಇಲಾಖೆಯ ಕೆಲವರು ಅಧಿಕಾರಿಗಳೂ ಇದರ ಮೇಲ್ವಿಚಾರಣೆ ನೋಡುತ್ತಾರೆ. ಆದರೆ ಗ್ರಾಮೀಣ ಜನರೊಂದಿಗೆ ವ್ಯವಹರಿಸುವ ವಿಶೇಷ ಒಲವಿರುವಂಥ ಒಬ್ಬ ವಿಶೇಷ ಅಧಿಕಾರಿಯನ್ನು ಆರಿಸಿ ನೇಮಿಸಿದ್ದೇವೆ.

ಶ್ರೀ ಸಿ.ಜೆ. ದೇವನಾಥ್:- ಅದು ಸಮಾನಾಂತರ ಅಧಿಕಾರ ವ್ಯಾಪ್ತಿಯಾಗುವುದಿಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಇಲ್ಲ. ಎರಡಾಗುವುದಿಲ್ಲ. ಸಮಾನಾಂತರ ಅಧಿಕಾರವಲ್ಲ.

ಶ್ರೀ ಟಿ. ವೀರಣ್ಣ (ಸ್ಥಾನೀಯ ಪ್ರಾಧಿಕಾರಿ ಕ್ಷೇತ್ರ):- ಯೋಜನೆಯನ್ನು ಚಿತ್ರದುರ್ಗ ಜಿಲ್ಲೆಗೆ ಅನ್ವಯಿಸುವ ಯೋಚನೆ ಇದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯ:- ಹಾಸನ, ಚಿಕ್ಕಮಗಳೂರು ಜಿಲ್ಲೆಗಳಿಗೆ ಸಂಬಂಧಿಸಿದಂತೆ ಅದೇ ರೀತಿಯ ಇನ್ನೊಂದು ಪ್ರಶ್ನೆಗೆ ನಾನು ಈಗಾಗಲೇ ಉತ್ತರಿಸಿದ್ದೇನೆ. ಚಿತ್ರದುರ್ಗ ಪ್ರಶ್ನೆಯನ್ನು ಪರಿಗಣಿಸಲಾಗುವುದು.

ಶ್ರೀ ಟಿ.ಪಿ. ಬ್ರಹ್ಮಯ್ಯ (ವಿಧಾನ ಸಭಾ ಕ್ಷೇತ್ರ):- ಎರಡು ಜಿಲ್ಲೆಗಳಲ್ಲಿ 67 ಕೇಂದ್ರಗಳನ್ನು ಆರಂಭಿಸಿದೆ ಎಂದು ಹೇಳಿದಿರಿ. ಅವುಗಳಲ್ಲಿ ಖಾದಿ ಎಷ್ಟು ಕೇಂದ್ರದಲ್ಲಿ ತಯಾರಾಗುತ್ತದೆ ಎಂದು ಹೇಳುವುದಕ್ಕಾಗುತ್ತದೆಯೆ?

ಶ್ರೀ ಟಿ. ಸಿದ್ದಲಿಂಗಯ್ಯ:- ಖಾದಿಗೆ ಪ್ರೋತ್ಸಾಹ ನೀಡುವುದಕ್ಕೆ ಸರ್ಕಾರದವರು ಬೇರೆ ಒಂದು ಕಮಿಟಿ ಏರ್ಪಾಡು ಮಾಡಿದ್ದಾರೆ. ಅದಕ್ಕೆ ಪ್ರತ್ಯೇಕವಾಗಿ..... ಬಡ್ಜೆಟ್ನಲ್ಲಿ ಪ್ರೊವೈಡ್ ಮಾಡಿದ್ದಾರೆ.

ಶ್ರೀ **ರುಮಾಲೆ ಚೆನ್ನಬಸವಯ್ಯ (ನಾಮ ನಿರ್ದೇಶನ ಹೊಂದಿದವರು):-** ಯಾವುದಾದರೂ ಇಂತಹ ರಚನಾತ್ಮಕ ಕಾರ್ಯ ಜರುಗಿಸುವದಕ್ಕೆ ಮೊದಲು ಸಾಕಾದಷ್ಟು ಜನ ದಕ್ಷ ಕಾರ್ಯತರ್ಕರು ಸಿಕ್ಕಿದ ನಂತರ ಕಾರ್ಯ ಕೈಗೊಳ್ಳಬೇಕೆಂಬುದು ಸರ್ಕಾರದವರಿಗೆ ಗೊತ್ತೆ? ಅಥವಾ ಅಂತಹ ಕಾರ್ಯಕರ್ತರು ಇಲ್ಲದಿದ್ದರೆ ಅಂತಹವರನ್ನು ತರಪೇತು ಮಾಡಿಕೊಂಡು

ಕಾರ್ಯನಿರ್ವಹಣೆ ಮಾಡುವುದರಿಂದ ದೇಶಕ್ಕೆ ಅನುಕೂಲವಾಗುತ್ತದೆ. ಯೋಜನೆಯು ಸಹ ಫಲಪ್ರದವಾಗುತ್ತದೆ ಎಂಬುದು ಸರ್ಕಾರದವರ ಗಮನದಲ್ಲಿದೆಯೇ?''

*****

**ಗ್ರಾಮಾಂತರ ವಿದ್ಯುದೀಕರಣಕ್ಕೆ ಸಾಕಷ್ಟು ಹಣ ಒದಗಿಸದಿರುವ ಬಗ್ಗೆ ಬಜೆಟ್ ಮೇಲಿನ ಚರ್ಚೆ**

ಕೈಗಾರಿಕೆಗಳು, ನೀರಾವರಿ ಪಟ್ಟಣ ಸೌಲಭ್ಯ ಎಲ್ಲಕ್ಕೂ ವಿದ್ಯುಚ್ಛಕ್ತಿ ಅವಶ್ಯಕವಾದ್ದರಿಂದ ವಿದ್ಯುಚ್ಛಕ್ತಿ ಪೂರೈಕೆ ಬಗ್ಗೆ ಸದನದಲ್ಲಿ ವಿಷಯಗಳು ನಿರಂತರವಾಗಿ ಚರ್ಚೆಗೆ ಬರುತ್ತಿದ್ದವು. ಸೌಲಭ್ಯ ಶೀಘ್ರವಾಗಿ ಒದಗಿಸಲು ಆರ್ಥಿಕ ತೊಂದರೆಗಳಾಗುತ್ತಿದ್ದವು. ವಿದ್ಯುಚ್ಛಕ್ತಿ ಪೂರೈಕೆಯ ಸಾಧ್ಯಾಸಾಧ್ಯತೆಗಳು ಅನೇಕ ಸಂಗತಿಗಳನ್ನವಲಂಬಿಸಿರುತ್ತಿದ್ದವು. ನೀರಾವರಿಗಾಗಿ ಒದಗಿಸಿದ ಪಂಪ್‌ಸೆಟ್ ಸುಸ್ಥಿತಿಯಲ್ಲಿರಿಸುವುದೂ ರೈತರ ಅವಿದ್ಯೆ ಅಸಕ್ಷರತೆಗಳಿಂದಾಗಿ ಸರ್ಕಾರದ ಮೇಲೆ ಬಿದ್ದ ಹೊಣೆಯಾಗಿತ್ತು. ಇಂಥ ಹತ್ತು ಹಲವು ಸಮಸ್ಯೆಗಳಿಗೆ ಕೈಗಾರಿಕಾ ಸಚಿವರಾಗಿ ಸಿದ್ದಲಿಂಗಯ್ಯ ಉತ್ತರ ಕಂಡುಕೊಂಡ ಬಗೆಗಿನ ಚರ್ಚೆಯ ಭಾಗಗಳು ಹೀಗಿವೆ:

"ಶ್ರೀ ಯು.ಎಂ. ಮಾದಪ್ಪನವರು (ಚಾಮರಾಜನಗರ): ಅಧ್ಯಕ್ಷರೇ, ನನ್ನ ಕತ್ತರಿ ನಿರ್ಣಯ ಈ ರೀತಿ ಇದೆ, ಅದನ್ನು ಮಂಡಿಸುತ್ತೇನೆ.

"ಮೈಸೂರು ಜಿಲ್ಲೆಯಲ್ಲಿ ಗ್ರಾಮಾಂತರ ಪ್ರದೇಶಗಳಿಗೆ ವಿದ್ಯುಚ್ಛಕ್ತಿಯನ್ನೊದಗಿಸುವುದಕ್ಕೆ ಸಾಕಾದಷ್ಟು ಮೊಬಲಗನ್ನು ಒದಗಿಸಿಲ್ಲದಿರುವುದನ್ನು ಸರ್ಕಾರದವರ ಗಮನಕ್ಕೆ ತರುವುದಕ್ಕಾಗಿ XLI ವಿದ್ಯುಚ್ಛಕ್ತಿಯಿಂದ ಬರುವ ಹುಟ್ಟುವಳಿಗಳು - ಕೆಲಸ ನಡೆಯುವ ವೆಚ್ಚಗಳು ಎಂಬ ಬಾಬಿ ಕೋರಿರತಕ್ಕ 80,45,000 ರೂಪಾಯಿಗಳಲ್ಲಿ ಡಿಮ್ಯಾಂಡ್ ಮನವಿಯ ಸಂಬಂಧದ 100 ರೂಪಾಯಿಗಳನ್ನು ಕಡಿಮೆ ಮಾಡಬೇಕು".

ಸ್ವಾಮಿ, ನಮ್ಮ ಜಿಲ್ಲೆಯಲ್ಲಿ ಸುಮಾರು ಎರಡನೆಯ ಮಹಾಯುದ್ಧ ಪ್ರಾರಂಭವಾದ ಕಾಲದಿಂದಲೂ ಮತ್ತು ಇದಕ್ಕಿಂತಲೂ ಇನ್ನೂ ಮುಂಚಿತವಾಗಿ ಕೆಲ ಗ್ರಾಮದವರು ತಮ್ಮ ಗ್ರಾಮಗಳಿಗೆ ವಿದ್ಯುಚ್ಛಕ್ತಿ ಸರಬರಾಯಿಯನ್ನು ಮಾಡಿಕೊಡಬೇಕೆಂದು ಸರ್ಕಾರಕ್ಕೆ ಒಂದೇ ಸಮನಾಗಿ ಮನವಿಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಆದರೆ ಹಿಂದಿದ್ದ ಸರ್ಕಾರದ ಮಾತು ಹೋಗಲಿ, ಇಂದು ಪ್ರಜೆಗಳ ಪ್ರತಿನಿಧಿಗಳೆಂದು ಹೇಳಿಕೊಳ್ಳುತ್ತಿರುವ ಈ ಸರ್ಕಾರ ಬಂದ ಮೇಲಾದರೂ ಅಲ್ಲಿಗೆ ಆ ವಿದ್ಯುಚ್ಛಕ್ತಿಯನ್ನು ಇನ್ನೂ ಒದಗಿಸದಿರುವುದು ಬಹಳ ಶೋಚನೀಯವಾದ ವಿಚಾರ. ಆ ಮೇಲೆ ನಮ್ಮ ದೇಶಕ್ಕೆ ಸ್ವರಾಜ್ಯ ಬಂದ ತರುವಾಯದಲ್ಲಿ ಪ್ರಜಾನುರಾಗಿಗಳಾಗಿರತಕ್ಕಂಥ ಮಂತ್ರಿಗಳು ಹೇಳಿದ್ದ ಮಾತುಗಳನ್ನು [illegible] ವರೆಲ್ಲರಿಗೂ ಒಂದು ಆಶಾದಾಯಕ ಮನೋಭಾವ ಉಂಟಾಗಿ, ಪ್ರತಿಯೊಬ್ಬ ಗ್ರಾಮಸ್ಥರು [illegible] ದ್ಯುಚ್ಛಕ್ತಿ ಅವರವರ ಗ್ರಾಮಕ್ಕೆ ಬಂದೇ ತೀರುತ್ತದೆಂದು ನಿರೀಕ್ಷೆ ಮಾಡಿಕೊಂಡಿದ್ದರು. [illegible] ಗ್ರಾಮಕ್ಕೆ [illegible] ವಿದ್ಯುಚ್ಛಕ್ತಿಯನ್ನು ಒದಗಿಸದೆ ಇರುವುದರಿಂದ [illegible] ಇನ್ನೂ ತೀರಾ ನಿರಾಶೆಯುಂಟಾಗಿದೆ. ಅಲ್ಲದೆ ಮಂತ್ರಿವರ್ಯರಾಗಿರತಕ್ಕವರುಗ[illegible] ಕಾರಕ್ಕೆ ಬರುವ ಪೂರ್ವಭಾವಿಯಾಗಿ ಜನರಿಗೂ, ಗ್ರಾಮಸ್ಥರುಗಳಿಗೂ ಏನೇನು [illegible] ಗಳನ್ನು ಏರ್ಪಡಿಸುತ್ತೇವೆಂದು ಅವರ ಪ್ರವಾಸ ಕಾಲಗಳಲ್ಲಿ

ತಿಳಿಸಿದರೋ ಅದನ್ನು ಅವರು ಈ ಅಧಿಕಾರ ಸ್ಥಾನಕ್ಕೆ ಬಂದಕೂಡಲೇ ಮರೆತುಬಿಟ್ಟಿರುವ ಹಾಗೆ ನನಗೆ ಕಾಣುತ್ತಿದೆ. ಆದಕಾರಣ ನಾನೀಗ ಮಾನ್ಯ ಮಂತ್ರಿಗಳವರ ಗಮನವನ್ನು ಆ ಗ್ರಾಮಗಳ ಕಡೆಗೆ ಸೆಳೆಯಲು ನಿಂತಿದ್ದೇನೆ. ಅಂತೂ ಒಟ್ಟಿನಲ್ಲಿ ಇಷ್ಟು ಹೇಳಬಹುದು: ಈ ಹಿಂದೆ ಇದ್ದ ಮಂತ್ರಿಮಂಡಲದವರು ತಮ್ಮ ಅಧಿಕಾರವನ್ನು ಬಿಟ್ಟುಕೊಟ್ಟು ಹೋಗತಕ್ಕ ಕಡೆಯ ಘಳಿಗೆಯಲ್ಲಿ ಈ ವಿದ್ಯುಚ್ಛಕ್ತಿ ಸರಬರಾಯಿಯನ್ನು ಈ ಗ್ರಾಮಾಂತರಗಳಿಗೂ ಕೊಡಬಹುದೆಂದು ಒಂದು ಸೂಚನೆಯನ್ನು ಮಾಡಿ ಹೋಗಿರಬಹುದೆಂದು ನಾನು ನಂಬಿದ್ದೇನೆ. ಗ್ರಾಮದಲ್ಲಿರತಕ್ಕ ಪಂಚಾಯಿತಿಯವರೂ ಮತ್ತು ಗ್ರಾಮದ ಜನಗಳ ಮುಖಂಡರಾಗಿರತಕ್ಕಂಥವರೂ ಈ ವಿಷಯವನ್ನು ಪದೇ ಪದೇ ಸರ್ಕಾರದವರ ಗಮನಕ್ಕೆ ತರುತ್ತಲೇ ಇದ್ದಾರೆ.

ಆದಾಗ್ಯೂ ಈಗಿನ ಸರ್ಕಾರದ ಈ ಬಡ್ಜೆಟ್ಟಿನಲ್ಲಿ ಗ್ರಾಮಗಳಿಗೆ ವಿದ್ಯುಚ್ಛಕ್ತಿಯನ್ನು ಸರಬರಾಯಿ ಮಾಡುವ ವಿಷಯದಲ್ಲಿ ಹಣವನ್ನು ಒದಗಿಸಿರುವಂತೆ ನನಗೆ ಕಾಣಲಿಲ್ಲ. ಕೆಲವು ಗ್ರಾಮಗಳಿಗೆ ನಮ್ಮ ಈ ಬಡ್ಜೆಟ್ಟಿನಲ್ಲಿ ಈ ವಿದ್ಯುಚ್ಛಕ್ತಿಯನ್ನು ಒದಗಿಸಲು ಈ ಬಡ್ಜೆಟ್ಟಿನಲ್ಲಿ ಈ ದಿವಸ ಸೂಚನೆ ಕೊಟ್ಟಿದೆ. ಆದರೆ ನನ್ನ ಮನೋಭಾವನೆ ಕೆಲವೇ ಗ್ರಾಮಗಳ ಕಡೆ ಇದೆಯೆಂದು ಯಾರೂ ಭಾವಿಸಬಾರದು. ನಮ್ಮ ಮೈಸೂರು ಜಿಲ್ಲೆ ಮತ್ತು ಇತರ ಜಿಲ್ಲೆಗಳಲ್ಲಿ ಇರುವ ಜನರ ವಿಷಯದಲ್ಲೂ ನಮ್ಮ ಸಹಾನುಭೂತಿಯಿದೆ. ನಮ್ಮ ಜಿಲ್ಲೆಯ ಒಂದು ದೌರ್ಭಾಗ್ಯವನ್ನು ಈ ದಿವಸ ತಮ್ಮ ಮುಂದಿಡಲು ಇಲ್ಲಿ ನಿಂತಿದ್ದೇವೆ. ನಂಜನಗೂಡು ಚಾಮರಾಜನಗರ, ಗುಂಡ್ಲುಪೇಟೆ, ಯಳಂದೂರು ಈ ತಾಲ್ಲೂಕುಗಳಲ್ಲಿ ವಿದ್ಯುಚ್ಛಕ್ತಿಯ ಸಹಾಯವಿಲ್ಲದೆ ಮಳೆ ಬೆಳೆಗಳಿಲ್ಲದೆ ಕ್ಷಾಮ ತಲೆದೋರಿ ಬಹಳ ಕಷ್ಟವಾಗಿದೆ. ಇವುಗಳಿಗೆ ಒಂದು ಸ್ಥಾನಮಾನ ಇಂಥಾ ಸಂದರ್ಭದಲ್ಲಿ ಒದಗಿರುವುದು ಬಹಳ ಅನಾನುಕೂಲವಾಗಿದೆ. ಸುಮಾರು ಹತ್ತು ವರ್ಷಗಳಿಂದ ಈ ಅಭಾವವನ್ನು ಸರ್ಕಾರದವರಲ್ಲಿ ತಿಳಿಸಲಾಯಿತು. ಗ್ರಾಮಾಂತರಗಳಲ್ಲಿ ವಾಸಮಾಡುವವರೆಲ್ಲರೂ ವ್ಯವಸಾಯಗಾರರೇ ಆಗಿರುವಾಗ ಒಂದು ಕ್ರಾಂತಿಕಾರಕವಾದ ಮತ್ತು ಪ್ರಗತಿಶೀಲವಾದ ಬದಲಾವಣೆಯು ವ್ಯವಸಾಯ ಕ್ಷೇತ್ರದಲ್ಲಿ ಆಗಬೇಕಾದರೆ ವಿದ್ಯುಚ್ಛಕ್ತಿ ಸರಬರಾಯಿ ಪ್ರತಿಯೊಂದು ಗ್ರಾಮಕ್ಕೂ ಅತ್ಯಗತ್ಯ. ಎಂಬುದಾಗಿ ಪ್ರತಿಯೊಬ್ಬ ಮಂತ್ರಿಗಳು ಹಿಂದೆ ರಾಜಕೀಯ ಕ್ಷೇತ್ರದಲ್ಲಿ ಕೆಲಸ ಮಾಡುವ ಭರದಲ್ಲಿ ಹೇಳುತ್ತಿದ್ದರು ಎಂಬುದು ನನಗೆ ಈಗ ನೆನಪಿಗೆ ಬರುತ್ತಿದೆ. ಈ ದಿವಸ ಅವರು ಸರ್ಕಾರದಲ್ಲಿ ಒಂದು ಸ್ಥಾನಮಾನವನ್ನು ಆಕ್ರಮಿಸಿದ ಮೇಲೆ ಗ್ರಾಮಾಂತರಗಳ ವಿಚಾರವನ್ನು ಜ್ಞಾಪಕ ಮಾಡದಿದ್ದರೆ ವಿಧಿಯಿಲ್ಲ. ನಮ್ಮ ಕಡೆ ಗ್ರಾಮಗಳಲ್ಲಿ ಕಪಿಲೆ ಭಾವಿಗಳಿಂದ ನೀರನ್ನೆತ್ತಿ ವ್ಯವಸಾಯಕ್ಕೆ ಉಪಯೋಗಿಸಬೇಕಾಗಿದೆ. ಅಂಥಾ ಕಡೆಗೆ ವಿದ್ಯುಚ್ಛಕ್ತಿಯನ್ನೊದಗಿಸಿದರೆ ನೀರಾವರಿ ಕೆಲಸಗಳನ್ನು ಮಾಡಲು ಬಹಳ ಅನುಕೂಲವಾಗುತ್ತದೆ. ಮತ್ತು ಆಹಾರದ ಅಭಾವವನ್ನು ನೀಗಲು ಸಾಧ್ಯವಾಗುತ್ತದೆ. ಇಂಥಾ ಒಂದು ಕಾರ್ಯಕ್ರಮವನ್ನು ಸರ್ಕಾರದವರು ಕೈಗೊಳ್ಳದಿರುವುದು ಶೋಚನೀಯ. ವಿದ್ಯುಚ್ಛಕ್ತಿ ಸರಬರಾಯಿ ವಿಷಯದಲ್ಲಿ ನಮ್ಮ ಡಿಸ್ಟ್ರಿಕ್ಟಿನಲ್ಲಿ ಅಥವಾ ಬೇರೆ ಡಿಸ್ಟ್ರಿಕ್ಟುಗಳಲ್ಲಿ ಲೋಪದೋಷಗಳು ಇವೆಯೋ ಏನೋ ಗೊತ್ತಿಲ್ಲ. ಒಟ್ಟಿನಲ್ಲಿ ಗ್ರಾಮಾಂತರಗಳಿಗೆ ಸಾಕಾದಷ್ಟು ವಿದ್ಯುಚ್ಛಕ್ತಿ ಸರಬರಾಯಿ ಮಾಡದಿರುವುದು ಒಂದು ಲೋಪ. ಪ್ರತಿಯೊಂದು ನಗರಕ್ಕೂ ಸರಬರಾಯಿ ಮಾಡುತ್ತಿರುವುದೇನೋ ಸರಿಯೆ. ಆದರೆ ಗ್ರಾಮಾಂತರಗಳ ಮೂಲಕ ನಗರಗಳಿಗೆ ಸರಬರಾಜು ಮಾಡುವ ಪದ್ಧತಿ ಜಾರಿಯಲ್ಲಿಲ್ಲ. ನಗರಗಳಿಗೆ ಕೊಡುವಾಗ ಲೈನುಗಳು

ಗ್ರಾಮಾಂತರಗಳ ಮೂಲಕ ಹಾದು ಹೋಗುವುದಾದರೆ ಆಗ ಸರ್ಕಾರಕ್ಕೂ ವೆಚ್ಚ ಸಹಾ ಉಳಿಯುತ್ತದೆ. ಆದ್ದರಿಂದ ಗ್ರಾಮಾಂತರ ಪ್ರದೇಶಗಳ ಜನರಿಗೆ ಬೆಳಕು ಮತ್ತು ವ್ಯವಸಾಯಕ್ಕೆ ಸಹಾಯವಾಗುತ್ತದೆ. ಈ ಒಂದು ಮಾರ್ಗವನ್ನು ಸರ್ಕಾರದವರು ಯೋಚನೆ ಮಾಡಿಲ್ಲ. ಗ್ರಾಮಾಂತರ ಪ್ರದೇಶಗಳಿಗೆ ಅನುಕೂಲವಾಗುವ ಈ ಪದ್ಧತಿಯನ್ನು ಅನುಸರಿಸಿಲ್ಲ. ಆದ್ದರಿಂದ ಈ ವಿಷಯವನ್ನು ಗಮನಕ್ಕೆ ತಂದು ಗ್ರಾಮಾಂತರಗಳ ಮೇಲೆ ಲೈನು ಹೋಗುವಂತೆ ಮಾಡಿದರೆ ಅಲ್ಲಿನ ಜನರಿಗೂ ಮತ್ತು ಸರ್ಕಾರಕ್ಕೂ ಅನುಕೂಲ. ಅಲ್ಲದೆ ಹಿಂದೆ ಮಹಾಯುದ್ಧಕ್ಕೆ ಮುಂಚೆ ಮಾಡಿಕೊಂಡ ಗ್ರಾಮಗಳಿಗೂ ಮತ್ತು ಅಲ್ಲಿಂದೀಚೆಗೆ ಮನವಿ ಬಂದಿರುವ ಇತರ ಗ್ರಾಮಗಳಿಗೂ ವಿದ್ಯುಚ್ಛಕ್ತಿ ಸರಬರಾಯಿ ಮಾಡುವ ವಿಷಯದಲ್ಲಿ ಒಂದು ಸರಿಯಾದ ಮನೋಭಾವನೆಯನ್ನು ತೋರಿಸಬೇಕು ಎಂದು ಪ್ರಾರ್ಥನೆ ಮಾಡುತ್ತೇನೆ.

{ಖೋತಾ ನಿರ್ಣಯ ಮಂಡಿತವಾಗಿದೆ}

ಸಭಾಧ್ಯಕ್ಷರು:- "ಬೇಡಿಕೆಯನ್ನು ನೂರು ರೂಪಾಯಿಗಳಿಂದ ಕಡಿಮೆ ಮಾಡಬೇಕು.

ಶ್ರೀ ಟಿ. ಸಿದ್ದಲಿಂಗಯ್ಯ (ಕೈಗಾರಿಕಾ [ಶಾಲೆಯ] ಮಂತ್ರಿಗಳು).- ಶ್ರೀ ಮಾದಪ್ಪನವರು ಮೈಸೂರು ಜಿಲ್ಲೆ ಒಂದನ್ನು ಮಾತ್ರ ಅವರ ಮನಸ್ಸಿನಲ್ಲಿ ತುಂಬಾ ತುಂಬಿಕೊಂಡಿದ್ದಾರೆಂದು ಕಾಣುತ್ತದೆ. ಆದರೆ ಸರ್ಕಾರದ...

ಶ್ರೀ **ಕಡಿದಾಳ್** ಮಂಜಪ್ಪನರವರು.- ಸ್ವಾಭಾವಿಕ.

ಶ್ರೀ ಟಿ. ಸಿದ್ದಲಿಂಗಯ್ಯನವರು.- ಅದನ್ನು ಮೆಚ್ಚಬೇಕು. ಸರ್ಕಾರದ ದೃಷ್ಟಿ ಸಂಸ್ಥಾನದ ಮೇಲೆ ಇರಬೇಕು ಎಂಬುದನ್ನು ಅವರು ಗಮನದಲ್ಲಿಡಬೇಕೆಂದು ಬೇಡಿಕೊಳ್ಳುತ್ತೇನೆ. ಈಗಿರುವ ಹಾಗೆ ಮೈಸೂರು ಜಿಲ್ಲೆಯೊಂದರಲ್ಲೇ 60 ಕಡೆ ರೂರಲ್ ಎಲೆಕ್ಟ್ರಿಫಿಕೇಷನ್ ಆಗಿದೆ ಮತ್ತು ಗುಂಡ್ಲುಪೇಟೆ, ಯಳಂದೂರು ಇವನ್ನೂ ಈಚೆಗೆ ಸೇರಿಸಿದೆ. ಇನ್ನೂ ಕೆಲವು ಅಂದಾಜುಗಳು ತಯಾರಾಗಿವೆ. ಹೆಗ್ಗಡದೇವನಕೋಟೆ, ಸಿರಿಗೆರೆ, ಮಿರ್ಲೆ, ಜಯಪುರ, ಎಲೇಕೆರೆ ಈ ಸ್ಥಳಗಳಿಗೆ ಈ ವರ್ಷದ ಬಡ್ಜೆಟ್ಟಿನಲ್ಲಿ ಹಣ ಒದಗಿಸಿದೆ. ಇವೆಲ್ಲಾ ಮೈಸೂರು ತಾಲ್ಲೂಕಿಗೆ ಸೇರಿವೆ ಮತ್ತು ಇನ್ನೂ 60 ಗ್ರಾಮಗಳು ಮೈಸೂರು ಡಿಸ್ಟ್ರಿಕ್ಟಿಗೆ ಸೇರಿವೆ.

ಶ್ರೀ ಎಂ. ಮಾದಪ್ಪನರವರು.- ಎಷ್ಟು ದಿವಸದಿಂದ ಆಗಿರುವುದು? 1947 ರಿಂದ ಅಥವಾ 1948ರಿಂದ ಆಗಿದೆಯೇ ಎಂಬುದನ್ನು ತಿಳಿಸಬೇಕು.

ಶ್ರೀ ಟಿ. ಸಿದ್ದಲಿಂಗಯ್ಯನವರು.- ಡಿಸ್ಟ್ರಿಕ್ಟ್ ಡಿಸ್ಟ್ರಿಕ್ಟಿ ಗೆ ಹೋಲಿಕೆ ಮಾಡಿದರೆ ಮೈಸೂರು ಡಿಸ್ಟ್ರಿಕ್ಟಿಗೆ ಇತರ ಡಿಸ್ಟ್ರಿಕ್ಟುಗಳಿಗಿಂತಲೂ ಹೆಚ್ಚಾಗಿ ಕೊಟ್ಟಿದೆಯೆಂದು ಪ್ರಶ್ನೋತ್ತರ ಕಾಲದಲ್ಲಿ ಹೇಳಿದೆ.

ಶ್ರೀ ಯು.ಎಂ. ಮಾದಪ್ಪನವರು:- ಬುಲೆಟಿನ್‌ನಲ್ಲಿ ಮೈಸೂರು ಡಿಸ್ಟ್ರಿಕ್ಟಿಗೆ ಸರಿಯಾಗಿ ಸರಬರಾಯಾಗಿಲ್ಲ, ಎಲ್ಲಾ ಜಿಲ್ಲೆಗಳಿಗಿಂತ ಮೈಸೂರು ಜಿಲ್ಲೆ ದೊಡ್ಡದು ಎಂದು ಹೇಳಿದೆ.

ಶ್ರೀ ಟಿ. ಸಿದ್ದಲಿಂಗಯ್ಯ :- ಈ ಎಲ್ಲಾ ವಿಷಯಗಳನ್ನು ಗಮನಿಸಿ ಸಂಸ್ಥಾನಕ್ಕೆ ಏಕ ರೀತಿಯಾಗಿ ಯಾವ ರೀತಿ ವಿದ್ಯುಚ್ಛಕ್ತಿ ಕೊಡಬೇಕೋ ಅದನ್ನು ಸರ್ಕಾರದವರು ಏರ್ಪಾಡು ಮಾಡುತ್ತಿದ್ದಾರೆ. ಈಗಾಗಲೇ ಹೇಳಿದ ಪ್ರಕಾರ ಬರೀ ಮೈಸೂರು ಡಿಸ್ಟ್ರಿಕ್ಟ್ ಒಂದನ್ನೇ

ದೃಷ್ಟಿಯಲ್ಲಿಡಬಾರದು. ಅಲ್ಲಿಂದ ಚುನಾಯಿತರಾಗಿ ಬಂದಿರುವ ಸದಸ್ಯರು ಆ ದೃಷ್ಟಿಯನ್ನು ಇಟ್ಟುಕೊಳ್ಳಬಹುದು. ಆದರೆ ಈ ಸಂದರ್ಭದಲ್ಲಿ ಹೇಳುವಾಗ ಜವಾಬ್ದಾರಿಯುತವಾಗಿ, ನಿಷ್ಪಕ್ಷಪಾತವಾಗಿ ನಡೆದುಕೊಳ್ಳಬೇಕೆಂಬುದನ್ನು ಅರಿಕೆ ಮಾಡಿಕೊಳ್ಳುತ್ತೇನೆ. ಆಮೇಲೆ ಗ್ರಾಮಾಂತರಗಳಿಗೆ ಯಾವ ರೀತಿ ಸರ್ವೀಸ್ ಕೊಡುತ್ತೇವೆ ಎಂಬ ವಿಚಾರದಲ್ಲಿ ಹಿಂದೆ ಏನು ಹೇಳುತ್ತಿದ್ದೆವೋ ಈಗಲೂ ಅದನ್ನೇ ಮಾಡಬೇಕೆಂಬ ಉತ್ಸಾಹವನ್ನು ತುಂಬಿಕೊಂಡಿದ್ದೇವೆ. ಆದರೆ ಬಡ್ಜೆಟ್ಟುಗಳ ವಿಚಾರದಲ್ಲಿ ಅಸೆಂಬ್ಲಿಯವರು ಯಾವ ರೀತಿ ಗ್ರಾಂಟು ಕೊಡುತ್ತಾರೋ ಅದರಂತೆ ನಾವುಗಳು ನಡೆದುಕೊಳ್ಳಲು ಸದಾ ಸಿದ್ಧರಾಗಿದ್ದೇವೆ. ಯಾರೂ ಈ ಇಲಾಖೆಯ ಮೇಲೆ ಆಕ್ಷೇಪಣೆ ಮಾಡಿಲ್ಲ. ಇದನ್ನು ಬಹಳ ಸಂತೋಷವಾಗಿ ಸ್ವಾಗತಿಸುತ್ತೇನೆ. ನಮ್ಮ ಸರ್ವೀಸ್ ತಾವೆಲ್ಲ ಮೆಚ್ಚಿಕೊಂಡಿದ್ದೀರಿ. ತಮಗೆ ಪ್ರೀತಿ ಇದೆ. .....

ಜನಾಬ್ ಜಿ. ಮುಹಮದ್ ಇಮಾಮ್ :- ಮೆಚ್ಚಿಕೊಂಡಿದ್ದೇವೆಂದು ಹೇಳಲಿಲ್ಲ. ಆಕ್ಷೇಪಣೆ ಮಾಡದೇ ಇದ್ದರೆ ಮೆಚ್ಚಿಕೊಂಡೆವು ಎಂದು ಅರ್ಥವಲ್ಲ.

ಶ್ರೀ ಟಿ. ಸಿದ್ದಲಿಂಗಯ್ಯ :- ಜನಾಬ್ ಇಮಾಮ್ ರವರು ಹೇಳಿದಂತೆ ಯಾರೂ ಮೆಚ್ಚದೇ ಇದ್ದರೂ ಆಕ್ಷೇಪಣೆ ಮಾಡದಿದ್ದರೆ ಮೆಚ್ಚಿಕೊಂಡಹಾಗೆಯೇ. ವಿದ್ಯುಚ್ಛಕ್ತಿ ಇಲಾಖೆಯಲ್ಲಿ ಕಾರ್ಯಗಳು ಬಹಳ ತ್ವರಿತವಾಗಿ ನಡೆಯುತ್ತವೆ ಎಂಬುದು ಗೊತ್ತೇ ಇದೆ. ಯಾವುದಾದರೂ ಒಂದು ರಿಕ್ವಿಜಿಷನ್ ಬಂದ ಕೂಡಲೇ ಅಂದಾಜು ಮಾಡಿ ತರಿಸುತ್ತಾರೆ. ಇದರಲ್ಲಿ ಏನು ಸ್ವಲ್ಪ ಅಸಾನುಕೂಲ ಪ್ರತಿಬಂಧಕ ಬರುತ್ತದೆ ಎಂಬುದನ್ನು ಗಮನಕ್ಕೆ ತರುತ್ತೇನೆ. ಲೈನು ಬಹಳ ಹತ್ತಿರ ಒಂದು ಫರ್ಲಾಂಗಿನಲ್ಲಿಯೇ, ನಮ್ಮ ಊರಿಗೆ ವಿದ್ಯುಚ್ಛಕ್ತಿ ಬರುತ್ತದೆಂದು ಕೆಲವರು ತಿಳಿದುಕೊಂಡಿದ್ದಾರೆ. ಆದರೆ ಆ ಲೈನಿನಲ್ಲಿ ಇಷ್ಟು ಲೋಡು ಇರಬೇಕು ಎಂದು ಗೊತ್ತಾಗಿರುತ್ತದೆ. ಅದಕ್ಕಿಂತ ಹೆಚ್ಚು ಪವರ್ ಉಪಯೋಗಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಅದಕ್ಕೆ ಟ್ರಾನ್ಸ್‌ಫಾರ್ಮರ್ ಸ್ಟೆಪ್ ಡೌನ್ ಸ್ಟೇಷನ್, ಲೈನ್‌ಮನ್‌ಗಳಿಗೆ ಇವೆಲ್ಲ ಬೇಕಾಗುತ್ತವೆ. ಅವನ್ನೆಲ್ಲ ಲೆಕ್ಕ ಹಾಕಿದರೆ ಲಕ್ಷಾಂತರ ರೂಪಾಯಿಗಳು ಬೇಕಾಗುತ್ತವೆ.

ಎರಡನೇಯದಾಗಿ ಈ ಸಾಮಾನುಗಳು ಸಿಕ್ಕುವುದು ಬಹಳ ಕಷ್ಟ. ಅವು ಸಿಕ್ಕಿದಹಾಗೆ ಹೆಚ್ಚು ಕೆಲಸ ಆಗುತ್ತದೆ. ಹೋದವರ್ಷ ಅನೇಕ ಕಡೆ ಮಂಜೂರಾಗಿತ್ತು. ಹಿಂದಿನ ಮಂತ್ರಿಗಳು ಮಾಡಿದರು. ಅವು ಈಗ ಅರ್ಧ ಮುಗಿದಿವೆ. ಅವನ್ನು ಪೂರೈಸುವುದಕ್ಕಾಗಿ ತ್ವರಿತವಾಗಿ ಕೆಲಸ ಆಗುತ್ತದೆ.

ಶ್ರೀಮಾನ್ ಮಾದಪ್ಪನವರು ಹೇಳುವಂತೆ, ನಿರಾಶೆ ಉಂಟಾಗಿದೆ ಎಂದು ಹೇಳುವುದು ಕಷ್ಟ. ವಾಸ್ತವವಾಗಿ ಎಲ್ಲರಿಗೂ ಆಶಾದಾಯಕವಾಗಿದೆ, ಇವತ್ತಲ್ಲ ನಾಳೆ ಎಲೆಕ್ಟ್ರಿಕ್ ಪವರ್, ಎಲೆಕ್ಟ್ರಿಕ್ ದೀಪ ಬಂದೇ ಬರುತ್ತದೆ ಎಂದು ತಿಳಿದುಕೊಂಡಿದ್ದಾರೆ. ನಿರಾಶೆ ಪಡಬೇಕಾಗಿಲ್ಲ. ಮುಂದೆ ಎಲೆಕ್ಟ್ರಿಕಲ್ ಪವರ್ ಬೇಕಾದಷ್ಟು ಉತ್ಪತ್ತಿ ಆಗುತ್ತದೆ. [illegible]ತಕ್ಕ ಕಾಲದಲ್ಲಿ [illegible] ಕೊಡಿಸಲಾಗುತ್ತದೆ. ನಮಗಿರತಕ್ಕ ಒಂದು ಕಷ್ಟವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಅದಕ್ಕೆ ಸಹಾನುಭೂತಿ ತೋರಿಸಬೇಕು. ಕಷ್ಟವೇನೆಂದರೆ ನಮ್ಮ ಬಡ್ಜೆಟ್ಟು. ಈ ಇಲಾಖೆಯ ಕೆಲಸ ಕಾರ್ಯಗಳನ್ನು ತ್ವರೆಯಿಂದ ನಡೆಸುವುದಕ್ಕೆ ಇವತ್ತು ಬಡ್ಜೆಟ್ ಪರ್ಮಿಟ್ ಮಾಡಿರುವ ಪ್ರಕಾರ-ನಮಗೆ

ಈ ಬಡ್ಜೆಟ್ಟಿನಲ್ಲಿ ಏನು ತಾವು ಒಪ್ಪಿಗೆ ಕೊಟ್ಟಿದ್ದೀರೋ ಆ ಜವಾಬ್ದಾರಿ ತಮ್ಮದು ನಾವು ಕೆಲಸ ಮಾಡಿರುವ ಪ್ರಕಾರ ಗ್ಯಾರಂಟಿ ಹೇಳುತ್ತೇವೆ. ಈಗಲೂ ಇನ್ನೂ ಹೆಚ್ಚು ಹಣವನ್ನು ಬಡ್ಜೆಟ್ಟಿನಲ್ಲಿ ಪ್ರೊವೈಡ್ ಮಾಡಿ. ಈಗ 30-50 ಲಕ್ಷ ರೂಪಾಯಿಗಳನ್ನು ಮಾತ್ರ ಗ್ರಾಮಾಂತರ ಪ್ರದೇಶಗಳಿಗೆ ಪವರ್ ಸಪ್ಲೈ ಮಾಡುವುದಕ್ಕೆ ಪ್ರೊವೈಡ್ ಮಾಡಿದೆ. ಹೋದ ವರ್ಷ ಮಂಜೂರಾಗಿರತಕ್ಕ, ಅರ್ಧ ನಡೆದಿರತಕ್ಕ ಕೆಲಸಗಳನ್ನು ಈ ವರ್ಷ ಪೂರೈಸುವುದಕ್ಕೆ ಇನ್ನೂ 62 ಲಕ್ಷ 70 ಸಾವಿರದ 200 ಇನ್ನೂರು ರೂಪಾಯಿಗಳು ಬೇಕು.

ಶ್ರೀ ಎ ಭೀಮಪ್ಪನಾಯಕರು (ಮೊಳಕಾಲ್ಮೂರು) :- ಹೊಸದಾಗಿ ಮಂಜೂರು ಮಾಡಿದ ಹಣ ಏನಾಯಿತು? ಹಳೆಯ ಕೆಲಸಗಳಿಗೆ ಏನು ಹಾಕಿದ್ದೀರಿ. ನಮ್ಮಲ್ಲಿ ಆಶೆ ಹುಟ್ಟುವ ಹಾಗೆ ಮಾಡಿದ್ದೀರಿ ಅಷ್ಟೆ.

ಶ್ರೀ ಟಿ. ಸಿದ್ದಲಿಂಗಯ್ಯನವರು :- ಈಗ ಜನರಲ್ಲಿ ನಿರಾಶೆ ಹುಟ್ಟಿಸಬಾರದು. ಎಲ್ಲರಿಗೂ ಆಶೆ ಹುಟ್ಟುವಂತೆ ಮಾಡಿದ್ದೇವೆ. ಎಲ್ಲರಿಗೂ ಮಂಜೂರು ಮಾಡಿದ್ದೇವೆ. ಮಂಜೂರು ಮಾಡಿದ್ದನ್ನು ಎಕ್ಸಿಕ್ಯೂಟ್ ಮಾಡುವುದಕ್ಕೆ ಏನು ಬೇಕೋ ಅದು ಮಾತ್ರ ಇಲ್ಲ. ಇದು ಅಲ್ಲದೆ ಅಂದಾಜು ತಯಾರಾಗಿ ಎಕ್ಸಿಕ್ಯೂಟ್ ಮಾಡುವುದಕ್ಕೆ ಸಿದ್ದವಾಗಿರುವ ಕೆಲಸಕ್ಕೆ 42 ಲಕ್ಷದ 20 ಸಾವಿರ ರೂಪಾಯಿಗಳು ಬೇಕು. ಸ್ಯಾಂಕ್ಷನ್ ಆಗಿದೆ ಎಂದರೆ ದುಡ್ಡೂ ಕೂಡ ಇರುತ್ತದೆ ಎಂದು ಅನೇಕರು ಅಭಿಪ್ರಾಯ ಪಡುತ್ತಾರೆ.

ಜನಾಬ್ ಮಹಮದ್ ಇಮಾಂ ರವರು :- ದುಡ್ಡು ಇಲ್ಲದೆ ಸ್ಯಾಂಕ್ಷನ್ ಹೇಗೆ ಮಾಡಿದಿರಿ?

ಶ್ರೀ ಟಿ. ಸಿದ್ದಲಿಂಗಯ್ಯ :- ಎಸ್ಟಿಮೇಟು ತಯಾರು ಮಾಡಿಕೊಳ್ಳುತ್ತೇವೆ. ಗೌರ್ನಮೆಂಟು ಅಡ್ಮಿನಿಸ್ಟ್ರೇಟಿವ್ ಸ್ಯಾಂಕ್ಷನ್ ಎಂದು ಹೇಳಿ ಜನಾಬ್ ಇಮಾಂ ರವರ ಮಂತ್ರಿತ್ವದ ಕಾಲದಲ್ಲೂ ಇತ್ತು, ಆ ರೀತಿ ಅಡ್ಮಿನಿಸ್ಟ್ರೇಟಿವ್ ಸಾಂಕ್ಷನ್ ಮಾಡುತ್ತಾರೆ. ಆಮೇಲೆ ಅವೇಲಿಬಿಲಿಟಿ ಆಫ್ ಫಂಡ್ಸ್ ನೋಡಿಕೊಂಡು ಜಾರಿಗೆ ತರುತ್ತಾರೆ. ಆದ್ದರಿಂದ ಯಾರೂ ಕೂಡ ನಿರಾಶೆಯಾಗಬಾರದು. ಈಗ ಒಟ್ಟಿಗೆ ಮಂಜೂರಾಗಿ ಪೂರೈಸಬೇಕಾದ ಕೆಲಸಗಳು ಮತ್ತು ಪ್ರಾರಂಭವಾಗಿ ಅರ್ಧವಾಗಿರುವುದನ್ನು ಪೂರೈಸಬೇಕಾಗಿರುವ ಕೆಲಸಗಳಿಗೆ 1 ಕೋಟಿ [illegible] ಲಕ್ಷ 46 ಸಾವಿರದ 200 ರೂಪಾಯಿಗಳು ಬೇಕು. ಇದೂ ಅಲ್ಲದೆ ಇರಿಗೇಷನ್ ಪಂಪ್ ಹಾಕುವುದಕ್ಕೆ 20 ಲಕ್ಷ ರೂಪಾಯಿಗಳು ಮಾತ್ರ ನೀವು ಪ್ರೋವೈಡ್‌ಮಾಡಿದ್ದೀರಿ. ಅದಕ್ಕೆ ನಾವು ಈಗ ಇನ್ನೂ ಜಾಸ್ತಿ ಕೇಳಿದ್ದೇವೆ. ಇನ್ನೂ ಇನ್‌ಕಂಪ್ಲೀಟ್ ಆಗಿರತಕ್ಕ ಇರಿಗೇಷನ್ ಪಂಪ್ ಸೆಟ್ಟುಗಳಿಗೆ ಪವರ್ ಕೊಡಬೇಕಾಗಿದ್ದರೆ 36 ಲಕ್ಷ ರೂಪಾಯಿಗಳು ಬೇಕಾಗಿವೆ. ಆದರಲ್ಲೂ ಕೂಡ ಒಂದುಕೋಟಿ ರೂಪಾಯಿ ಸ್ಯಾಂಕ್ಷನ್ ಆಗಿರತಕ್ಕ ಎಸ್ಟಿಮೇಟುಗಳು ಸಿದ್ದವಾಗಿವೆ. ಈಗಿರತಕ್ಕ ಇನ್‌ಕಂಪ್ಲೀಟ್ ವರ್ಕ್ಸ್‌ಗಳಿಗೆ ಇಷ್ಟು ಹಣ ಬೇಕಾಗಿರುವಾಗ ಹೊಸ ಕೆಲಸಗಳಿಗೆ ಯಾವ ರೀತಿಯಲ್ಲಿ ಭರವಸೆ ಕೊಡಬೇಕು ಎನ್ನುವುದನ್ನು ತಾವೇ ಯೋಚನೆ ಮಾಡಬೇಕು. ನಾನು ತಮ್ಮಲ್ಲಿ ಅಪೀಲ್ ಮಾಡುತ್ತೇನೆ, ಸಭೆಗೆ ಅಪೀಲ್ ಮಾಡುತ್ತೇನೆ, ಇನ್ನಾವ ವಿಧವಾದ ಸಂದೇಹವನ್ನೂ ಇಟ್ಟುಕೊಳ್ಳಕೂಡದು, ಎಲೆಕ್ಟ್ರಿಕ್ ಪವರ್‌ನ ಸರಬರಾಯಿ ಕೆಲಸವನ್ನು ಇಲಾಖೆಯವರು

ನಿಜವಾಗಿಯೂ ಬಹಳ ತ್ವರಿತವಾಗಿ ನಡೆಸಿಕೊಡುವಂತೆ ಮಾಡುತ್ತೇವೆ. ಎಲೆಕ್ಟ್ರಿಕ್ ಡಿಪಾರ್ಟ್‌ಮೆಂಟ್‌ನವರು ಬಹಳ ಎಕನಾಮಿಕಲ್ ಆಗಿ ಕೆಲಸ ಮಾಡುತ್ತಾ ಬಂದಿದ್ದಾರೆ. ಮದರಾಸು ಬೊಂಬಾಯಿಗಳಿಗೆ ಹೋಲಿಸಿ ನೋಡಿದರೆ ನಮ್ಮ ಡಿಪಾರ್ಟ್‌ಮೆಂಟಿನವರು ಬೇರೆ ಕಾಂಟ್ರಾಕ್ಟರುಗಳಿಗೆ ಕಾಂಟ್ರಾಕ್ಟ್ ಕೊಡದೆ ತಾವೇ ಎಲ್ಲಾ ಕೆಲಸ ನಡೆಸುತ್ತಾ ಇದ್ದಾರೆ. ಆದ್ದರಿಂದ ಅಸೆಂಬ್ಲಿಯವರು ಸ್ವಲ್ಪ ಹೆಚ್ಚು ಹಣ ಒದಗಿಸುವುದಾದರೆ ಈ ಕೆಲಸಗಳನ್ನೆಲ್ಲಾ ಪ್ರಾರಂಭ ಮಾಡಬಹುದು. ಈ ದೃಷ್ಟಿಯಿಂದ ನಾನು ತಮ್ಮನ್ನು ಕೇಳಿಕೊಳ್ಳುತ್ತೇನೆ. ಯಾವುದೇ ಕೆಲಸ ಮಾಡಬೇಕಾದರೂ ತಾವು ಆರ್ಡರ್ ಮಾಡಿ, ನಾವು ಎಕ್ಸಿಕ್ಯೂಟ್ ಮಾಡುತ್ತೇವೆ. ಬಿಲ್ ಕೊಟ್ಟಾಗ ದುಡ್ಡು ಕೊಡುವುದಕ್ಕೆ ನೀವು ಹಣ ಪ್ರೊವೈಡ್ ಮಾಡಿ. ಈಗ ಸಂಸ್ಥಾನದ ನಾನಾ ಕಡೆಗಳಿಂದ ವಿದ್ಯುಚ್ಛಕ್ತಿ ಕೊಡಿಸಬೇಕೆಂದು ಮನವಿಗಳು ಬಂದು ಎಸ್ಟಿಮೇಟ್ ಆಗಿ 5-10 ವರ್ಷಗಳಾಗಿವೆ. ಕೆಲಸ ಆಗಿಲ್ಲ. ಒಂದರಲ್ಲಿ 1925ನೇ ಇಸವಿಯಿಂದಲೂ ನಿಂತುಹೋಗಿವೆ. ಅದಕ್ಕೆ ಇದುವರೆಗೂ ಹಣ ಕೊಡುವುದಕ್ಕೆ ಆಗಿಲ್ಲ. ಈ ವರ್ಷ ತೆಗೆದುಕೊಳ್ಳಬೇಕೆಂದು ಒಂದು ಅಭಿಪ್ರಾಯವಿದೆ. ಅಂತಹದರಲ್ಲಿ.....

ಒಬ್ಬ ಸದಸ್ಯರು :- ಅದು ಯಾವುದು?

ಶ್ರೀ ಟಿ. ಸಿದ್ದಲಿಂಗಯ್ಯ :- ಹೆಸರು ಹೇಳಬಾರದು, ಹೆಸರು ಹೇಳಿದರೆ ಚೆನ್ನಾಗಿರುವುದಿಲ್ಲ. 4-5 ವರ್ಷ ಆಗಿರುವುದನ್ನು ಆದಷ್ಟು ಶೀಘ್ರವಾಗಿ ನಡೆಸಬೇಕೆಂದು ಅಭಿಪ್ರಾಯವಿದೆ. ಅನೇಕ ಮಹನೀಯರಿಗೆ ಉತ್ತರ ಹೇಳುವಾಗ ಬಹಳ ದುಃಖದಿಂದ ಹೇಳುತ್ತೇನೆ: ನಾನು ಮಂತ್ರಿಯಾಗಿ ಕುಳಿತುಕೊಂಡಿದ್ದರೂ ಹಳ್ಳಿಯವರ ಸೇವೆ ಯಾವರೀತಿ ಮಾಡಬೇಕೆಂಬುದನ್ನು ತಿಳಿದುಕೊಂಡಿದ್ದೇನೆ. ಆದರೆ ಮಾಡುವುದಕ್ಕೆ ಹಣವಿಲ್ಲ. ಹಣದ ಅಭಾವದಿಂದ ಯಾವ ಕೆಲಸ ಮಾಡುವುದಕ್ಕೂ ಆಗುವುದಿಲ್ಲ. ಅದಕ್ಕೆ ತಾವು ಯಾವ ರೀತಿಯಲ್ಲಾದರೂ ಹಣದ ಒಂದು ಪರಿಹಾರವನ್ನು ಒದಗಿಸುವುದಾದರೆ ತಕ್ಷಣ ಕೆಲಸ ಮಾಡಿಕೊಡುತ್ತೇವೆ ಎಂದು ಹೇಳಿ ಅವರಲ್ಲಿ ಬಹಳ ವಿನಯದಿಂದ ಅರಿಕೆ ಮಾಡಿಕೊಂಡಿದ್ದೇನೆ. ದೊಡ್ಡ ದೊಡ್ಡ ಶಿಫಾರಸ್ಸುಗಳನ್ನು ತೆಗೆದುಕೊಂಡು ಬರುತ್ತಾರೆ. ಅದನ್ನು ನೋಡಿ ದುಃಖ ಪಡುತ್ತೇನೆ. ನೀವು ಹಣ ಯಾವ ರೀತಿ ಒದಗಿಸುತ್ತೀರೋ ಅದೇ ರೀತಿ ಸೌಕರ್ಯಗಳನ್ನೂ ಕೂಡ ಒದಗಿಸಿಕೊಡುವುದಕ್ಕೆ ಸಿದ್ದವಾಗಿದ್ದೇನೆ ಎಂದು ಅವರಿಗೆ ಹೇಳಿದ್ದೇನೆ. ಯಾವ ರೀತಿಯಲ್ಲಾದರೂ ಸರಿಯೇ, ಎಲ್ಲಾ ಅಸೆಂಬ್ಲಿಯವರ ಕೈಯಲ್ಲೇ ಇದೆ. ಹಣದ ಸಮಸ್ಯೆ ಪರಿಹಾರ ಮಾಡಿ ಜನಗಳಿಗೆ ನಿಜವಾಗಿಯೂ ವಿದ್ಯುಚ್ಛಕ್ತಿ ದೀಪದ ಪ್ರಕಾಶವನ್ನು ಒದಗಿಸುವುದಕ್ಕೆ ನಮ್ಮ ಇಲಾಖೆಯವರು ಸದಾ ಸಿದ್ಧವಾಗಿದ್ದಾರೆ ಎಂದು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ. ಈ ದೃಷ್ಟಿಯಿಂದ ಹಳ್ಳಿಯವರಾಗಲಿ ಪಟ್ಟಣದವರಾಗಲಿ ಸರ್ವರಿಗೂ ಸೌಕರ್ಯ ಒದಗಿಸತಕ್ಕ ನೀತಿ ಸರ್ಕಾರದ ನೀತಿಯಾಗಿದೆ. ಆ ನೀತಿಯ ಪ್ರಕಾರ - ಅನೇಕವೇಳೆ ಹೇಳಿದ್ದೇನೆ - ಪ್ರತಿಯೊಂದು ತಾಲ್ಲೂಕು ಹೆಡ್‌ಕ್ವಾರ್ಟರಿಗೂ ಕೊಡಬೇಕು. ಆ ಮೇಲೆ ಸಾವಿರಕ್ಕಿಂತಲೂ ಹೆಚ್ಚಾಗಿ ಜನಸಂಖ್ಯೆಯಿರತಕ್ಕ ಹಳ್ಳಿಗಳಿಗೆ ಪ್ರಿಫರೆನ್ಸ್ ಕೊಡಬೇಕು. ಇನ್ನೊಂದು ರಹಸ್ಯ. ಅನೇಕರು ತಿಳಿದುಕೊಂಡಿರುವುದೇನೆಂದರೆ, ಎಲೆಕ್ಟ್ರಿಕ್ ಡಿಪಾರ್ಟ್‌ಮೆಂಟ್‌ನವರು ಸುಮ್ಮನೆ ಕೇಳಿದರೆ ಕೊಡುತ್ತಾರೆ, ಸ್ಯಾಂಕ್ಷನ್ ಆದರೆ ಸಾಕು ಎಂಬ ಭಾವನೆ ಇದೆ. ಆದರೆ ಎಲೆಕ್ಟ್ರಿಕ್ ಡಿಪಾರ್ಟ್‌ಮೆಂಟನ್ನು ಸ್ವಲ್ಪ ಬಿಸಿನೆಸ್ ಲೈಕ್ ಆಗಿ ನೋಡಬೇಕು. ಅದು ಸ್ವಲ್ಪಮಟ್ಟಿಗೆ ಬಿಸಿನೆಸ್

ಡಿಪಾರ್ಟ್‌ಮೆಂಟ್ ಎಂದು ಇಟ್ಟುಕೊಳ್ಳಬೇಕು. ಅದು ಚಿನ್ನದ ಮೊಟ್ಟೆಗಳನ್ನಿಡುವ ಬಾತುಕೋಳಿಯಂತೆ. ಬಡ್ಜೆಟ್ಟಿನಲ್ಲಿ ಈ ವರ್ಷ ನೋಡಿದರೆ ನೆಟ್ ಇನ್ಕಂ 1 ಕೋಟಿ 2ಲಕ್ಷ ಚಿಲ್ಲರೆ ಏನೋ ಬಂದಿದೆ. ಅಂಥ ಬಾತನ್ನು ಏನೂ ಮಾಡುವುದಕ್ಕೆ ಹೋಗಬಾರದು, ಪ್ರೀತಿಯಿಂದ ಕಾಪಾಡಿಕೊಳ್ಳಬೇಕು. ಯಾವುದಾದರೂ ಒಂದು ಕೆಲಸ ಮಾಡಬೇಕಾದರೆ ಇನ್‌ವೆಸ್ಟ್‌ಮೆಂಟ್ ಎಷ್ಟಾಗುತ್ತದೆಯೋ ಅದರ ಮೇಲೆ ರಿಟರ್ನ್ 10% ಬರಬೇಕು. ಬರದೇ ಹೋದರೆ ಎಲೆಕ್ಟ್ರಿಕ್ ಡಿಪಾರ್ಟ್‌ಮೆಂಟಿನ ಬಂಡವಾಳವೆಲ್ಲಾ ಖರ್ಚಾಗುತ್ತದೆ.

ಶ್ರೀ ಎ. ಭೀಮಪ್ಪನಾಯಕರು :- ಚಿನ್ನವನ್ನೇ ಏಕೆ ತೆಗೆಯುತ್ತೀರಿ. ಮುತ್ತು ರತ್ನ ಏಕೆ ತೆಗೆಯಬಾರದು?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಅದರಲ್ಲಿ ಚಿನ್ನ ಬರಬೇಕಾದರೆ ಏನು ಹಾಕಿದರೆ ಚಿನ್ನ ಬರುತ್ತದೆಯೋ ಅದನ್ನು ಮಾತ್ರ ಹಾಕಿ ಮುತ್ತು ರತ್ನ ಅದರಲ್ಲಿ ಬರುವುದಿಲ್ಲ. ಒಂದು ಲಕ್ಷ ರೂಪಾಯಿ ಇನ್ವೆಸ್ಟ್‌ಮೆಂಟ್ ಮಾಡಿದರೆ ಬಿಸಿನೆಸ್ ಪ್ರಕಾರ 4% ಇಂಟ್ರೆಸ್ಟ್ ಎಂದು ತೆಗೆದುಕೊಳ್ಳಬೇಕು, ಕಂಬಗಳು, ಟ್ರಾನ್ಸ್‌ಫಾರ್ಮರ್‌ಗಳು ಇತ್ಯಾದಿಗಳಿಗೆ ಡಿಪ್ರಿಸಿಯೇಷನ್ 4% ತೆಗೆದಿಡಬೇಕು. ಅದರ ಮೇನ್ಟೇನೆನ್ಸ್‌ಗೆ 3% ಹೀಗೆ 10.9% ರಿಟರ್ನ್ ಬರಬೇಕು. ಇಲ್ಲದಿದ್ದರೆ ಎಲೆಕ್ಟ್ರಿಕ್ ಡಿಪಾರ್ಟ್‌ಮೆಂಟಿನ ಬಂಡವಾಳವೆಲ್ಲಾ ವರ್ಷೇ ವರ್ಷೇ ಕರಗಿಹೋಗುತ್ತದೆ. ಅನೇಕರಿಗೆ ಬಹಳ ಉದಾರ ಭಾವನೆಯಿಂದ, ಗ್ರಾಮಾಂತರ ಜನಗಳ ಮೇಲಿನ ಪ್ರೀತಿಯಿಂದ ಇದುವರೆಗೂ 2% ರಿಟರ್ನ್ಸ್ ಇದ್ದರೂ ಎಲೆಕ್ಟ್ರಿಕ್ ಕರೆಂಟ್ ಕೊಟ್ಟಿದ್ದೇವೆ. ಯಾವತ್ತೂ ಕೂಡ ವಿದ್ಯುಚ್ಛಕ್ತಿ ಎಷ್ಟರಮಟ್ಟಿಗೆ ಸರಬರಾಯಿ ಆಗುತ್ತದೆಯೋ ಅಷ್ಟರಮಟ್ಟಿಗೂ ಗ್ರಾಮಾಂತರಗಳಿಗೆ ಒದಗಿಸಬೇಕೆಂಬ ಉದ್ದೇಶ ಇದೆ. ಆದರೆ ಆ ರಿಟರ್ನ್ ಮಾತ್ರ ಭದ್ರಪಡಿಸಿ ಕೊಡುವುದಕ್ಕೆ ತಾವೆಲ್ಲರೂ ಸಹಕಾರ ಕೊಡಬೇಕು. ಇಲ್ಲದಿದ್ದರೆ ಕಷ್ಟ. ನಮಗೂ ಬಹಳ ಉತ್ಸಾಹ ಇದೆ. ಎಲ್ಲಾದರೂ 3 ಅಥವಾ 6 ಕೋಟಿ ರೂಪಾಯಿಗಳ ಸಾಲವನ್ನಾದರೂ ಮಾಡಿ ಗ್ರಾಮಾಂತರಗಳಿಗೆ ವಿದ್ಯುಚ್ಛಕ್ತಿ ಒದಗಿಸಬೇಕೆಂಬ ಆಶೆ ಇದೆ. ಆದರೆ ರಿಟರ್ನ್ ಬರದಿದ್ದರೆ ಚಿನ್ನ ಕೊಡತಕ್ಕ ಆ ಬಾತೇ ಸತ್ತು ಹೋಗಬೇಕಾಗುತ್ತದೆ. ಆ ದೃಷ್ಟಿಯಿಂದ ರಿಟರ್ನ್ ಬರಬೇಕೆಂಬುದನ್ನು ಗಮನಿಸಿ, ಯಾವ ಒಂದು ಅರ್ಜಿ ಆಗಲಿ, ಡಿಮಾಂಡ್ ಆಗಲಿ ಮಾಡಬೇಕಾದರೆ ಅದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕೆಂದು ಸಾರ್ವಜನಿಕರಿಗೆ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಒಬ್ಬ ಸದಸ್ಯರು :- ಅದು ಮಾತ್ರ ಸಾಧ್ಯವಿಲ್ಲ.

ಶ್ರೀ ಟಿ. ಸಿದ್ದಲಿಂಗಯ್ಯನವರು :- ರಿಟರ್ನ್ ಇಲ್ಲದಿದ್ದರೆ, ನಾನು ಆಗಲೇ ಹೇಳಿದ ಪ್ರಕಾರ, ಬಾತೇ ಸತ್ತು ಹೋಗಬೇಕಾಗುತ್ತದೆ. ಆದ್ದರಿಂದ ಅದನ್ನು ಉಳಿಸಿಕೊಳ್ಳಿ. ಸರ್ಕಾರದವರು ಈ ವಿಷಯದಲ್ಲಿ ಯಾವತ್ತೂ ಸಹಾನುಭೂತಿಯನ್ನು ತೋರಿಸಿಕೊಂಡು ಬಂದಿದ್ದಾರೆ. ಹಾಗಿಲ್ಲದೆ ಹೋದರೆ ನಾವು ಮುಂದುವರಿಯುವುದಕ್ಕಾಗುವುದಿಲ್ಲ. ಇದುವರೆಗೆ ಸುಮಾರು 550 ಹಳ್ಳಿಗಳಿಗೆ ಎಲೆಕ್ಟ್ರಿಕ್ ದೀಪವನ್ನು ಒದಗಿಸಿದ್ದೇವೆ. ಸುಮಾರು 4000-5000 ಪಂಪುಸೆಟ್ಟುಗಳನ್ನು ಒದಗಿಸಿ ಪವರ್ ಸರಬರಾಯಿ ಮಾಡಿದ್ದೇವೆ. ಆದರೆ ಇವುಗಳಿಂದ ನಮಗೆ ಸರಿಯಾಗಿ ಆದಾಯ ಬರುತ್ತಿಲ್ಲ. ಆದ್ದರಿಂದ ಇನ್ನುಮೇಲಾದರೂ ಯಾವುದನ್ನು ಹೊಸದಾಗಿ ಮಂಜೂರು ಮಾಡಬೇಕಾದರೂ

ನಮಗೆ ಬರಬಹುದಾದ ಆದಾಯವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಕೊಡಬೇಕಾಗುತ್ತದೆ. ಈಗೇನೋ ನಮ್ಮ ಉತ್ಸಾಹದಲ್ಲಿ ಎಲ್ಲ ಊರುಗಳಿಗೂ ಪವರ್ ಸಪ್ಲೈ ಮಾಡಬೇಕು, ಎಲ್ಲರಿಗೂ ವಿದ್ಯುಚ್ಛಕ್ತಿ ಸೌಕರ್ಯ ಒದಗಿಸಬೇಕೆಂದು ಮಾಡಿದ್ದೇವೆ. ಅಂತಹದರಲ್ಲಿ ಸರಿಯಾಗಿ ಆದಾಯ ಬರದೇ ಹೋದರೆ ಹೇಗೆ ಮುಂದೆ ಕೊಡುವುದು? ಆದ್ದರಿಂದ ತಾವುಗಳೆಲ್ಲರೂ ಈ ವಿಚಾರದಲ್ಲಿ ಆದಷ್ಟು ಮಟ್ಟಿಗೆ ಸಹಕರಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಈ ಕತ್ತರಿ ನಿರ್ಣಯವನ್ನು ಮೈಸೂರು ಡಿಸ್ಟ್ರಿಕ್ಟಿನವರು ಏನು ತಂದಿದ್ದಾರೋ ಅದನ್ನು ಪರೀಕ್ಷೆ ಮಾಡಿ ಎಷ್ಟುಮಟ್ಟಿಗೆ ಕೊಡಬಹುದೊ ಅಷ್ಟುಮಟ್ಟಿಗೆ ಕೊಡುತ್ತೇವೆಂಬ ಭರವಸೆ ನೀಡುತ್ತೇನೆ. ಇದರಮೇಲೆ ಮಾನ್ಯ ಸದಸ್ಯರು ತಮ್ಮ ಕತ್ತರಿ ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಕೋರುತ್ತೇನೆ.

{ಸಚಿವರ ಉತ್ತರದ ನಂತರ ಖೋತಾ ನಿರ್ಣಯವನ್ನು ಸದಸ್ಯರು ಹಿಂತೆಗೆದುಕೊಂಡರು. ಗ್ರಾಮಾಂತರ ಪ್ರದೇಶಗಳ ವಿದ್ಯುದ್ದೀಕರಣ ಮುಂತಾದ ಅನೇಕ ಪ್ರಶ್ನೆಗಳನ್ನು ಸದನದಲ್ಲಿ ಇದೇ ನೀತಿ ಆಧಾರದ ಮೇಲೆ ಸಿದ್ದಲಿಂಗಯ್ಯ ಎದುರಿಸಿದ್ದಾರೆ.}

**ಕಾಂಟ್ರಾಕ್ಟರುಗಳಿಂದ ರೈತರ ಶೋಷಣೆ**

ಇದೇ ಬೇಡಿಕೆಯ ಮೇಲೆ ಶಿಡ್ಲಘಟ್ಟ ಚಿಕ್ಕಬಳ್ಳಾಪುರ ಕ್ಷೇತ್ರದ ಶಾಸಕರಾದ ಶ್ರೀ ಜೆ. ಪಾಪಣ್ಣನವರು ರೈತರಿಗೆ ಪಂಪ್‌ಸೆಟ್ ಸರಬರಾಜು ಮಾಡುವಲ್ಲಿ ಕಾಂಟ್ರಾಕ್ಟರುಗಳಿಂದ ಶೋಷಣೆಗೊಳಗಾಗಿರುವುದನ್ನು ಒತ್ತಿ ಹೇಳಿದರು. ಖೋತಾ ನಿರ್ಣಯದ ಮೇಲಿನ ಚರ್ಚೆ.

"ಸ್ವಾಮಿ, ಈ ಖೋತಾ ನಿರ್ಣಯವನ್ನು ಈ ಸಭೆಯ ಮುಂದೆ ಮಂಡಿಸುವ ಉದ್ದೇಶವೇನೆಂದರೆ, ಗ್ರಾಮಾಂತರ ಪ್ರದೇಶಗಳಲ್ಲಿ ರೈತರು ಇರಿಗೇಷನ್ ಪಂಪುಗಳನ್ನು ತೆಗೆದುಕೊಳ್ಳುವಾಗ ಕೆಲವು ಲೈಸೆನ್ಸ್‌ಡ್ ಕಂಟ್ರಾಕ್ಟರುಗಳಿಂದ ಏನು ತೊಂದರೆಯಾಗುತ್ತಿದೆ ಎಂಬುದನ್ನು ಈ ಸಭೆಯ ಮುಂದಿಡಬೇಕೆಂದು ಬಂದಿದ್ದೇನೆ. ತಮಗೆಲ್ಲರಿಗೂ ಗೊತ್ತಿರುವಹಾಗೆ ಈಗ ಇರಿಗೇಷನ್ ಪಂಪುಗಳಿಗೆ ಗ್ರಾಮಾಂತರ ಪ್ರದೇಶಗಳಿಂದ ಬಹಳ ಬೇಡಿಕೆಗಳು ಒತ್ತಾಯವೂ ಬರುತ್ತಿದೆ. ಈ ಒತ್ತಾಯ ಪರಿಸ್ಥಿತಿಯನ್ನು ದುರುಪಯೋಗ ಪಡಿಸಿಕೊಂಡು ಕೆಲವು ಎಲೆಕ್ಟ್ರಿಕ್ ಕಂಟ್ರಾಕ್ಟರುಗಳು ಈ ಇಲಾಖೆಯ ಕೆಲವು ಅಧಿಕಾರಿಳೊಡನೆ ಶಾಮೀಲಾಗಿ ಲಂಚ ಹೊಡೆಯುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಇದರಿಂದ ರೈತರಿಗೆ ಬಹಳ ತೊಂದರೆಗಳು ಉಂಟಾಗುತ್ತವೆ. ಯಾವ ಎಲೆಕ್ಟ್ರಿಕ್ ಫಿಟಿಂಗ್ಸ್ ಮಾಡಬೇಕಾದರೂ ಈ ಲೈಸನ್ಸ್ ಕಂಟ್ರಾಕ್ಟರುಗಳೇ ಮಾಡಬೇಕೆಂದಿರುವುದರಿಂದ, ಯಾವ ಎಲೆಕ್ಟ್ರಿಕ್ ಇನ್ಸ್ಟಲೇಶನ್ಸಳನ್ನಾದರೂ ಇವರುಗಳ ಮೂಲಕವಾಗಿಯೇ ಮಾಡಿಸಬೇಕಾಗುತ್ತದೆ. ಎಲೆಕ್ಟ್ರಿಕ್ ಡಿಪಾರ್ಟ್‌ಮೆಂಟಿನಲ್ಲಿರುವ ಆಪರೇಟರುಗಳು ಲಂಚಕೋರತನಕ್ಕೆ ಮಾರುಹೋಗಿ ಎಲ್ಲಾ ರೈತರಿಗೂ ತಮಗೆ ಬೇಕಾದ ಕೆಲವು ಕಂಟ್ರಾಕ್ಟರುಗಳ ಹತ್ತಿರಕ್ಕೆ ಹೋಗಬೇಕೆಂದು ಹೇಳಿ ಪ್ರೋತ್ಸಾಹ ಮಾಡುತ್ತಿರುತ್ತಾರೆ. ಸರ್ವೇ ಆಗುವುದಕ್ಕೆ ಮುಂಚೆ ಆ ರೈತನು ಈ ಕಂಟ್ರಾಕ್ಟರಲ್ಲಿಗೆ ಹೋಗಿ ಈ ಒಂದು ಒಪ್ಪಂದಕ್ಕೆ ರುಜು ಹಾಕಬೇಕಾಗುತ್ತದೆ. ರೈತರಿಗೆ ಈ ಅಗ್ರಿಮೆಂಟಿನಲ್ಲಿ (ಒಪ್ಪಂದದ ಪತ್ರದಲ್ಲಿ) ಏನಿದೆ, ಏನಿಲ್ಲವೆಂಬುದು ಯಾವುದೂ ಗೊತ್ತಿರುವುದಿಲ್ಲ. ಅವರಿಗಿರುವ ಒಂದು ಆತುರವೆಂದರೆ ವಿದ್ಯುಚ್ಛಕ್ತಿಯನ್ನು ಬೇಗ ಹೊಂದಬೇಕು ಎಂಬುದು. ಅಧಿಕಾರಿಗಳು ಹೇಳಿ ಗೊತ್ತುಮಾಡಿದ

ಕಂಟ್ರಾಕ್ಟರಿಗೆ ತಾನು ಈ ಕೆಲಸವನ್ನು ವಹಿಸಿದರೆ ಆತನು ಮೇಲಿನ ಅಧಿಕಾರಿಗಳಲ್ಲಿಗೆ ಹೋಗಿ ಬೇಗ ಮಾಡಿಸಿಕೊಡುತ್ತಾನೆಂಬ ಆಸೆ ಇರುತ್ತದೆ. ಈ ರೀತಿಯ ಭಾವನೆಯಿಂದ ಆ ಕಂಟ್ರಾಕ್ಟ್‌ದಾರನಲ್ಲಿಗೆ ಹೋಗಿ ಆ ಅಗ್ರಿಮೆಂಟ್ ಫಾರಮಿಗೆ ರುಜು ಹಾಕುತ್ತಾನೆ. ಪಾಪ !ಅವನಿಗೆ ಅದರ ಪರಿಣಾಮವೇನೆಂಬುದು ಯಾವುದೂ ಗೊತ್ತಿಲ್ಲ. ಅದೇ ಹೊಸದಾಗಿ ಅವನು ಇಂತಹ ಪಂಪು ಹಾಕಿಸುತ್ತಿರುವುದರಿಂದ ಸಾಮಾನಿನ ಪರಿಚಯ ಕೂಡ ಇಲ್ಲದಿರುವುದರಿಂದ, ಅವನಿಗೆ ಮೇಲು ಯಾವುದು, ಕೀಳು ಯಾವುದು, ಬೆಲೆ ಏನು ಒಂದೂ ಗೊತ್ತಾಗುವುದಿಲ್ಲ. ಆದರೂ ಪಂಪನ್ನು ಬೇಗ ತೆಗೆದುಕೊಳ್ಳಬೇಕೆಂಬ ಉತ್ಸಾಹದಲ್ಲಿ ಅಧಿಕಾರಿಗಳ ಮಾತನ್ನು ಕೇಳಿ ಆ ಕಂಟ್ರಾಕ್ಟರಿಗೆ ಒಪ್ಪಂದ ಕೊಡುತ್ತಾನೆ. ಈ ಅವಕಾಶವನ್ನು ದುರುಪಯೋಗ ಪಡಿಸಿಕೊಂಡು ಆ ಎಲೆಕ್ಟ್ರಿಕ್ ಕಂಟ್ರಾಕ್ಟರು ಸಿಕ್ಕಿದ ಕೀಳುದರ್ಜೆಯ ಸಾಮಾನುಗಳನ್ನು ಹಾಕಿ, ಹೆಚ್ಚಿಗೆ ದರ ಹಾಕಿ ಹಣವನ್ನು ವಸೂಲು ಮಾಡುತ್ತಾನೆ. ಆಗಲೇ ತನ್ನ ಕಂಟ್ರಾಕ್ಟ್‌ದಾರನು ಎಂತಹವನೆಂಬುದರ ಅರಿವು ಅವನಿಗಾಗುವುದು ವ್ಯಾಜ್ಯ ಶುರುವಾಗುತ್ತದೆ. ಆಗ ವ್ಯಾಜ್ಯ ಮಾಡಿದರೂ ಏನೂ ಪ್ರಯೋಜನವಿರುವುದಿಲ್ಲ. ಒಂದುಸಾರಿ ಆ ಕಂಟ್ರಾಕ್ಟ್‌ದಾರನ ಹಿಡಿತಕ್ಕೆ ಸಿಕ್ಕಿದಮೇಲೆ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಕೆಲಸವೆಲ್ಲ ಆಗಿದ್ದರೂ ಕಂಟ್ರಾಕ್ಟ್‌ದಾರನು ಒಪ್ಪಿ ಕಂಪ್ಲೀಷನ್ ರಿಪೋರ್ಟ್ ಕೊಡದೆ ರೈತನಿಗೆ ಸರ್ವಿಸ್ ಸಿಕ್ಕುವುದಿಲ್ಲ. ಹೀಗಿರುವಲ್ಲಿ ಕಂಟ್ರಾಕ್ಟ್‌ದಾರನೊಬ್ಬನ ಅವಶ್ಯಕತೆ ಎಷ್ಟಿದೆ ಎಂಬುದನ್ನು ಹೇಳಬೇಕಾಗಿಲ್ಲ. ಆದರೆ ವಾಸ್ತವವಾಗಿಯೂ ಅವನ ಅವಶ್ಯಕತೆ ಇದೆಯೆ? ಅವನು ಮಾಡುವುದಾದರೂ ಏನು? ಅವನೊಬ್ಬ ಬಂಡವಾಳಗಾರನಾಗಿ ತನ್ನ ಕೈ ಕೆಳಗೆ ಇಬ್ಬರೂ ಮೂವರು ವೈರುಮನ್ನುಗಳನ್ನು ಇಟ್ಟುಕೊಂಡು ಒಂದು ಲೈಸನ್ಸ್ ಪಡೆದುಕೊಂಡಿರುವವನು ಅಷ್ಟೆ. ಎಲ್ಲಾ ಕೆಲಸವನ್ನು ಮಾಡುವವನು ವೈರುಮನ್ನು, ಕಂಟ್ರಾಕ್ಟ್ ದಾರನ ಕೆಲಸವೆಲ್ಲ ದುಡ್ಡು ತೆಗೆದುಕೊಂಡು ರುಜು ಹಾಕುವುದು, ಕಿರುಕುಳಕೊಡುವುದು ಅಷ್ಟೆ. ಅಲ್ಲದೆ ಒಂದು ಇರಿಗೇಷನ್ ಪಂಪನ್ನು ಹಾಕಬೇಕಾದರೆ ಅಂತಹ ಭಾರಿ ಫಿಟಿಂಗ್ಸ್ ಏನೂ ಇಲ್ಲ. ಸರಳವಾಗಿರುತ್ತದೆ. ಆದ್ದರಿಂದಲೇ ಕಂಟ್ರಾಕ್ಟ್‌ದಾರನ ಕಂಪ್ಲೀಷನ್ ರಿಪೋರ್ಟ್ ಮೂಲಕವೇ ಸರ್ವೀಸ್ ಕೊಡಬೇಕೆಂದಿರುವುದನ್ನು ಬದಲಾಯಿಸಬೇಕೆಂದು ನಾನು ಹೇಳುತ್ತೇನೆ. ಈಗ ಹಳ್ಳಿಗಾಡುಗಳಲ್ಲಿ ಈ ಕಂಟ್ರಾಕ್ಟ್‌ದಾರರುಗಳು ಕೊಡುತ್ತಿರುವ ಈ ಕಿರುಕುಳವನ್ನು ತಪ್ಪಿಸಿದರೆ ಬಹಳ ಒಳ್ಳೆಯ ಕೆಲಸ ಮಾಡಿದಂತಾಗುತ್ತದೆ. ಪರೀಕ್ಷೆ ಮಾಡಬೇಕೆಂದರೆ, ನಮ್ಮ ಚಿಕ್ಕಬಳ್ಳಾಪುರದ ಕಡೆ ಬೇಕಾದಷ್ಟು ಸಂದರ್ಭಗಳನ್ನು ಹೇಳುತ್ತೇನೆ. ಕೆಲವು ಜಿಲ್ಲೆಗಳಲ್ಲಿ ಎರಡೆರಡು ತಾಲ್ಲೂಕಿನವರು ಒಬ್ಬರೇ ಕಂಟ್ರಾಕ್ಟರಿಗೆ ಕೊಡುತ್ತಿರುತ್ತಾರೆ. ಬೇರೆಯವರನ್ನು ಕೇಳುವವರೇ ಇರುವುದಿಲ್ಲ. ಮೇಲ್ಪಟ್ಟ ಅಧಿಕಾರಿಗಳು ಕೂಡ ಆ ಕಂಟ್ರಾಕ್ಟರುಗಳ ಮೂಲಕ ಕೆಲಸವನ್ನು ಬೇಗ ಮಾಡಿಕೊಡುತ್ತಾರೆ. ಅದರಿಂದ ಯಾವ ಕಂಟ್ರಾಕ್ಟರ್ ಮೂಲಕ ಹೋದರೆ ಬೇಗ ಕೆಲಸವಾಗುತ್ತದೆಯೋ ಆ ಕಂಟ್ರಾಕ್ಟರ ಹತ್ತಿರ ಎಲ್ಲರೂ ಹೋಗಬೇಕಾಗುತ್ತದೆ. ಪ್ರಿಯಾರಿಟಿ ಪ್ರಶ್ನೆ ಬಂದು ಯಾರಾದರೂ ತಮ್ಮ ಕೆಲಸವನ್ನು ಬೇಗ ಮಾಡಿಕೊಡುವುದಕ್ಕೆ ಕಾರಣ ಕೇಳಿದರೆ, ಅದು ಟೆಕ್ನಿಕಲ್ ವಿಷಯ, ಟ್ರಾನ್ಸ್‌ಫಾರ್ಮರ್ ಹೆಚ್ಚಿಗೆ ಲೋಡು ತೆಗೆದುಕೊಳ್ಳುವುದಿಲ್ಲ-ಎಂದು ಏನಾದರೊಂದು ಸಬೂಬು ಹೇಳಿಬಿಡುತ್ತಾರೆ. ಆದರೆ ಸೂಕ್ಷ್ಮವಾಗಿ ಇಂತಹವುಗಳನ್ನು ಪರೀಕ್ಷಿಸಿದರೆ ಇದರ ಹಿನ್ನೆಲೆಯಲ್ಲಿ ಲಂಚಕೋರತನ ಅಡಗಿರುವುದು ಗೋಚರವಾಗುತ್ತದೆ. ಇವರ ಬುದ್ಧಿ ಚಾತುರ್ಯ ಎಷ್ಟರಮಟ್ಟಿಗಿದೆ

ಎಂದು ಹೇಳುವುದಕ್ಕೆ ಅಸಾಧ್ಯ. ಎಷ್ಟೋವೇಳೆ ತಮಗೆ ಬೇಕಾದ ಕಂಟ್ರಾಕ್ಟ್‌ದಾರರ ವಿಷಯದಲ್ಲಿ ಆರು ತಿಂಗಳ ಹಿಂದಿನಿಂದಲೇ ಪ್ಲಾನ್ ಹಾಕಿಕೊಂಡು ಒಂದು ಜಾಗಕ್ಕೆ ಕಡಿಮೆ ಟ್ರಾನ್ಸ್‌ಫಾರ್ಮರ್‌ನಿಂದ ಆಗುವ ಹಾಗಿದ್ದರೂ ಬೇಕೆಂತಲೇ ಆ ಜಾಗಕ್ಕೆ ಒಂದು ದೊಡ್ಡ ಟ್ರಾನ್ಸ್‌ಫಾರ್ಮರ್ ಹಾಕುತ್ತಾರೆ. ಹೀಗೆ ಹಾಕುವುದರಿಂದ ಉಳಿಯುವ ಟ್ರಾನ್ಸ್‌ಫಾರ್ಮರ್ ಲೋಡಿನಿಂದ ಅಲ್ಲಿಲ್ಲಿಂದಲೇ ಪವರ್ ತೆಗೆದುಕೊಂಡು ತಮಗೆ ಬೇಕಾದವರಿಗಾಗಿಯೇ ಸುಲಭವಾಗಿ ಕೆಲವು ದಿವಸಗಳಲ್ಲಿಯೇ ಸರ್ವೀಸ್ ಕೊಡುತ್ತಾರೆ. ಈ ರೀತಿಯಾಗಿ ಅನೇಕ ವಿಧದಲ್ಲಿ ಹಿಂದುಮುಂದು ಮಾಡುತ್ತಾರೆ. ಆದ್ದರಿಂದ ಪರೀಕ್ಷೆ ಮಾಡಬೇಕಾದರೆ ಬಹಳ ಎಚ್ಚರಿಕೆಯಿಂದ ನೋಡಬೇಕು. ಈ ಎಲ್ಲಾ ಅಂಶಗಳನ್ನು ಗಮನಕ್ಕೆ ತೆಗೆದುಕೊಂಡು ಇಂತಹ ಲೈಸೆನ್ಸ್‌ಡ್ ಕಂಟ್ರಾಕ್ಟರುಗಳ ಅವಶ್ಯಕತೆ ನಿಜವಾಗಿಯೂ ಇದೆಯೇ? ಅವರುಗಳಿಂದ ಕಂಪ್ಲೀಷನ್ ರಿಪೋರ್ಟ್ ತರಬೇಕೆಂಬುದು ಆವಶ್ಯಕವೇ ಎಂಬುದನ್ನು ಪುನರ್ ವಿಮರ್ಶಿಸಬೇಕೆಂದು ನಾನು ಈ ಖೋತಾ ನಿರ್ಣಯವನ್ನು ಸಭೆಯ ಮುಂದಿಡುತ್ತೇನೆ.

ಸಭಾಧ್ಯಕ್ಷರು :- ಖೋತಾ ನಿರ್ಣಯ ಮಂಡಿತವಾಗಿದೆ. "ಬೇಡಿಕೆಯನ್ನು ನೂರು ರೂಪಾಯಿಗಳಷ್ಟು ಕಡಿಮೆ ಮಾಡಬೇಕು".

ಶ್ರೀ ಟಿ. ಸಿದ್ದಲಿಂಗಯ್ಯ :- ಅಧ್ಯಕ್ಷರೇ, ಈ ಖೋತಾ ನಿರ್ಣಯದಲ್ಲಿ ಅವರು ಸರ್ವೇ ಸಾಧಾರಣವಾಗಿ ಹೇಳಿದ್ದಾರೆಯೇ ಹೊರತು ನಿರ್ದಿಷ್ಟವಾಗಿ ಯಾವ ನಿದರ್ಶನಗಳನ್ನೂ ಸಭೆಯ ಗಮನಕ್ಕೆ ತರಲಿಲ್ಲ. ಲೈಸೆನ್ಸ್‌ಡ್ ಕಂಟ್ರಾಕ್ಟರುಗಳು ಜನಗಳಿಗೆ ಬಹಳ ಕಿರುಕುಳ ಕೊಡುತ್ತಿದ್ದಾರೆ ಎಂಬ ವಿಷಯವನ್ನು ಚರ್ಚೆ ಮಾಡುವುದು ಈ ಖೋತಾ ನಿರ್ಣಯದ ಉದ್ದೇಶ. ಅವರು ಹೇಳಿದ್ದರಲ್ಲಿ, ಸರ್ವೇ ಸಾಮಾನ್ಯವಾಗಿ ಎಲ್ಲರೂ ಲಂಚ ತೆಗೆದುಕೊಳ್ಳುತ್ತಿದ್ದಾರೆ. ಕಂಟ್ರಾಕ್ಟರುಗಳು ನಿರಾತಂಕವಾಗಿದ್ದಾರೆ. ಇಲಾಖಾ ಅಧಿಕಾರಿಗಳು ಕಂಟ್ರಾಕ್ಟರುಗಳಿಗೆ ಸಪೋರ್ಟ್ ಆಗಿ ಕೆಲಸ ಮಾಡುತ್ತಿದ್ದಾರೆ ಎಂದು ಗೊತ್ತಾಗುತ್ತದೆ. ಈ ರೀತಿಯಾಗಿ ಜನಗಳಿಗೆ ಕಿರುಕುಳ ಕೊಡುತ್ತಿರಬಹುದೆಂಬುದನ್ನು ಒಪ್ಪುತ್ತೇನೆ.

ಆದರೆ ಡಿಪಾರ್ಟ್‌ಮೆಂಟಿನ ದೃಷ್ಟಿಯಿಂದ ನಾನು ಹೇಳುವುದೇನೆಂದರೆ, ಕಂಟ್ರಾಕ್ಟ್ ಮಾಡತಕ್ಕವರು ಲೈಸೆನ್ಸ್‌ಡ್ ಕಂಟ್ರಾಕ್ಟರುಗಳು ಹೌದೇ ಅಲ್ಲವೇ ಎಂಬುದನ್ನು ನೀವು ನೋಡಿಕೊಳ್ಳಬೇಕು. ಏಕೆಂದರೆ ಲೈಸೆನ್ಸ್‌ಡ್ ಕಂಟ್ರಾಕ್ಟರುಗಳ ಮೇಲಾದರೆ ಸರ್ಕಾರದವರ ಅಧಿಕಾರ ಇದೆ. ಅವರು ಯಾವ ರೀತಿಯಲ್ಲಾದರೂ ಕಿರುಕುಳ ಕೊಟ್ಟರೆ ಅವರ ಲೈಸೆನ್ಸನ್ನು ವಜಾಮಾಡುವ ಅಧಿಕಾರ ಸರ್ಕಾರದವರಿಗಿದೆ. ಎರಡನೆಯದಾಗಿ, ಈ ಕಂಟ್ರಾಕ್ಟರುಗಳೆಲ್ಲರೂ ಆಫೀಸರುಗಳನ್ನು ಒಳಗೆ ಹಾಕಿಕೊಂಡು ಸಂಪಾದನೆ ಮಾಡುತ್ತಿದ್ದಾರೆಂದು ಹೇಳಿದರು. ಇಂತಹ ವಿಷಯಗಳಲ್ಲಿ ನಿರ್ದಿಷ್ಟವಾದ ಯಾವುದಾದರೂ ನಿದರ್ಶನಗಳನ್ನು ನಮ್ಮ ಗಮನಕ್ಕೆ ತಂದಿದ್ದರೆ ಚೆನ್ನಾಗಿತ್ತು. ಹಾಗಿಲ್ಲದೆ ಸರ್ವೇಸಾಮಾನ್ಯವಾಗಿ ಸುಮ್ಮನೆ ಎಲ್ಲರೂ ಹೀಗೆ ಮಾಡುತ್ತಿದ್ದಾರೆಂದರೆ ಯಾರಿಗೂ ಪ್ರಯೋಜನವಿಲ್ಲ.

ಶ್ರೀ ಜಿ. ಪಾಪಣ್ಣನವರು :- ಬೇಕಾದರೆ ನಾನು ಹೆಸರುಗಳನ್ನು ಕೊಟ್ಟು ತಿಳಿಸಬಲ್ಲೆ.

ಶ್ರೀ **ಕೆ.ವಿ. ಶಂಕರೇಗೌಡ (ಮಂಡ್ಯ)** :- ನಾವು ಹಾಗೆ ಸಿ.ಐ.ಡಿ. ಗಳಾಗುವುದು ಸಾಧ್ಯವಿಲ್ಲ. ಇಂತಹವರು ಲಂಚ ತೆಗೆದುಕೊಳ್ಳುತ್ತಾರೆ. ಇಂತಹವರು ತೆಗೆದುಕೊಳ್ಳುವುದಿಲ್ಲವೆಂದು ನಾನು ಹೇಳುವುದಕ್ಕಾಗುವುದಿಲ್ಲ. ಸರ್ಕಾರದವರು ಸಿಬ್ಬಂದಿಯನ್ನು ನೇಮಕ ಮಾಡಿ ಅಂತಹವರನ್ನು ಕಂಡುಹಿಡಿಯಬೇಕಾದದ್ದು ಅವರ ಕರ್ತವ್ಯ ಅಲ್ಲದೆ ಇದರಿಂದ ತೆಗೆದುಕೊಂಡವರ ದ್ವೇಷಕ್ಕೂ ನಾವು ಗುರಿಯಾಗಬೇಕಾಗುತ್ತದೆ.

ಶ್ರೀ **ಟಿ. ಸಿದ್ದಲಿಂಗಯ್ಯ** :- ಮೂರನೆಯದಾಗಿ ಕಂಟ್ರಾಕ್ಟರನ್ನು ನೇಮಕ ಮಾಡಿಕೊಳ್ಳುವುದರಲ್ಲೂ ಒಬ್ಬರ ಹತ್ತಿರಕ್ಕೇ ಹೋಗಬೇಡಿ. ನಾಲ್ಕು ಜನರಿಂದ ಟೆಂಡರು ಕರೆದು ಯಾರ ದರಗಳು ಸರಿಯಾಗಿ ಕಾಣುತ್ತವೆಯೋ ಅವರಿಗೆ ಕೊಡಿ. ಅವರು ಹೀಗೆ ಒಪ್ಪಿಕೊಂಡು ಆಮೇಲೆ ಅದರಂತೆ ಕೆಲಸ ಮಾಡದೇ ಹೋದರೆ ಕಂಪ್ಲೆಂಟ್ ಕೊಡಿ. ಅದನ್ನು ನಾವು ವಿಚಾರಿಸುತ್ತೇವೆ. ಹೀಗೆ ನಾನು ಹೇಳಿದಂತೆ ಮೂರು ರೀತಿಯಲ್ಲಿ ನಡೆದರೆ ಹೆರಾಜ್ಮೆಂಟನ್ನು ತಪ್ಪಿಸಬಹುದು.

ಇನ್ನು ಲಂಚವನ್ನು ನಿರೋಧಗೊಳಿಸುವ ವಿಚಾರದಲ್ಲಿ ಸರ್ಕಾರದವರು ಏನೇನು ಏರ್ಪಾಡುಗಳನ್ನು ನಡೆಸಬೇಕೋ ಅದನ್ನೆಲ್ಲ ಮಾಡಿದ್ದಾರೆ. ಲಂಚವನ್ನು ಕಂಡುಹಿಡಿಯುವುದಕ್ಕೆ ಯಾರೂ ಗೂಢಚಾರರಾಗಿ ವರ್ತಿಸಬೇಕೆಂದು ನಾನು ಹೇಳುವುದಿಲ್ಲ. ಅದನ್ನು ಹುಡುಕುವುದಕ್ಕೆ ಯಾರನ್ನೂ CIDಗಳಾಗಿ ಕಳುಹಿಸಬೇಕಾಗಿಲ್ಲ. ಯಾರಿಗೆ ಕಿರುಕುಳವಾಗುತ್ತದೆಯೋ ಅವರೊಂದು ಅರ್ಜಿ ಬರೆದರೆ ಸಾಕು. ನಾವು ಮುಂದಿನ ಕೆಲಸವನ್ನು ನಡೆಸುತ್ತೇವೆ. ಆದರೆ ಈಗಿರುವ ತೊಂದರೆ ಏನೆಂದರೆ, ಅನೇಕರು ಏನೇ ಕಿರುಕುಳವಿತ್ತರೂ ಅದನ್ನು ಸಹಿಸಿಕೊಂಡೇ ಸುಮ್ಮನಿರುತ್ತಾರೆ. ಅದೇ ತಪ್ಪು. ಅನೇಕರು ತಾವು ಲಂಚ ಕೊಟ್ಟಿರುತ್ತಾರೆ. ಆದರೆ ಲಂಚ ಕೊಟ್ಟಿದ್ದನ್ನು ಬಂದುಹೇಳಿ ಎವಿಡೆನ್ಸ್ ಕೊಡಿ ಎಂದು ಎಷ್ಟು ಹೇಳಿದರೂ ಕೊಡುವುದಿಲ್ಲ. ಇದು ಸರ್ಕಾರದವರಿಗಿರುವ ಮುಖ್ಯ ಕಷ್ಟ.

ಈ ರೀತಿಯಾಗಿ ಲಂಚ, ಕಿರುಕುಳಗಳನ್ನು ತಪ್ಪಿಸುವುದಕ್ಕೆ ಮೂರು ವಿಧಾನಗಳನ್ನು ಹೇಳಿದ್ದೇನೆ. ಆದ್ದರಿಂದ ತಾವು ಯಾವುದಾದರೂ ಸ್ಪೆಸಿಫಿಕ್ ಇನ್ಸಿಡೆಂಟ್ ಕೊಟ್ಟು ಸ್ವಲ್ಪ ಹೆರಾಜ್‌ಮೆಂಟ್ ಆಗುವುದಾಗಲಿ, ತಡ ಮಾಡುವುದಾಗಲಿ ತೋರಿ ಬಂದರೆ ಅದನ್ನು ತಿಳಿಸಿದರೆ ತಕ್ಕ ವಿಚಾರಣೆ ಮಾಡುತ್ತೇವೆಂದು ನಾನು ಭರವಸೆ ಕೊಡುತ್ತೇನೆ. ಇದರ ಮೇಲೆ ಮಾನ್ಯ ಸದಸ್ಯರು ತಮ್ಮ ಖೋತಾ ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ.

ಶ್ರೀ **ಜಿ. ಪಾಪಣ್ಣನವರು** :- ನಾನು ಕತ್ತರಿ ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳಲು ಸಭೆಯ ಅನುಮತಿ ಬೇಡುತ್ತೇನೆ.

(ಅನುಮತಿ ನೀಡಲಾಯಿತು)

**ಹೊರ ರಾಜ್ಯಗಳಿಗೆ ವಿದ್ಯುತ್ ನೀಡುತ್ತಿರುವ ಬಗ್ಗೆ**

ಹಲವು ಸ್ಥಳೀಯ ಪ್ರದೇಶಗಳಲ್ಲಿ ವಿದ್ಯುದೀಕರಣ ಲಭ್ಯವಾಗದೇ ಇದ್ದಾಗಲೂ ಸರ್ಕಾರ ಅಂದು ರಾಜ್ಯದ ಹೊರಗಿನ ಪ್ರದೇಶಗಳಿಗೆ ವಿದ್ಯುಚ್ಛಕ್ತಿ ಸರಬರಾಜು ಕೈಗೊಂಡಿದ್ದ ನೀತಿಯ

ಬಗ್ಗೆ ವಿರೋಧಪಕ್ಷಗಳು ಆತಂಕ ವ್ಯಕ್ತಪಡಿಸಿ ಸರ್ಕಾರವನ್ನು ಒಂದು ನಿರ್ಣಯದ ಮೇಲಿನ ಚರ್ಚೆಗೆ ಎಳೆದವು. ಕೈಗಾರಿಕಾ ಸಚಿವರಾಗಿ ಸಿದ್ದಲಿಂಗಯ್ಯನವರು ಸಂಗತಿಗಳ ಆಧಾರದ ಮೇಲೆ ವಿರೋಧ ಪಕ್ಷಗಳು ಸರ್ಕಾರದ ನಿಲುವನ್ನು ಒಪ್ಪುವಂತೆ ಮಾಡಿದ ಚರ್ಚೆಯ ಭಾಗ ಇಲ್ಲಿದೆ:

"ಶ್ರೀ ಎ.ವಿ. ನರಸಿಂಹರೆಡ್ಡಿಯವರು (ಬೆಂಗಳೂರು ದಕ್ಷಿಣ) :- ಸ್ವಾಮಿ, ನನ್ನ ನಿರ್ಣಯ ಈ ರೀತಿ ಇದೆ. ಅದನ್ನು ಮಂಡಿಸುತ್ತೇನೆ -

'ಗ್ರಾಮಾಂತರ ಪ್ರದೇಶಗಳಿಗೆ ವಿದ್ಯುಚ್ಛಕ್ತಿಯ ದೀಪವನ್ನೊದಗಿಸುವುದು, ನೀರಾವರಿ ಪಂಪುಗಳಿಗೆ ಬೇಕಾದ ವಿದ್ಯುಚ್ಛಕ್ತಿಯನ್ನು ಮತ್ತು ಸಣ್ಣ ಮತ್ತು ದೊಡ್ಡ ಕೈಗಾರಿಕೆಗಳಿಗೆ ಬೇಕಾದ ವಿದ್ಯುಚ್ಛಕ್ತಿಯನ್ನೂ ಒದಗಿಸುವುದು. ಇವುಗಳಿಗೆ ಸಂಬಂಧಪಟ್ಟ ಅವಶ್ಯಕತೆಗಳು ಪೂರ್ತಿಯಾಗಿ ನೆರವೇರುವವರೆಗೂ, ಸಂಸ್ಥಾನದಲ್ಲಿ ಉತ್ಪತ್ತಿಯಾಗತಕ್ಕ ವಿದ್ಯುಚ್ಛಕ್ತಿಯನ್ನು ಸಂಸ್ಥಾನದ ಬಳಕೆಗೆ ಮಾತ್ರವೇ ಉಪಯೋಗಿಸಬೇಕೆಂದು ಈ ಸಭೆಯವರು ಅಭಿಪ್ರಾಯ ಪಡುತ್ತಾರೆ."

ಶ್ರೀ ಎ.ವಿ. ನರಸಿಂಹರೆಡ್ಡಿಯವರು :- ನಾನು ಇದನ್ನು ಮಂಡಿಸುವಾಗ ಇದರ ಉದ್ದೇಶವೇನೆಂಬುದನ್ನು ಪೂರ್ವಭಾವಿಯಾಗಿ ಈ ಸಭೆಯವರ ಅವಗಾಹನೆಗೆ ತರುವುದು ನನ್ನ ಕರ್ತವ್ಯವೆಂದು ತಿಳಿದುಕೊಂಡಿದ್ದೇನೆ. ಈ ವಿಷಯ ಬಹಳ ತೀವ್ರತರವಾದುದು ಮತ್ತು ಅಗತ್ಯವಾದುದು ಎಂದು ಕಂಡುಬಂದರೆ ಸರ್ಕಾರದವರು ಪರಿಶೀಲನೆ ಮಾಡಬೇಕಾದದ್ದು ಅವಶ್ಯಕ ಎಂಬುದು ನನ್ನ ಖಚಿತ ಅಭಿಪ್ರಾಯ. ಇತರ ಪಾಶ್ಚಾತ್ಯ ದೇಶಗಳಲ್ಲಿ ವಿದ್ಯುಚ್ಛಕ್ತಿ ಸಹಾಯದಿಂದ ಈ ದಿವಸ ಬಹಳವಾಗಿ ಕೈಗಾರಿಕೆಯಲ್ಲೂ ಮತ್ತು ವ್ಯವಸಾಯದಲ್ಲೂ ಮುಂದುವರೆಯುತ್ತಿದ್ದಾರೆಂದು ನಾವು ತಿಳಿದುಕೊಂಡಿದ್ದೇವೆ. ದಕ್ಷಿಣ ಭಾರತದಲ್ಲೆಲ್ಲಾ ಮೈಸೂರು ಸಂಸ್ಥಾನದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿ ಮಾಡುತ್ತಿದ್ದೇವೆ. ಈ ವಿದ್ಯುಚ್ಛಕ್ತಿ ಉಪಯೋಗ ಈ ಸಂಸ್ಥಾನದ ಪ್ರಜೆಗಳಿಗೆ ಮೊಟ್ಟಮೊದಲನೆಯದಾಗಿ ಹೆಚ್ಚಿನ ರೀತಿಯಲ್ಲಿ ಪ್ರತಿಯೊಬ್ಬರಿಗೂ ಸಿಕ್ಕುವಹಾಗೆ ವಿನಿಯೋಗ ಮಾಡುವುದಕ್ಕೆ ಸಾಧ್ಯವಿಲ್ಲವೇ ಎಂಬ ಪ್ರಶ್ನೆ ಅನೇಕಸಾರಿ ನನಗೆ ಬಾಧಿಸುತ್ತಿದೆ. ಆದ್ದರಿಂದ ಸರ್ಕಾರಕ್ಕೆ ಈ ವಿಷಯದಲ್ಲಿ ಬೇರೆ ಯಾವ ಅನಾನುಕೂಲಗಳು ಅಥವಾ ಅಡಚಣೆಗಳೂ ಇಲ್ಲದಿದ್ದರೆ ಈ ನಿರ್ಣಯುವನ್ನು ಒಪ್ಪಿಕೊಳ್ಳಬೇಕೆಂದು ಬಿನ್ನವಿಸಿಕೊಳ್ಳುತ್ತೇನೆ. ಈ ನಿರ್ಣಯದ ಸಾರಾಂಶವಾದರೂ ಕೂಡ ಗ್ರಾಮಾಂತರ ಮತ್ತು ಪಟ್ಟಣಗಳಿಗೆ ಎಷ್ಟು ವಿದ್ಯುಚ್ಛಕ್ತಿ ಅವಶ್ಯಕ ಎಂಬುದನ್ನು ತಿಳಿಸುವುದೇ ಆಗಿದೆ. ದೇಶ ಮುಂದುವರೆಯುವುದಕ್ಕೆ ಜನ ಮುಂದುವರೆಯುವುದಕ್ಕೆ ಕೈಗಾರಿಕೆ ವ್ಯವಸಾಯ ಮುಂತಾದವುಗಳಿಗೆಲ್ಲ ವಿದ್ಯುಚ್ಛಕ್ತಿ ಸಹಾಯ ಬೇಕಾಗಿದೆ. ಹಳ್ಳಿಯಲ್ಲಿ ಪ್ರತಿಯೊಬ್ಬರಿಗೂ ಇದರ ಸೌಲಭ್ಯಗಳು ಸಿಕ್ಕಲಿ ಎಂಬ ದೃಷ್ಟಿಯಿಂದ ಈ ನಿರ್ಣಯವನ್ನು ತಂದವನಾಗಿದ್ದೇನೆ. ಈ ನಿರ್ಣಯದ ಉದ್ದೇಶವನ್ನು ತಿಳಿಸುವಾಗ ಸರ್ಕಾರದಿಂದ ಕೆಲವು ಭರವಸೆಗಳನ್ನು ನಿರೀಕ್ಷಿಸುತ್ತಿದ್ದೇನೆ. ಮಾನ್ಯ ಮಂತ್ರಿಗಳು ಇದಕ್ಕೆ ಉತ್ತರ ರೂಪವಾಗಿ ಅವರ ಅಭಿಪ್ರಾಯವನ್ನು ತಿಳಿಸುವರೆಂದು ನಂಬಿದ್ದೇನೆ. ಕೆಲವು ಸಂದರ್ಭಗಳಲ್ಲಿ ಹೊರ ಪ್ರಾಂತಗಳೊಡನೆ ಕೆಲವು ಒಪ್ಪಂದಗಳನ್ನು ಮಾಡಿಕೊಂಡಿದ್ದಾರೆಂದು ಈಗಾಗಲೇ ನನ್ನ ಮಿತ್ರರು ಕೆಲವರು ಹೇಳುತ್ತಿದ್ದರು. ಅವರಿಗೆ ವಿದ್ಯುಚ್ಛಕ್ತಿ ಸರಬರಾಯಿ ಮಾಡುವ ವಿಚಾರದಲ್ಲಿ ಒಂದು ಮಾತು. ವಿದ್ಯುಚ್ಛಕ್ತಿ ಯೋಜನೆ ಪ್ರಾರಂಭಿಸುವಾಗಲೇ ಸರ್ಕಾರದವರು

ಆ ರೀತಿ ಒಂದು ಒಪ್ಪಂದಕ್ಕೆ ಬರುವುದು ಸ್ವಾಭಾವಿಕವಾಗಿರುವಾಗ ಆ ಒಂದು ಸನ್ನಿವೇಶದಲ್ಲಿ ಈ ನಿರ್ಣಯ ತರುವುದು ಸಾಧುವೇ ಎಂದು ಅನುಮಾನ ಬರಬಹುದು. ಆದರೆ ಇದರ ಉದ್ದೇಶ ಸ್ಪಷ್ಟವಾಗಿದೆ. ಆ ದೃಷ್ಟಿಯಿಂದ ಮಾನ್ಯ ಸರ್ಕಾರದವರು ಒಂದು ಯೋಜನೆ ಮಾಡುತ್ತಾರೆಂದು ನಂಬುತ್ತೇನೆ. ಅಲ್ಲದೆ ಯಾವ ವಿಧದಲ್ಲೇ ಆಗಲಿ ಒಂದು ಒಪ್ಪಂದ ಮಾಡಿಕೊಂಡಿದ್ದರೂ ಕೂಡ ಸಂಸ್ಥಾನದ ಬೇಡಿಕೆಯನ್ನು ಪೂರೈಸಿದ ಮೇಲೆಯೇ ಬೇರೆಯವರಿಗೆ ಒದಗಿಸಬೇಕಾದದ್ದು ಧರ್ಮ ಎಂಬುದನ್ನು ನಾನು ಮೊದಲನೆಯದಾಗಿ ಸರ್ಕಾರದಲ್ಲಿ ತಿಳಿಸಬೇಕಾಗಿದೆ. ಇಷ್ಟು ಹೇಳಿ ಸರ್ಕಾರದ ಉತ್ತರವನ್ನು ನಿರೀಕ್ಷಿಸುತ್ತಾ ಈ ನಿರ್ಣಯವನ್ನು ಈ ಸಭೆಯಲ್ಲಿ ಮಂಡಿಸುತ್ತೇನೆ.

**ಅಧ್ಯಕ್ಷರು** :- ನಿರ್ಣಯ ಮಂಡಿಸಲಾಯಿತು.

ಶ್ರೀ ಎಂ. ಸಿ. ಆಂಜನೇಯುರೆಡ್ಡಿಯವರು (ಚಿಂತಾಮಣಿ) :- ಸ್ವಾಮಿ, ಈಗ ನಮ್ಮ ಮಿತ್ರರಾದ ಶ್ರೀ ನರಸಿಂಹರೆಡ್ಡಿಯವರು ತಂದಿರತಕ್ಕ ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯುಚ್ಛಕ್ತಿಯನ್ನೊದಗಿಸಬೇಕೆಂಬ ನಿರ್ಣಯವನ್ನು ಸಮರ್ಥನೆ ಮಾಡುತ್ತಾ ಕೆಲವಂಶಗಳನ್ನು ತಮ್ಮೆದುರಿನಲ್ಲಿಡಬೇಕೆಂದು ಆಶಿಸುತ್ತೇನೆ. ನೀರಾವರಿ ಪಂಪುಗಳಿಗೆ ವಿದ್ಯುಚ್ಛಕ್ತಿಯನ್ನೊದಗಿಸುವುದನ್ನೂ ನಮ್ಮ ದೇಶಕ್ಕೆ ಅದರಿಂದ ಎಷ್ಟು ಅನುಕೂಲವಾಗುತ್ತದೆಂಬುದನ್ನು ಇದುವರೆಗೆ ಅನೇಕ ಮಿತ್ರರು ಹೇಳಿರುತ್ತಾರೆ. ಆದರೂ ನಾನು ಕೂಡ ಈ ವಿಷಯವನ್ನು ಸ್ವಲ್ಪ ಒತ್ತಿ ಹೇಳಬೇಕೆಂದು ಇಚ್ಛಿಸುತ್ತೇನೆ. ಚಿಂತಾಮಣಿ ತಾಲ್ಲೂಕಿನ ಎರಡು ಹೋಬಳಿಗಳಲ್ಲಿ (ಅಂದರೆ ಮಂಗನಹಳ್ಳಿ ಮತ್ತು ಚಿಲಕಲನೇರ್ಪು) ಸುಮಾರು ಒಂದು ಸಾವಿರ ಭಾವಿಗಳಿವೆ. ಈ ಭಾವಿಗಳಲ್ಲಿ ನೀರು 50-60 ಅಡಿಗಳ ಕೆಳಗೆ ಇದೆ. ಆ ಭಾವಿಗಳಲ್ಲಿ ಕಪಿಲೆಯಿಂದ ನೀರು ತೆಗೆದು ಬೆಳೆ ಬೆಳೆಯುವುದು ಎಷ್ಟು ಕಷ್ಟವೆಂಬುದನ್ನು ಸರ್ಕಾರದವರು ಯೋಜನೆ ಮಾಡಬೇಕು. ಒಂದು ಬೆಳೆ ತೆಗೆಯಲು ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು ಎತ್ತುಗಳನ್ನು ಕೊಳ್ಳಬೇಕಾಗುತ್ತದೆ. ಈ ರೀತಿಯಾಗಿ ಅನೇಕ ರೈತರಿಗೆ ಬಹಳವಾಗಿ ತೊಂದರೆಗಳಿವೆ. ಇಷ್ಟೇ ಅಲ್ಲದೆ ಈಗ ಕ್ಷಾಮಕ್ಕೀಡಾಗಿರುವ ಪ್ರದೇಶಗಳು ಬೇರೆ ಇರುವುದು ಎಲ್ಲರಿಗೂ ಗೊತ್ತೇ ಇದೆ. ನಮ್ಮ ಚಿಂತಾಮಣಿ ತಾಲ್ಲೂಕಿನಲ್ಲಿ ಎಲ್ಲ ಭಾವಿಗಳಿಗೂ ಸಹಾಯ ನೀಡಿದ್ದರೆ ಕ್ಷಾಮದ ಹೊಡೆತಕ್ಕೆ ಜನರು ಸಿಕ್ಕುತ್ತಿರಲಿಲ್ಲವೆಂದು ಖಂಡಿತವಾಗಿ ಹೇಳಬಲ್ಲೆ. ಏಕೆಂದರೆ ಚಿಂತಾಮಣಿ ತಾಲ್ಲೂಕಿನಲ್ಲಿ ಸಾವಿರಾರು ಎಕರೆಗಳಲ್ಲಿ ಕಪಿಲೆಯ ಮುಖಾಂತರ ಬೆಳೆಯಾಗುತ್ತಿದೆ. ಆದಕಾರಣ ಇದು ಬಹಳ ಮುಖ್ಯವಾಗಿ ಆಗಬೇಕಾದ ಕೆಲಸವೆಂಬುದನ್ನು ಸರ್ಕಾರದವರು ಗಮನಿಸಿ ಈ ಕೆಲಸವನ್ನು ಅತಿ ಜಾಗ್ರತೆಯಾಗಿ ಮಾಡಿಸಿಕೊಡಬೇಕೆಂದು ವಿನಯದಿಂದ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಈ ವಿಚಾರದಲ್ಲಿ ಅನೇಕ ಎಸ್ಟಿಮೇಟುಗಳು ಬಂದರೂ ಕೂಡ ವಿದ್ಯುಚ್ಛಕ್ತಿ ಸಾಮಾನು ಸಿಕ್ಕುವುದಿಲ್ಲ ಎಂದು ಸಾಧಾರಣವಾಗಿ ಮಂತ್ರಿಗಳಿಂದ ಜವಾಬು ಬರುತ್ತದೆ. ಈ ವಿಷಯದಲ್ಲಿ ಏನಾದರೂ ವಿಶೇಷ ಕಾರ್ಯಕ್ರಮ ಕೈಗೊಂಡು ಏಜೆನ್ಸಿ ಮುಖಾಂತರವೋ ಅಥವಾ ಪಾಶ್ಚಾತ್ಯ ದೇಶಗಳಿಗೆ ಒಬ್ಬ ಅಧಿಕಾರಿಯನ್ನು ಕಳುಹಿಸಿಕೊಟ್ಟೋ ಹೆಚ್ಚಾಗಿ ಸಾಮಾನುಗಳನ್ನು ತರುವುದಕ್ಕೆ ಏರ್ಪಾಡು ಮಾಡಿ ನಮ್ಮ ದೇಶವನ್ನು ಉದ್ಧಾರಮಾಡುವ ಯೋಜನೆಯನ್ನು ಬಹಳ ಜಾಗರೂಕತೆಯಿಂದ ಮಾಡಬೇಕೆಂದು ಪ್ರಾರ್ಥನೆ ಮಾಡುತ್ತೇನೆ. ಅಲ್ಲದೆ ಈ ವರ್ಷದ ಬಡ್ಜೆಟ್ಟಿನಲ್ಲಿ ವಿದ್ಯುಚ್ಛಕ್ತಿಗಾಗಿ ಹೆಚ್ಚು ಹಣ ಒದಗಿಸಿಲ್ಲವೆಂದು

ಕಂಡುಬಂದಿದೆ. ಆದರೆ ಬೇರೆ ಯಾವುದಾದರೂ ಬಾಬುಗಳಿಗೆ ಕಡಿಮೆಮಾಡಿ ಹೊಟ್ಟೆಗೆ ಹಿಟ್ಟು ಹಾಕುವ ಈ ಯೋಜನೆ ಬಹಳ ಮುಖ್ಯವೆಂಬುದನ್ನು ಗಮನಿಸಿ ಈ ವಿಷಯಕ್ಕೆ ಹೆಚ್ಚಾದ ಮುತುವರ್ಜಿ ವಹಿಸಬೇಕಾದದ್ದು ಅವಶ್ಯಕ. ಆದ್ದರಿಂದ ಮಾನ್ಯ ಮಂತ್ರಿಗಳು ಇದನ್ನು ಗಮನಿಸಿ ಬಹಳ ಸಹಾಯ ಮಾಡಬೇಕೆಂದು ಪ್ರಾರ್ಥನೆ ಮಾಡಿ ನನ್ನ ಭಾಷಣವನ್ನು ಮುಕ್ತಾಯ ಮಾಡುತ್ತೇನೆ.

**ಅಧ್ಯಕ್ಷರು** :- ಒಂದು ವಿಷಯವನ್ನು ಮಾನ್ಯ ಸದಸ್ಯರ ಗಮನಕ್ಕೆ ತರಬೇಕೆಂದು ಇಚ್ಛಿಸುತ್ತೇನೆ. ವಿದ್ಯುಚ್ಛಕ್ತಿ ದೀಪಗಳ ಅವಶ್ಯಕತೆಯನ್ನು ಕುರಿತು ಶ್ರೀಮಾನ್ ಶಿವನಂಜೇಗೌಡರು ನಿರ್ಣಯ ತಂದಿದ್ದಾರೆ. ನೀರಾವರಿ ಪಂಪುಗಳಿಗೆ ಬೇಕಾದ ವಿದ್ಯುಚ್ಛಕ್ತಿ ಅವಶ್ಯಕತೆಯನ್ನು ಕುರಿತು ಹನ್ನೊಂದನೇ ನಿರ್ಣಯ ಶ್ರೀಮಾನ್ ಧೀಮಂತ ನಾಯಕರು ತಂದಿದ್ದಾರೆ. ಇವೆರಡರ ಮೇಲೆಯೂ ಚರ್ಚೆಯಾಗಿದೆ. ಆದ್ದರಿಂದ ಆ ಎರಡು ನಿರ್ಣಯಗಳಲ್ಲಿ ನಮೂದಾಗಿರದೆ ಈ ನಿರ್ಣಯದಲ್ಲಿ ಮುಖ್ಯವಾಗಿ ಅಡಕವಾಗಿರುವ ಬೇರೆ ಅಂಶವನ್ನು ಮಾತ್ರ ಕುರಿತು ಮಾತನಾಡುವುದು ಸೂಕ್ತ.

**ಶ್ರೀ ಕೆ. ಪ್ರಭಾಕರ್‌ರವರು (ನೆಲಮಂಗಲ ಅನುಸೂಚಿತ ಜಾತಿಗಳು)** :- ಮಾನ್ಯ ಅಧ್ಯಕ್ಷರೆ, ಈ ನಿರ್ಣಯದಲ್ಲಿರತಕ್ಕ ಮೂಲ ತತ್ವಕ್ಕೆ ಒಂದು ಮೆಚ್ಚುಗೆಯನ್ನು ತೋರಿಸುತ್ತಾ, ಈ ನಿರ್ಣಯವನ್ನು ಅನುಮೋದಿಸುತ್ತಾ ಕೆಲವು ಮಾತುಗಳನ್ನು ಹೇಳಬೇಕಾಗುತ್ತದೆ. ನಮ್ಮ ಸಂಸ್ಥಾನದಲ್ಲಿ ಮೂಲಭೂತವಾಗಿ ಉತ್ಪನ್ನವಾಗತಕ್ಕ ವಿದ್ಯುಚ್ಛಕ್ತಿ ನಮ್ಮ ದೇಶಕ್ಕೆ ಸಾಕಾಗುವಷ್ಟು ಆಗಿ ಹೆಚ್ಚಾಗಿರುವಂಥದನ್ನು ಆಜುಬಾಜು ಸರ್ಕಾರಗಳಲ್ಲೆ ಮಾಡಿಕೊಂಡಿರತಕ್ಕ ಒಪ್ಪಂದದ ಮೇಲೆ ಅವರುಗಳಿಗೆ ಕೊಡುತ್ತಾ ಇದ್ದಾರೆ. ಅದು ಎಷ್ಟು ಎಂಬುದು ಇದಕ್ಕೆ ಅನ್ವಯವಾಗುವುದಿಲ್ಲ. ಈ ವಿದ್ಯುಚ್ಛಕ್ತಿಯನ್ನು ದೇಶದಲ್ಲಿ ಬಳಸುವಾಗ ಟ್ರಾನ್ಸ್‌ಫಾರ್ಮರ್ ಇಲ್ಲಾ ಅಂತಲೋ, ಮತ್ತೊಂದು ಕಾರಣದಿಂದಲೋ ಅದನ್ನು ಮುಂದುವರೆಸುವುದಕ್ಕೆ ಬದಲಾಗಿ ಹಿಂತೆಗೆಯುವುದಾಗಲೀ, ಬೇರೆ ಯಾವ ವಿಧದಲ್ಲಾದರೂ ಅಡ್ಡಿ ತರುವುದಾಗಲೀ ಒಪ್ಪತಕ್ಕ ಮಾತಲ್ಲ. ವಿದ್ಯುಚ್ಛಕ್ತಿ ಇಲಾಖೆ ಒಂದು ಲಾಭ ತರುವ ಇಲಾಖೆ. ಇದು ಸರ್ವರೂ ಒಪ್ಪತಕ್ಕ ಮಾತು. ವಿದ್ಯುಚ್ಛಕ್ತಿ ಉತ್ಪಾದನೆಯೇ ಕೈಗಾರಿಕೆಗಳನ್ನು ಬೆಳೆಸುವ ಒಂದು ಮಾರ್ಗ. ಆದ್ದರಿಂದ ಯಾವ ವಿಧವಾದ ಅಡಚಣೆ, ಆತಂಕ ತರುವುದು ಒಳ್ಳೆಯದಲ್ಲ ಎಂದು ತೀವ್ರವಾಗಿ ಹೇಳಬೇಕಾಗಿ ಬರುತ್ತದೆ. ಈ ಸಂದರ್ಭದಲ್ಲಿ ಹೊರಗೆ ವಿದ್ಯುಚ್ಛಕ್ತಿ ಕೊಡುವ ಉದ್ದೇಶ, ಅವರೊಂದಿಗೆ ಮಾಡಿಕೊಂಡಿರುವ ಒಪ್ಪಂದ, ಅದನ್ನು ಹೆಚ್ಚು ಕಡಿಮೆ ಮಾಡಬಹುದೇ ಎಂಬ ವಿಚಾರಗಳಿಗೆ ಉತ್ತರ ಕೊಡುವುದು ಅಸಂಭವ. ಒಪ್ಪಂದ ಆಗಿದೆ. ಅದನ್ನು ಕಲಕುವಹಾಗಿಲ್ಲ. ವಿದ್ಯುಚ್ಛಕ್ತಿ ಎಂಬುದನ್ನು ಮೂರು ಭಾಗವಾಗಿ ಮೂರು ದೃಷ್ಟಿಯಿಂದ ನೋಡುತ್ತಾ ಇದ್ದೇವೆ. ದೀಪ, ನೀರಾವರಿ ಈ ವಿಚಾರಗಳಲ್ಲಿ ಚರ್ಚೆಯಾಗಿದೆ ಎಂಬುದಾಗಿ ಒಂದು ಸಲಹೆ ಅಧ್ಯಕ್ಷರಿಂದ ಬಂದಿರುವುದರಿಂದ ಉಳಿದ ವಿಚಾರವನ್ನು ಮಾತ್ರ ಹೇಳಬೇಕಾಗಿದೆ. ನಮ್ಮ ದೇಶದಲ್ಲಿರತಕ್ಕ ಸಣ್ಣ ಪುಟ್ಟ ಕೈಗಾರಿಕೆಗಳನ್ನು ವಿದ್ಯುಚ್ಛಕ್ತಿ ಅಭಾವದಿಂದ ನಿಲ್ಲಿಸಿದ್ದೇವೆ ಎಂದು ಕೆಲವು ಮಿಲ್ಲುಗಳವರು ಅರ್ಧ ದಿನ ಕೆಲಸ ಮಾಡುತ್ತಾರೆ. ವಿದ್ಯುಚ್ಛಕ್ತಿ ಉತ್ಪನ್ನ ಕಡಿಮೆಯಾಗಿರುವುದರಿಂದ ಅದನ್ನು ರೆಗ್ಯುಲೇಟ್ ಮಾಡಬೇಕೆಂದು ಈ ರೀತಿ ಕಡಿಮೆ ಮಾಡಿರುವುದರಿಂದ ಕೈಗಾರಿಕೆಗೆ ಧಕ್ಕೆ ಬರುತ್ತದೆ. ಕೂಲಿಗಾರರಿಗೆ ಕೂಲಿ ಕಡಿಮೆಯಾಗುತ್ತದೆ. ಇತ್ಯಾದಿ ನಷ್ಟಗಳು ಉಂಟಾಗುತ್ತವೆ. ಆಗ ವಿದ್ಯುಚ್ಛಕ್ತಿ ಹೆಚ್ಚಾಗಿ ಉತ್ಪನ್ನ ಮಾಡಬೇಕಾದ ಪ್ರಮೇಯ ಬರುತ್ತದೆ. ಇದು ನಿರ್ವಿವಾದವಾದದು ಎಂದು ಸರ್ಕಾರದವರು ಒಪ್ಪಿಕೊಳ್ಳುತ್ತಾರೆ. ಒಂದುವೇಳೆ

ಅಮೇರಿಕಾದಂತಹ ದೂರ ದೇಶದಿಂದ ತರಿಸತಕ್ಕ ಕೆಲವು ಯಂತ್ರಗಳ ಅಭಾವದಿಂದ ಹೆಚ್ಚು ವಿದ್ಯುಚ್ಛಕ್ತಿಯನ್ನು ಒದಗಿಸುವುದಕ್ಕೆ ಒಂದೊಂದು ಸಲ ತೊಂದರೆಯಾಗುತ್ತದೆ ಎಂದರೆ ಒಂದು ಮಿತಿಯಲ್ಲಿ ನಮ್ಮ ಹತೋಟಿಗೆ ಮೀರಿದ ಸನ್ನಿವೇಶಗಳು, ಅದು ಸಹಜವಾಗಿ ಕಾಣುತ್ತದೆ. ಯಂತ್ರದ ಅಭಾವ ಎನ್ನುವುದು ಖೋತಾ ಬಡ್ಜೆಟ್ಟಿನ ದೃಷ್ಟಿಯಿಂದ ಒಪ್ಪಿಕೊಳ್ಳುವ ಮಾತಲ್ಲ. ಮೂಲಭೂತವಾಗಿ ವಿದ್ಯುಚ್ಛಕ್ತಿ ಉತ್ಪನ್ನ ಮಾಡುವುದನ್ನು ಕಡಿಮೆ ಮಾಡುವುದರಿಂದ ದುಶ್ಪರಿಣಾಮ ನಾನಾ ರೀತಿಯಲ್ಲಿ ಉಂಟಾಗುವುದರಿಂದ ಅದನ್ನು ಹೆಚ್ಚಾಗಿ ಉತ್ಪತ್ತಿ ಮಾಡಲೇಬೇಕು. ಆದ್ದಗಿಂದ ಸರ್ಕಾರದವರಿಗೆ ಸಲಹೆ ಮಾಡುವುದೇನೆಂದರೆ ಬಡ್ಜೆಟ್ ಡಿಫಿಸಿಟ್ ಆಗಿರುವುದನ್ನು ತೋರಿಸಿ ವಿದ್ಯುಚ್ಛಕ್ತಿ ಉತ್ಪತ್ತಿ ಮಾಡುವುದನ್ನು ಕಡಿಮೆ ಮಾಡಬಾರದು. ಆ ರೀತಿ ಮಾಡಿದ್ದೇ ಆದರೆ ಅದರ ದುಷ್ಪರಿಣಾಮ ಸಂಸ್ಥಾನದಲ್ಲೂ ಮತ್ತು ಹೊರಗಡೆಯೂ ನಾನಾ ರೀತಿಯಲ್ಲಿ ಉಂಟಾಗುವುದರಲ್ಲಿ ಸಂದೇಹವಿಲ್ಲ. ನೀರಾವರಿ ಮತ್ತು ದೀಪಗಳಿಗೆ ವಿದ್ಯುಚ್ಛಕ್ತಿ ವಿಚಾರ ಚರ್ಚೆಯಾಗಿದೆ ಎಂದು ಕೇಳಿದರೂ ಕೂಡ ಈ ಸಂದರ್ಭದಲ್ಲಿ ಅನಿವಾರ್ಯವಾಗಿ ಸಂಬಂಧಪಟ್ಟ ಮತ್ತೊಂದು ಅಂಶವನ್ನು ಹೇಳಬೇಕಾಗಿದೆ. ನಮ್ಮ ದೇಶದಲ್ಲಿರುವ ಆಹಾರದ ಅಭಾವವನ್ನು ನೀಗುವಂತೆ ಭಾವಿಗಳನ್ನು ತೋಡಿಸಿಕೊಂಡು ಹೆಚ್ಚು ಬೆಳೆ ಬೆಳೆಯಲು ಸರ್ಕಾರದವರು ಹಣವನ್ನು ಸಾಲದ ರೂಪವಾಗಿ ಕೊಟ್ಟಿದ್ದಾರೆ. ಅಲ್ಲದೆ ವಿದ್ಯುಚ್ಛಕ್ತಿಯನ್ನು ಒದಗಿಸಿ ಪಂಪುಗಳನ್ನು ಹಾಕಿಕೊಂಡು ನೀರು ಹಾಯಿಸಲು ಅನುಕೂಲ ಮಾಡಿಕೊಟ್ಟಿದ್ದಾರೆ. ಈ ರೀತಿ ಸೌಕರ್ಯ ಒದಗಿಸಿಕೊಟ್ಟು ಆಹಾರದ ಅಭಾವವು ನೀಗಿ ಎಂಬ ಸಂದೇಶವನ್ನು ಕೊಟ್ಟಿದ್ದಾರೆ. ಆದರೆ ಅನೇಕ ಸಂದರ್ಭಗಳಲ್ಲಿ ಈ ಸಂಬಂಧವಾಗಿ ಸಾಲ ಪಡೆದವರು ಬಜೆ, ಬಾಳೆ, ಕಬ್ಬು ಮುಂತಾದವುಗಳನ್ನು ಬೆಳೆದು ಆಹಾರಧಾನ್ಯಗಳ ಅಭಾವವು ಅಳಿಯದಂತೆ ಮಾಡಿದ್ದಾರೆ. ಆದ್ದರಿಂದ ವಿದ್ಯುಚ್ಛಕ್ತಿಯನ್ನು ಕೊಡುವಾಗ ತೆಗೆದುಕೊಂಡವರು ಅದನ್ನು ಬೇರೆ ರೂಪದಲ್ಲಿ ಉಪಯೋಗಿಸದಂತೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕಾದ ಪ್ರಮೇಯ ಈಗ ಇದೆ.

ಸಂಸ್ಥಾನದಲ್ಲಿ ವಿದ್ಯುಚ್ಛಕ್ತಿಗೆ ಡಿಮ್ಯಾಂಡ್ ಯಾವ ವಿಧದಲ್ಲೂ ಕಡಿಮೆಯಾಗುವುದಕ್ಕೆ ಕಾರಣವಿಲ್ಲ ಎಂಬುದು ಸರ್ಕಾರದವರಿಗೆ ಗೊತ್ತಿದ್ದರೂ ಕೂಡ ಅನಿವಾರ್ಯವಾದ ಸಂದರ್ಭಗಳಲ್ಲಿ ಒಂದು ನಿಗದಿಯಾದ ಪ್ರಮಾಣದಲ್ಲೇ ಉತ್ಪನ್ನ ಮಾಡಬೇಕಾಗಿ ಬರುತ್ತದೆ. ಈ ರೂಪದಲ್ಲಿರತಕ್ಕ ನಿರ್ಣಯವನ್ನು ಅನುಮೋದಿಸುತ್ತಾ ನಮ್ಮ ಮಿತ್ರರು ತಂದಿರತಕ್ಕ ಈ ಸಲಹೆಯನ್ನು ಒಪ್ಪಿಕೊಳ್ಳುವುದು ಸೂಕ್ತ. ಸಂಸ್ಥಾನದಿಂದ ಹೊರಗೆ ಕೊಡುವ ವಿದ್ಯುಚ್ಛಕ್ತಿಯನ್ನು ಕೊಂಚ ಕಡಿಮೆ ಮಾಡಿ ನಮ್ಮ ದೇಶಕ್ಕೆ ಕಡಿಮೆಯಾಗಿರುವುದನ್ನು ಮೇಕಪ್ ಮಾಡಿ ಎಂಬ ಒಂದು ವಾಣಿಯನ್ನು ಎತ್ತಿದ್ದಾರೆ. ಆ ರೀತಿ ಈಗ ಮಾಡುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ವಿದ್ಯುಚ್ಛಕ್ತಿ ಹೆಚ್ಚು ಉತ್ಪನ್ನ ಮಾಡುವುದಕ್ಕೆ ವರ್ಷೇ ವರ್ಷೇ ಯಾವ ವಿಧವಾದ ಅಡ್ಡಿಯನ್ನು ತಂದುಹಾಕದೆ ತೀವ್ರ ಕಾರ್ಯಕ್ರಮ ಕೈಗೊಳ್ಳಬೇಕು. ವಿದ್ಯುಚ್ಛಕ್ತಿಯ ವಿನಿಯೋಗದ ಬಗ್ಗೆ ಮೂರು ಮಾರ್ಗಗಳನ್ನು ಸೂಚನೆ ಮಾಡಿದ್ದಾರೆ. (i) ಸಣ್ಣಪುಟ್ಟ ಕೈಗಾರಿಕೆಗಳು :(ii) ದೀಪ ಮತ್ತು (iii) ನೀರಾವರಿ ಕೆಲಸಗಳು. ದೀಪಕ್ಕೆ ವಿದ್ಯುಚ್ಛಕ್ತಿ ಒದಗಿಸಿದಾಗ ಅದನ್ನು ಬೇರೆ ಬಾಬುಗಳಿಗೆ ವಿನಿಯೋಗಿಸತಕ್ಕ ಪ್ರಮೇಯವಿಲ್ಲ. ಪಂಪು ಮುಂತಾದ ನೀರಾವರಿ ಕೆಲಸಗಳಿಗೆ ಹೆಚ್ಚಾಗಿ ಕೊಡಬೇಕಾಗುತ್ತದೆ. ಆದರೆ ವಿದ್ಯುಚಕ್ತಿಯನ್ನು ತೆಗೆದುಕೊಂಡು ಕೆಲಸ ಮಾಡಿಸತಕ್ಕವರು ಸಾಮಾನ್ಯವಾಗಿ ಧನಿಕರಾಗಿರುತ್ತಾರೆ. ಬಡವರು

ವಿದ್ಯುಚ್ಛಕ್ತಿ ತೆಗೆದುಕೊಂಡು ಬೇಸಾಯವನ್ನಾಗಲಿ ಇತರ ಕೈಗಾರಿಕೆಯನ್ನಾಗಲಿ ನಡೆಸತಕ್ಕ ಸ್ಥಿತಿಯಲ್ಲಿರುವುದಿಲ್ಲ. ಆದ್ದರಿಂದ ಒಂದುಕಡೆ (i) ವಿದ್ಯುಚ್ಛಕ್ತಿಯನ್ನು ಹೆಚ್ಚಾಗಿ ಉತ್ಪನ್ನ ಮಾಡತಕ್ಕ ಪ್ರಮೇಯ (ii) ಉತ್ಪನ್ನ ಮಾಡಿದುದನ್ನು ನ್ಯಾಯವಾಗಿ ಕೊಡತಕ್ಕ ಪ್ರಮೇಯ (iii) ಕೊಟ್ಟಮೇಲೆ ಅದು ಸರಿಯಾಗಿ ವಿನಿಯೋಗವಾಗುತ್ತದೆಯೇ ಎಂಬುದನ್ನು ನೋಡಿಕೊಳ್ಳತಕ್ಕ ಪ್ರಮೇಯ - ಇವುಗಳನ್ನೆಲ್ಲ ಸರ್ಕಾರದವರು ಗಮನಿಸಬೇಕೆಂದು ಹೇಳಿ ಈ ನಿರ್ಣಯವನ್ನು ಅನುಮೋದಿಸುತ್ತಾ ನನ್ನ ಮಾತನ್ನು ಮುಗಿಸುತ್ತೇನೆ".

**ನಿರ್ಣಯದ ಮೇಲಿನ ಚರ್ಚೆಗೆ ಕೈಗಾರಿಕಾ ಸಚಿವ ಸಿದ್ದಲಿಂಗಯ್ಯನವರ ಸರಳ: ಪರಿಣಾಮಕಾರಿ ಉತ್ತರ:**

"**ಶ್ರೀ ಟಿ. ಸಿದ್ದಲಿಂಗಯ್ಯನವರು :-** ಅಧ್ಯಕ್ಷರೇ, ಈ ನಿರ್ಣಯದ ಮೂಲೋದ್ದೇಶದ ವಿಚಾರವಾಗಿ ಸಂದೇಹಕ್ಕೆ ಕಾರಣವೇ ಇಲ್ಲ. ಆ ದೃಷ್ಟಿಯಿಂದ ನೋಡುವುದಾದರೆ ಈ ನಿರ್ಣಯದ ಅವಶ್ಯಕತೆಯೇ ಇರಲಿಲ್ಲವೆಂಬುದನ್ನು ನಾನು ಹೇಳುತ್ತೇನೆ. ಏಕೆಂದರೆ, ಯಾರಿಗಾದರೂ ಸರಿಯೇ, ಮೈಸೂರು ದೇಶದ ಎಲೆಕ್ಟ್ರಿಕ್ ಪವರನ್ನು ಮೈಸೂರು ದೇಶದವರಿಗೆ ತಪ್ಪಿಸಿ ಹೊರಗೆ ಕೊಡಬೇಕೆಂದು ನೀವು ಉದ್ದೇಶವಿಟ್ಟುಕೊಂಡಿದ್ದೇವೆಂದು ಸಂದೇಹವೇಕೆ ಬಂತೆಂದು ನಾನು ಕೇಳುತ್ತೇನೆ. ನಮ್ಮ ದೇಶಕ್ಕೆ ಬೇಕಾದಷ್ಟು ವಿದ್ಯುಚ್ಛಕ್ತಿ ಸರಬರಾಜು ಈಗಲೂ ಇದೆ. ಹೆಚ್ಚಾಗಿರುವುದನ್ನು ಮಾತ್ರ ಪರಪ್ರಾಂತ್ಯಗಳವರಿಗೆ ಮಾರುವುದರಿಂದ ಹೆಚ್ಚಿಗೆ ಲಾಭ ಬರುವ ಹಾಗಿದ್ದರೆ ಮಾರುತ್ತೇವೆಯೇ ಹೊರತು ಇಲ್ಲದಿದ್ದರೆ ಇಲ್ಲ. ಈಗ ಕೆಲವು ಕಡೆಗೆ ಸರಬರಾಜು ಮಾಡುವುದಕ್ಕೆ ರೆಫ್ಯೂಸ್ ಮಾಡಿದ್ದಾರೆಂದು ಹೇಳಿದ್ದಕ್ಕೆ ಹಿಂದೆಯೇ ಅನೇಕ ಸಾರಿ ಉತ್ತರ ಹೇಳಿದ್ದೇವೆ. ನಿಜ, ಬೆಂಗಳೂರು ಸಿಟಿಯಲ್ಲಿ ಕೆಲವು ಕೈಗಾರಿಕೆಗಳಿಗೆ ಪವರ್ ಕಟ್ ಮಾಡಿದ್ದೇವೆ, ಪವರ್ ಇಲ್ಲ ಎಂದು. ಇದಕ್ಕೆ ಕಾರಣ ಇಷ್ಟೆ. ನಮ್ಮಲ್ಲಿ 50 ಸೈಕಲ್‌ನಲ್ಲಿ ಈಗಲೂ ಬೇಕಾದಷ್ಟು ಪವರ್ ಇದೆ. ಆದರೆ ಈಗ ಬೇಕಾದ ಕನ್ವರ್ಟಿಂಗ್ ಆಪರೇಟಸ್ ಅಥವಾ ಮೋಟಾರುಗಳು ಸಿಕ್ಕುತ್ತಿಲ್ಲ. ಆದ್ದರಿಂದ ಶಿವನ ಸಮುದ್ರದಿಂದ ಬರುವ 25 ಸೈಕಲ್ ಪವರವನ್ನು ಕಟ್ ಮಾಡಬೇಕಾಗಿದೆ. ಈ 25 ಸೈಕಲ್ ಪವರ್ ಈಗ ಒದಗಿಸುತ್ತಿರುವುದು ಚಿನ್ನದ ಗಣಿ, ಬೆಂಗಳೂರಿನಲ್ಲಿರುವ ಅರ್ಧ ಮುಕ್ಕಾಲು ಯಂತ್ರ ಕೈಗಾರಿಕೆಗಳಿಗೆ ಸಂಬಂಧಪಟ್ಟಿದೆ. ಇದನ್ನು 50 ಸೈಕಲ್‌ಗೆ ಕನ್‌ವರ್ಟ್ ಮಾಡಿದ್ದಾಗ್ಗೆ ನಗವು ಯಾವತ್ತಿಗೂ ಕಟ್ ಮಾಡಬೇಕಾಗಿರುವುದಿಲ್ಲವೆಂದು ಹೇಳಬಹುದು. ವಿದ್ಯುಚ್ಛಕ್ತಿ ಉತ್ಪತ್ತಿಯನ್ನು ಒಂದು ದೊಡ್ಡ ಕೈಗಾರಿಕೆಯೆಂದು ಬೇಕಾದರೂ ನಾವು ಭಾವಿಸಬಹುದು. ಅದೇ ನೀತಿಯನ್ನು ಸರ್ಕಾರದವರು ಈ ಬಗ್ಗೆ ಅನುಸರಿಸುತ್ತಿದ್ದಾರೆ. ಹೆಚ್ಚೆಚ್ಚು ವಿದ್ಯುಚ್ಛಕ್ತಿ ಉತ್ಪತ್ತಿ ಮಾಡಬೇಕೆಂದೇ ಹೊನ್ನೆ ಮರಡು, ಶಿಂಷಾ, ಮೇಕೆದಾಟು - ಇವುಗಳ ಕಾರ್ಯವನ್ನು ಕೈಗೊಳ್ಳಬೇಕೆಂದು ಸರ್ಕಾರದವರ ಉದ್ದೇಶವಾಗಿದೆ. ಆದ್ದರಿಂದ ಈ ಒಂದು ಸಂದೇಹವನ್ನು ಇನ್ನೂ ಯಾರು ಇಟ್ಟುಕೊಳ್ಳಬೇಕಾದ ಕಾರಣವಿಲ್ಲ. ಪ್ರತಿಯೊಬ್ಬ ಮೈಸೂರಿನವರ ಪವಿತ್ರ ಧ್ಯೇಯವು ಇದೇ ಆಗಿದೆ. ಸರ್ಕಾರದವರಿಗೆ ಅಂಥಾ ಧ್ಯೇಯ ಇಲ್ಲವೆಂದು ಹೇಳುವುದಕ್ಕೇನು ಕಾರಣವಿಲ್ಲ. ಈ ದೃಷ್ಟಿಯಲ್ಲಿ ಈ ನಿರ್ಣಯವು ಅನಾವಶ್ಯಕವಾಗಿತ್ತೆಂದು ನಾನು ಭಾವಿಸುತ್ತೇನೆ. ಇದಕ್ಕಿಂತ ಹೆಚ್ಚಿಗೆ ಭರವಸೆಯನ್ನೇನೂ ನಾನು ಹೇಳಬೇಕಾಗಿಲ್ಲವೆಂದು ಕಾಣುತ್ತದೆ. "ರಾಜ್ಯಕ್ಕೆ ಮೊದಲು, ನಂತರವೇ ಇತರರಿಗೆ" ಎಂಬ ಮೂಲ ತತ್ವವನ್ನು ನಾವೆಲ್ಲರೂ ಪಾಲಿಸುತ್ತೇವೆಂದು ಒಮ್ಮತದಿಂದ

ಒಪ್ಪೋಣ, ಎಂದು ಹೇಳಿ ಮಾನ್ಯ ಸದಸ್ಯರು ಈ ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ.

ಶ್ರೀ ಎಂ. ಪಳನಿಯಪ್ಪನವರು :- ಒಂದು ವಿಷಯ ತಿಳಿದುಕೊಳ್ಳಬೇಕು ಈಗ ಸರ್ಕಾರದವರು ಯಾವಯಾವ ಪ್ರಾಂತ್ಯಗಳಿಗೆ ವಿದ್ಯುಚ್ಛಕ್ತಿ ಒದಗಿಸುತ್ತಿದ್ದಾರೆಂಬುದನ್ನು ಹೇಳುತ್ತಾರೆಯೇ?

ಶ್ರೀ ಸಿದ್ದಲಿಂಗಯ್ಯನವರು :- ನಮಗೆ ಸರ್‌ಪ್ಲಸ್ ಆಗಿದ್ದರೆ ಇತರರಿಗೆ ಮಾರುತ್ತೇವೆಯೇ ಹೊರತು ನಮಗೆ ಇಲ್ಲದ ಹಾಗೆ ಮಾಡಿಕೊಂಡು ಹೊರಗಡೆ ಮಾರುತ್ತಿಲ್ಲ.

ಶ್ರೀ ಎಂ. ಪಳನಿಯಪ್ಪನವರು :- ಸರ್ಕಾರ ಈಗ ಮೈಸೂರು ರಾಜ್ಯದಿಂದ ಹೊರಗಿರುವ ಪ್ರದೇಶಗಳಿಗೂ ವಿದ್ಯುತ್ ಸರಬರಾಜು ಮಾಡುತ್ತಿದೆಯೋ ಎಂದು ನಾನು ತಿಳಿಯಬಯಸುತ್ತೇನೆ.

ಶ್ರೀ ಟಿ. ಸಿದ್ದಲಿಂಗಯ್ಯ :- ಇದು ಪ್ರಸ್ತುತ ವಿಷಯದಲ್ಲಿ ಬರುವುದಿಲ್ಲ ಆದರೂ ಸಭಾಪತಿಯವರು ಆದೇಶಿಸಿದರೆ ನಾನು ಉತ್ತರ ಕೊಡುತ್ತೇನೆ.

ಅಧ್ಯಕ್ಷರು :- ಹಾಗೆಲ್ಲಾದರೂ ಕೊಟ್ಟಿದ್ದಾರೆಯೇ, ಇದ್ದರೆ ಹೇಳಬಹುದು.

ಶ್ರೀ ಟಿ. ಸಿದ್ದಲಿಂಗಯ್ಯನವರು :- ಈಗ ಹಿಂದೂಪುರಕ್ಕೆ ಕೊಳ್ಳೇಗಾಲಕ್ಕೆ ಕೊಟ್ಟಿದೆ. ಸೌತ್ ಕೆನರಾಕ್ಕೆ ಸರಬರಾಜು ಮಾಡುವಬಗ್ಗೆ ಅಗ್ರಿಮೆಂಟ್ ಇನ್ನೂ ಪೂರ್ತಿಯಾಗಿಲ್ಲ. [ಬೊಂಬಾಯಿಗೂ] ಅಷ್ಟೆ. ಇನ್ನೂ ಸ್ವಲ್ಪ ಕಾಲದಲ್ಲೇ ಅಗ್ರಿಮೆಂಟು ಫೈನಲೈಸ್ ಆಗಬಹುದು. ಕೊಡಗಿಗೆ ಕೊಡಬೇಕೆಂಬ ವಿಷಯವು ಪರ್ಯಾಯ ಪರ್ಯಾಲೋಚನೆಯಲ್ಲಿ ಇದೆ. ಇನ್ನೂ ಅಗ್ರಿಮೆಂಟು ಫೈನಲೈಸು ಆಗಿಲ್ಲ.

ಶ್ರೀ ಎ. ಬಿ. ನರಸಿಂಹರೆಡ್ಡಿಯವರು :- ಮಾನ್ಯ ಮಂತ್ರಿಗಳು ಕೊಟ್ಟು ಭರವಸೆಯ ಮೇಲೆ ಈ ನಿರ್ಣಯವನ್ನು ವಾಪಸ್ಸು ಪಡೆಯಲು ಸಭೆಯ ಅನುಮತಿಯನ್ನು ಬೇಡುತ್ತೇನೆ".

(ನಿರ್ಣಯವನ್ನು ವಾಪಸ್ಸು ಪಡೆಯಲಾಯಿತು)

## ರಾಜ್ಯದ ಎಲ್ಲಾ ಪೌರಸಮಿತಿಗಳಿಗೆ ವಿದ್ಯುಚ್ಛಕ್ತಿ ಒದಗಿಸುವ ಕುರಿತಾದ ಚರ್ಚೆ

ಎಲ್ಲ ಅಭಿವೃದ್ಧಿ ಕಾರ್ಯಗಳಿಗೂ ಮೂಲಭೂತ ಸೌಕರ್ಯವಾದ ವಿದ್ಯುಚ್ಛಕ್ತಿಗಾಗಿ ಸ್ವರಾಜ್ಯದ ಉಗಮ ದಿಶೆಯಲ್ಲಿದ್ದ ಅಪರಿಮಿತವಾದ ಬೇಡಿಕೆ ಅದನ್ನು ಒದಗಿಸಲು ಸರ್ಕಾರಕ್ಕಿದ್ದ ಕಾತರ, ಕಳಕಳಿಗೆ ಅಂಟಿಕೊಂಡಂತೆಯೇ ಇದ್ದ ಆರ್ಥಿಕ ಹಾಗೂ ಇನ್ನಿತರ ತೆರನ ಇತಿಮಿತಿಗಳ ಪ್ರಾಮಾಣಿಕ ಚಿತ್ರಣವನ್ನೊದಗಿಸುವ ಪ್ರಮುಖ ಚರ್ಚೆಗಳ ಮಾದರಿ ಇಲ್ಲಿದೆ.

"ಶ್ರೀ ಪಿ. ಸೀತಾರಾಮಯ್ಯನವರು :- ಸ್ವಾಮಿ, ನಮ್ಮ ಮೈಸೂರು ಸಂಸ್ಥಾನ ಮಳೆ ವಿದ್ಯುಚ್ಛಕ್ತಿಯನ್ನು ಒದಗಿಸುವುದಕ್ಕೆ ಪ್ರಾರಂಭವಾಗಿ ಎಷ್ಟು ವರ್ಷವಾಗಿರಬಹುದು? ನನಗೆ ತಿಳಿದಮಟ್ಟಿಗೆ 1902ರಿಂದಲೂ ಪ್ರಾರಂಭವಾಗಿರುತ್ತದೆಂದು ಹೇಳಿದರೆ ತಪ್ಪಾಗಲಾರದಲ್ಲವೆ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಪ್ರಶ್ನೆ ಮತ್ತು ಅದಕ್ಕೆ ಬೇಕಾದ ಉತ್ತರ, ಎರಡನ್ನೂ ಮಾನ್ಯ ಸದಸ್ಯರೇ ಕೊಟ್ಟಿದ್ದಾರೆ.

ಶ್ರೀ ಪಿ. ಸೀತಾರಾಮಯ್ಯನವರು :- (ಸಿ) ಪ್ರಶ್ನೆಗೆ ಒದಗಿಸಿರತಕ್ಕ ಉತ್ತರದ ಪ್ರಕಾರ ತಾವೇಕೆ 24 ಟೌನ್ ಮುನ್ಸಿಪಾಲಿಟಿಗಳಿಗೆ ಇನ್ನೂ ವಿದ್ಯುಚ್ಛಕ್ತಿಯನ್ನು ಒದಗಿಸಿಲ್ಲ. ಕಾರಣವೇನು?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಎಲ್ಲಾ ಕಡೆಗೂ ವಿದ್ಯುಚ್ಛಕ್ತಿಯನ್ನು ಹಾಕಬೇಕೆಂಬುದೇ ಸರ್ಕಾರದವರ ಉದ್ದೇಶ. ಬಹಳ ಉದಾರವಾಗಿ ಎಲ್ಲ ಕಡೆಗೂ ಕೊಡುತ್ತಿದ್ದೇವೆ. ಆದರೆ ಹಣದ ಅಭಾವದಿಂದ ಕೆಲಸಗಳನ್ನು ಮುಂದುವರೆಸಲು ಸಾಧ್ಯವಿಲ್ಲದೆ ಕೈ ಬಿಡಲಾಗಿದೆ.

ಶ್ರೀ ಪಿ. ಸೀತಾರಾಮಯ್ಯನವರು :- ಈ 82 ತಾಲ್ಲೂಕುಗಳಿಗೆ ಒದಗಿಸತಕ್ಕ ಸಂಬಂಧದಲ್ಲಿ ಮನೆಗಳಲ್ಲಿ ಬೆಳಕಿಗಾಗಿ ಕೊಟ್ಟಿರತಕ್ಕ ಬಗ್ಗೆ ಅದರಿಂದ ಲಾಭದಾಯವಾಗಿರುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಕೆಲವು ಕಡೆ ಲಾಭದಾಯಕವಾಗಿದೆ. ಇನ್ನು ಕೆಲವು ಕಡೆ ಲಾಭದಾಯಕವಾಗಿಲ್ಲ.

ಶ್ರೀ ಪಿ. ಸೀತಾರಾಮಯ್ಯನವರು :- ಹೀಗೆ ಈ ಮನೆಗಳಿಗೆ ಬೆಳಕಿಗಾಗಿ ಒದಗಿಸುವ ಸಂದರ್ಭದಲ್ಲೇ ಕೆಲ ಕೆಲವು ಕೈಗಾರಿಕೆಗಳಿಗೂ ವಿದ್ಯುಚ್ಛಕ್ತಿಯನ್ನು ಕೊಡಲಾಗಿದೆಯಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಅನೇಕ ಕಡೆ ಕೊಡಲಾಗಿದೆ.

ಶ್ರೀ ಪಿ. ಸೀತಾರಾಮಯ್ಯನವರು :- ಅಗ್ರಿಕಲ್ಚರಲ್ ಪರ್‌ಪಸ್‌ಗೂ ಕೂಡ ಕೊಡಲಾಗುತ್ತಿದೆಯಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ವ್ಯವಸಾಯದ ಬಾಬಿನಲ್ಲಿ ಹೆಚ್ಚು ಆಹಾರ ಬೆಳೆಯ ಬೇಕೆಂಬ ಯೋಜನೆಯ ಸಂಬಂಧದಲ್ಲಿ ಹೆಚ್ಚು ಬೆಳೆ ಬೆಳೆಯುವುದಕ್ಕೆ ಕೂಡ ವಿದ್ಯುಚ್ಛಕ್ತಿಯನ್ನು ಒದಗಿಸಿದ್ದೇವೆ. ಅಂತಹ ಸಂದರ್ಭಗಳಲ್ಲಿ ನಷ್ಟವಾದರೂ ಅದನ್ನು ಲೆಕ್ಕ ತೆಗೆದುಕೊಳ್ಳುತ್ತಿಲ್ಲ.

ಶ್ರೀ ಪಿ. ಸೀತಾರಾಮಯ್ಯನವರು :- 57 ಲಕ್ಷ 87 ಸಾವಿರದ 500 ರೂಪಾಯಿಗಳಲ್ಲಿ ಅನೇಕ ಗ್ರಾಮ ಪಂಚಾಯತಿಗಳಿಗೆಲ್ಲ ಲೈಟನ್ನು ಕೊಡುವುದಕ್ಕಾಗುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಆದಷ್ಟು ಕಡಿಮೆ ಖರ್ಚಿನಲ್ಲಿ ಹೆಚ್ಚು ಸ್ಥಳಗಳಿಗೆ ಈ ಲೈಟನ್ನು ಒದಗಿಸಬೇಕೆಂದು ಪರಿಶೀಲನೆ ಮಾಡುತ್ತಿದ್ದೇನೆ.

ಶ್ರೀ ಪಿ. ಸೀತಾರಾಮಯ್ಯನವರು :- ಈ ಪವರ್ ಉತ್ಪತ್ತಿಯಲ್ಲೇನಾದರೂ ತೊಂದರೆ ಬಂದಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಅನೇಕ ಸ್ಥಳಗಳಿಗೆ ಕೊಡಬಹುದು. ಆದರೆ ಹಣದ ಅಭಾವದಿಂದ ಹಾಗೆ ಕೊಡಲು ಆಗಲಿಲ್ಲ.

ಶ್ರೀ ಪಿ. ಸೀತಾರಾಮಯ್ಯನವರು :- ಈ ವಿದ್ಯುಚ್ಛಕ್ತಿಯನ್ನು ಕೊಡತಕ್ಕ ಸಂದರ್ಭಗಳಲ್ಲೆಲ್ಲ ಶೇಕಡ ಹತ್ತರಂತೆ ಆದಾಯ ಬರಲೇಬೇಕೆಂದು ಮಾಡಿಕೊಂಡಿದ್ದ ನಿಯಮವನ್ನು ಈಗ ಮನ್ನಾ ಮಾಡಿದ್ದೀರಾ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಹಾಗೆ 10.9 ಪರ್ಸೆಂಟ್ ಇರತಕ್ಕದ್ದನ್ನು ಗಮನಕ್ಕೆ ತೆಗೆದುಕೊಳ್ಳದೆ ಕೆಲವು ಕಡೆ ಎರಡು ಪರ್ಸೆಂಟ್ ಆದಾಯ ಬರುತ್ತಿರುವ ಕಡೆಗಳಿಗೂ ಸಹ ಕೊಡಲಾಗಿದೆ.

ಶ್ರೀ ಪಿ. ಸೀತಾರಾಮಯ್ಯನವರು :– ಆ ರೀತಿ ರೂಲ್ಸಿನಲ್ಲಿ ಬದಲಾವಣೆಯಾಗಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಇರಿಗೇಶನ್ ಪರ್ಪಸಸ್ ಮಾತ್ರ ಈ ರಿಯಾಯತಿ ಕೊಡಬಹುದು.

ಶ್ರೀ ಪಿ. ಸೀತಾರಾಮಯ್ಯನವರು :– ಸಾಲಿಗ್ರಾಮ ಮತ್ತು ಮಿರ್ಲೆ ಇತ್ಯಾದಿ ಗ್ರಾಮಗಳಿಗೆ ಈ ವಿದ್ಯುಚ್ಛಕ್ತಿ ಸರಬರಾಯಿ ಬಗ್ಗೆ ಸರ್ಕಾರಕ್ಕೆ ಮನವಿಗಳೇನಾದರೂ ಬಂದಿರುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಬಂದಿರಬಹುದು.

ಶ್ರೀ ಪಿ. ಸೀತಾರಾಮಯ್ಯನವರು :- ಆದಷ್ಟು ಬೇಗ ಈಗ ತಯಾರಾಗಿರುವ ಅಂದಾಜುಗಳನ್ನು ಮಂಜೂರು ಮಾಡಲಾಗುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಸಾಧ್ಯವಾದಷ್ಟು ಬೇಗ ಮಾಡಲಾಗುತ್ತೆ.

ಶ್ರೀ ಪಿ. ಸೀತಾರಾಮಯ್ಯನವರು :– ಡೆವಲಪ್‌ಮೆಂಟ್ ಯೋಜನೆಗಳಲ್ಲಿ ಇದನ್ನು ಸೇರಿಸಿಕೊಡಲು ಸಾಧ್ಯವಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಕೇಂದ್ರ ಸರ್ಕಾರದವರೇನಾದರೂ ಸಹಾಯ ನೀಡಿದರೆ ಎಲ್ಲ ಕಡೆಗೂ ಈ ವಿದ್ಯುಚ್ಛಕ್ತಿಯನ್ನು ಒದಗಿಸಬೇಕೆಂದಿದ್ದೇವೆ. ಸರ್ಕಾರದವರ ಉದ್ದೇಶವೇ ಅದು. ಹಾಗೆ ನಮಗೆ ಹೊರಗಡೆಯಿಂದ ಸಹಾಯ ಬಾರದೇ ಹೋದ ಪಕ್ಷಕ್ಕೆ ನಾವು ನಮ್ಮ ಅನೇಕ ಕೆಲಸಗಳನ್ನು ನಿಲ್ಲಿಸಿಬಿಡಬೇಕಾಗುತ್ತದೆ. ಆದ್ದರಿಂದ ಈ ಬಗ್ಗೆ ಕೇಂದ್ರದವರ ಸಹಾಯ ಅಗತ್ಯವಾಗಿದೆ.

ಶ್ರೀ ಪಿ. ಸೀತಾರಾಮಯ್ಯನವರು :– (f) ಪ್ರಶ್ನೆಗೆ ಉತ್ತರದಲ್ಲಿ ತಿಳಿಸಿರುವ 82 ಟೌನ್‌ಗಳಲ್ಲಿ (d) ಪ್ರಶ್ನೆಗೆ ಉತ್ತರದಲ್ಲಿ ಹೇಳಿರತಕ್ಕ 14 ಟೌನುಗಳು ಸೇರಿ ಒಟ್ಟು 82 ಟೌನುಗಳೆಂದು ತಾವು ತಿಳಿಸಿದ್ದೀರಾ.

ಶ್ರೀ ಟಿ. ಸಿದ್ದಲಿಂಗಯ್ಯನವರು :– ಈ ಪ್ರಶ್ನೆಯಲ್ಲಿ ಅದು ಉದ್ಭವಿಸುವುದಿಲ್ಲ.

ಶ್ರೀ ಪಿ. ಸೀತಾರಾಮಯ್ಯನವರು :– ಅದು ಅಷ್ಟು ಅಬ್ವಿಯಸ್ ಆಗಿದೆಯೆಂದು ನನಗೆ ಕಾಣುತ್ತಿಲ್ಲ. ಕೆಲವು ಮಂಜೂರಾಗಿರಬಹುದು. ಆದ್ದರಿಂದ ಈ ಹದಿನಾಲ್ಕು ಟೌನುಗಳು ಅದರಲ್ಲಿ ಸೇರಿರುತ್ತವೆಂದು ಭಾವಿಸಲು ಸಾಧ್ಯವಾಗುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಸ್ಪಷ್ಟವಾಗಿಯೇ ಇದೆ.

*****

ಶ್ರೀ ಎಸ್. ವೀರಬಸಪ್ಪನವರು (ಸ್ಥಾನೀಯ ಪ್ರಾಧೀಕಾರ ಕ್ಷೇತ್ರ) :– ಸ್ವಾಮಿ, ಇಂತಿಂಥ ಮುನ್ಸಿಪಾಲಿಟಿಗೆ ವಿದ್ಯುಚ್ಛಕ್ತಿಯನ್ನು ಒದಗಿಸಲಾಗಿದೆಯೆಂಬುದರ ಬಗ್ಗೆ ಸರ್ಕಾರದಲ್ಲಿ

• ದಾಖಲೆಗಳೇನಾದರೂ ಇರುತ್ತವೆಯೇ? ಏತಕ್ಕಾಗಿ ನಾನು ಇದನ್ನು ಕೇಳುತ್ತಿದ್ದೇನೆಂದರೆ ತುರುವನೂರಿಗೆ ಈಗ ವಿದ್ಯುಚ್ಛಕ್ತಿಯನ್ನೊದಗಿಸಲಾಗಿದೆ. ಹಾಗಿದ್ದರೂ ಒದಗಿಸಿಲ್ಲದ ಪಟ್ಟಿಯಲ್ಲಿ ಈ ಗ್ರಾಮದ ಹೆಸರನ್ನು ಸೇರಿಸಿದ್ದರಾದ ಕಾರಣ ನಾನೇ ಪ್ರಶ್ನೆ ಕೇಳಬೇಕಾಯಿತು.

ಶ್ರೀ ಟಿ. ಸಿದ್ದಲಿಂಗಯ್ಯನವರು :– ಬಹುಶಃ ಅದು ಕೈದೋಷವಿರಬಹುದು. ಅದನ್ನು ಗಮನದಲ್ಲಿಟ್ಟುಕೊಂಡು ವಿಚಾರ ಮಾಡಿ ತಪ್ಪಿದ್ದರೆ ಸರಿಪಡಿಸಲಾಗುತ್ತದೆ.

ಶ್ರೀ ಎಸ್. ವೀರಬಸಪ್ಪನವರು :– ಹೊಸದುರ್ಗಕ್ಕೆ ಈ ಲೈನನ್ನು ಯಾವ ಮಾರ್ಗವಾಗಿ ತರಲಾಗುತ್ತವೆಂಬುದನ್ನು ತಿಳಿಸುವುದಕ್ಕಾಗುತ್ತದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಈಗಾಲೇ ಗೊತ್ತು ಮಾಡಲಾಗಿದ್ದ ಲೈನನ್ನು ತಪ್ಪಿಸಿ ಬೇರೆ ಮಾರ್ಗವಾಗಿ ಲೈನು ಹಾಕಬೇಕೆಂದು ಮನವಿಗಳು ಬಂದಿವೆ. ಹಾಗೆ ಮಾಡುವುದರಿಂದ ಇನ್ನೂ 5-6 ಹಳ್ಳಿಗಳಿಗೆ ಈಗ ಮಾಡುತ್ತಿರುವ 50 ಸಾವಿರ ರೂಪಾಯಿಗಳ ಖರ್ಚಿನಲ್ಲೇ ಪವರನ್ನು ಒದಗಿಸಲು ಸಾಧ್ಯವಾಗುತ್ತದೆಂದು ನೀರಿಕ್ಷಿಸಲಾಗಿದೆ.

ಶ್ರೀ ಎಸ್. ವೀರಭದ್ರಪ್ಪನವರು :– ಈ ಹೊಸ ರಸ್ತೆಯ ಮೂಲಕವೇ ಆ ಲೈನನ್ನು ಹಾಕಲು ಆದಷ್ಟು ಬೇಗ ಸರ್ಕಾರದವರು ಕಾರ್ಯವನ್ನು ಕೈಗೊಳ್ಳುವರೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಸಾಧ್ಯವಾದಷ್ಟು ಬೇಗ ಮಾಡಲಾಗುತ್ತೆ.

ಶ್ರೀ ಎನ್.ಪಿ. ಗೋವಿಂದ ಗೌಡರು (ಸ್ಥಾನೀಯ ಪ್ರಾಧಿಕಾರಿಕ್ಷೇತ್ರ) :– ಈ 14 ಅಂದಾಜುಗಳ ಪೈಕಿ ಎಷ್ಟು 1952-53ರಲ್ಲಿ ಮಂಜೂರಾಗಿ ಕೆಲಸವನ್ನು ಕೈಗೊಳ್ಳುವಂತೆ ಮಾಡಿದ್ದಾರೆ.

ಶ್ರೀ ಟಿ. ಸಿದ್ದಲಿಂಗಯ್ಯನವರು :– ಹಣದ ಅಭಾವ ಕಡಿಮೆಯಾದಂತೆಲ್ಲಾ ಪ್ರತಿಯೊಂದು ಕಡೆಗೂ ಇದನ್ನು ಒದಗಿಸಬೇಕೆಂದು ಮಾಡಿದ್ದೇವೆ.

ಶ್ರೀ ಎನ್.ಪಿ. ಗೋವಿಂದ ಗೌಡರು :– 1952-53ರಲ್ಲಿ ಸ್ಪೆಸಿಫಿಕ್ ಆಗಿ ಯಾವ ಲೈನು ತೆಗೆದುಕೊಳ್ಳಬೇಕೆಂದು ಮಂಜೂರು ಮಾಡಿದೆ ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಹಾಗೆ ವಾಗ್ದಾನ ಮಾಡುವುದಕ್ಕಾಗುವುದಿಲ್ಲ. ಆಗಲೇ ಅರಿಕೆ ಮಾಡಿದ ಪ್ರಕಾರ ಈಗ ಪೂರ್ತಿಯಾಗಿಲ್ಲದಿರುವುದನ್ನು ಪೂರೈಸುವುದಕ್ಕೇ ಇನ್ನೂ ಒಂದು ಕೋಟಿ ರೂಪಾಯಿಗಳು ಬೇಕಾಗುತ್ತದೆ. ಆದ್ದರಿಂದ ಈ ವರ್ಷ ಅಥವಾ ಇನ್ನೂ ಮುಂದಿನ ವರ್ಷ ಸಹ ಕೇಂದ್ರದಿಂದ ಸಾಲ ದೊರೆಯುವವರೆಗೆ ಹೊಸ ವಿದ್ಯುಚ್ಛಕ್ತಿ ಕೆಲಸ ತೆಗೆದುಕೊಳ್ಳುವುದು ಬಹಳ ಅಸಾಧ್ಯ.

ಶ್ರೀ ಎನ್.ಪಿ. ಗೋವಿಂದ ಗೌಡರು :– ಕೊಪ್ಪ, ನರಸಿಂಹರಾಜಪುರ ಈ ಸ್ಥಳಗಳಿಗೆ 1952-53ರಲ್ಲಿ ಮಂಜೂರು ಮಾಡಿ ತೆಗೆದುಕೊಳ್ಳುವುದಾಗಿ ಸರ್ಕಾರದಿಂದ ಭರವಸೆ ಬಂದಿಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಅದು ಗೊತ್ತಿದೆ. ಆದರೆ ಯಾವ ಲಕ್ಷ್ಯಕ್ಕೆ ಒಳಪಟ್ಟು.

ಶ್ರೀ ಸಿ.ಜೆ. ದೇವನಾಥ್ (ನಾಮನಿರ್ದೇಶನ) :– ವಿದ್ಯುಚ್ಛಕ್ತಿ ಸರಬರಾಜಿನಲ್ಲಿ ಆದ್ಯತೆಯನ್ನು ಯಾವ ಆಧಾರದ ಮೇಲೆ ನೀಡಲಾಗುತ್ತದೆ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಪ್ರದೇಶದ ಅವಶ್ಯಕತೆಯಂತೆ.

ಶ್ರೀ ಸಿ.ಜೆ. ದೇವನಾಥ್ :- ಉತ್ತರ ಅಸ್ಪಷ್ಟವಾಗಿದೆಯೆಂದು ವಿನಂತಿಸಿಕೊಳ್ಳುತ್ತೇನೆ, ಸ್ವಾಮಿ, ಆಧ್ಯತೆ ಕೃಷಿ ಅವಶ್ಯಕತೆ ಅಥವಾ ಕೈಗಾರಿಕಾ ಅವಶ್ಯಕತೆ ಅಥವಾ ಪಟ್ಟಣ ಅವಶ್ಯಕತೆಯನ್ನು ಅನುಸರಿಸಿದೆಯೇ ಎನ್ನುವುದು ನನ್ನ ಪ್ರಶ್ನೆ. ಈ ಬಗ್ಗೆ ಸರ್ಕಾರ ಯಾವುದೇ ಕ್ರಮವಾದ ನೀತಿ ಹಾಕಿಕೊಂಡಿದೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಎಲ್ಲಿಯೂ ಇದರ ಅವಶ್ಯಕತೆ ಇದೆಯೆಂದು ಹೇಳಿಬಿಟ್ಟರೆ ಅದು ಸಾರ್ವಜನಿಕರ ಅಭಿಪ್ರಾಯ. ಸರ್ಕಾರದವರು ಅದನ್ನು ಯೋಚನೆ ಮಾಡಿ ವ್ಯವಸಾಯಕ್ಕೂ ಸಹಾಯವಾಗಬೇಕು. ದೀಪಗಳಿಗೂ ಅನುಕೂಲವಾಗಬೇಕು. ಹಳ್ಳಿಯ ಕೈಗಾರಿಕೆಗಳಿಗೂ ಇದ್ದಿದ್ದರೆ ಒಳ್ಳೆಯದು ಎಂದು ತಿಳಿದು ಎಲ್ಲಿ ಹೆಚ್ಚು ಲಾಭದಾಯಕವಾಗಿ ಕಂಡುಬರುತ್ತದೆಯೊ ಅಂತಹ ಪ್ರತಿಯೊಂದು ಕಡೆಗೂ ಕೊಡಬೇಕೆಂಬುದು ಈಗ ಸರ್ಕಾರದಲ್ಲಿ ನೀತಿಯಾಗಿದೆ.

*****

ಶ್ರೀ ಆರ್.ಪಿ. ರೇವಣ್ಣನವರು (ಸ್ಥಾನೀಯ ಪ್ರಾಧಿಕಾರಿ ಕ್ಷೇತ್ರ) :- ನಮ್ಮ ದೇಶಕ್ಕೆ ಪೂರ್ತಿಯಾಗಿ ವಿದ್ಯುಚ್ಛಕ್ತಿಯನ್ನು ಕೊಡದಿರುವಾಗ ಪರದೇಶಗಳಿಗೆ ಕೊಟ್ಟಿರುವುದಕ್ಕೆ ಕಾರಣವೇನು?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಪರದೇಶವೆಂದರೆ ಯಾವುದೆಂದು ನಿರ್ದಿಷ್ಟವಾಗಿ ಹೇಳಿದರೆ ಒಳ್ಳೆಯದು.

ಶ್ರೀ ಆರ್.ಪಿ. ರೇವಣ್ಣನವರು :- ಮೈಸೂರು ಬಿಟ್ಟು ಕೊಳ್ಳೆಗಾಲ, ಬೊಂಬಾಯಿ ಇಂತಹಕಡೆಗೆ ಕೊಟ್ಟಿರುವುದಕ್ಕೆ ಕಾರಣವೇನು?

ಶ್ರೀ ಟಿ. ಸಿದ್ದಲಿಂಗಯ್ಯನವರು :- ವಿದ್ಯುಚ್ಛಕ್ತಿಯು ಸ್ವಲ್ಪ ಮಟ್ಟಿಗೆ ಬಿಸಿನೆಸ್ ತರಹ ಇದೆ. ನಾವು ತಯಾರಿಸುವ ಸಾಮಾನುಗಳನ್ನು ಗಿರಾಕಿ ಇಲ್ಲದಾಗ ಹೊರಕ್ಕೆ ಯಾವರೀತಿ ಕೊಡುತ್ತೇವೋ ಅದೇ ರೀತಿಯಲ್ಲಿ ಹೆಚ್ಚಾಗಿರುವುದನ್ನು ಬೇರೆ ಕಡೆಗೆ ಮಾರುವುದು ವ್ಯಾಪಾರ ನೀತಿ.

ಶ್ರೀ ಆರ್.ಪಿ. ರೇವಣ್ಣನವರು :- ಆ ನೀತಿ ಒಳ್ಳೆಯದೆ. ಆದರೆ ನಮಗೇ ಇಲ್ಲದೆ ಹೋಗಿದೆ ಎಂದು ಹೇಳುವಾಗ ಹೊರಕ್ಕೆ ಯಾವ ರೀತಿಯಲ್ಲಿ ಕಳುಹಿಸಲು ಸಾಧ್ಯವಾಗುತ್ತದೆ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಇಲ್ಲಿ ಅವಶ್ಯಕತೆ ಇರುವುದಕ್ಕಿಂತ ಹೆಚ್ಚಾಗಿರುವುದನ್ನು ಕಳುಹಿಸುವುದು.

ಶ್ರೀ ಸಿ.ಹೆಚ್. ವೆಂಕಟರಮಣಪ್ಪನವರು :- ಅಂದಾಜು ಮಂಜೂರಾಗಿ ಆಗಲೇ ಒಂದೂವರೆ ವರ್ಷಗಳಾಗಿದೆ. ಹಾಗೆ ಆಗಿರುವ ಕಡೆಯಲ್ಲಿ ಕೆಲಸ ನಡೆಯುತ್ತದೆ ಇಲ್ಲಿ ಕೆಲಸ ನಿಂತಿರುವುದಕ್ಕೆ ಕಾರಣವೇನು? ಅಲ್ಲಿನ ಅವಶ್ಯಕತೆಯನ್ನು ನಮ್ಮ ಛೇರ್‌ಮನ್ನರು ಮಂತ್ರಿಗಳಾಗಿದ್ದಾಗ ಅವರಿಗೆ, ಮುಖ್ಯಮಂತ್ರಿಗಳಿಗೂ ಹೇಳಿದರೂ ಇನ್ನೂ ಆಗದಿರುವುದಕ್ಕೆ ಕಾರಣವೇನು?

11-2165

ಶ್ರೀ ಟಿ. ಸಿದ್ದಲಿಂಗಯ್ಯನವರು :- ನಾನು ಈಗಾಗಲೇ ಸರ್ಕಾರದ ನೀತಿಯನ್ನು ಸ್ಪಷ್ಟವಾಗಿ ವಿವರಿಸಿದ್ದೇನೆ. ಸರ್ಕಾರ ರಾಜ್ಯದ ಪ್ರತಿಯೊಂದು ಭಾಗಕ್ಕೂ ವಿದ್ಯುಚ್ಛಕ್ತಿ ಸರಬರಾಜು ಮಾಡುವ ಇಚ್ಛೆಯುಳ್ಳದ್ದಾಗಿದೆ. ಆದರೆ ಹಣ ಲಭ್ಯವಿಲ್ಲ.

ಶ್ರೀ ವೆಂಕಟರಮಣಪ್ಪನವರು :- ಹಿಂದೆ ಅಂದಾಜಾಗಿರುವುದನ್ನು ಮುಂಚೆ ಕಾರ್ಯರೂಪಕ್ಕೆ ತಂದಿದ್ದೀರಿ. ಇಲ್ಲಿ ಅಂದಾಜಾಗಿ ಮಂಜೂರಾಗಿದ್ದರೂ ಏಕೆ ಕೆಲಸ ನಿಂತಿದೆ.

ಶ್ರೀ ಟಿ. ಸಿದ್ದಲಿಂಗಯ್ಯನವರು :- ಅದಕ್ಕೆ ಆಗಲೇ ಜವಾಬು ಕೊಟ್ಟಿದ್ದೇನೆ. ಸರ್ಕಾರ ಮಂಜೂರು ಮಾಡಬೇಕಾದರೆ ಬಡ್ಜೆಟ್ಟಿನಲ್ಲಿ ಗ್ರಾಂಟನ್ನು ಒದಗಿಸಿರಬೇಕು. ಅಂದಾಜು ಮಂಜೂರಾದರೂ ಸರ್ಕಾರ ಅದನ್ನು ಜಾರಿಗೆ ತರಲು ಅನುಮತಿ ಕೊಡಬೇಕಾದರೆ ಬಡ್ಜೆಟ್ಟಿನಲ್ಲಿ ಹಣ ಒದಗಿಸಿರಬೇಕು. ಈ ವಿಚಾರದಲ್ಲಿ ಅನೇಕರು ತಪ್ಪು ಅಭಿಪ್ರಾಯವಿಟ್ಟುಕೊಳ್ಳುತ್ತಾರೆಂದು ಇದನ್ನು ಸ್ವಲ್ಪ ವಿವರಿಸಿದ್ದೇನೆ. ಬಜೆಟ್‌ನಲ್ಲಿ ಹಣ ಲಭ್ಯಗೊಳಿಸುವುದಕ್ಕೊಳಪಟ್ಟು ಮುಂದುವರೆಯಬೇಕು. ಅದಿಲ್ಲದಿದ್ದರೆ ಜಾರಿಗೆ ಕೊಡುವುದಿಲ್ಲ.

ಶ್ರೀ ಜೆ. ದೇವಯ್ಯನವರು :- ನೀರು ಸಾಕಷ್ಟಿದ್ದರೆ ಪವರ್ ಉತ್ಪತ್ತಿಯಾಗುವುದು. ಆದ್ದರಿಂದ ಎಲ್ಲಿಯವರೆಗೆ ನೀರಿದ್ದರೆ ಪವರ್ ಉತ್ಪತ್ತಿಯಾಗುತ್ತದೆ.

ಶ್ರೀ ಟಿ. ಸಿದ್ದಲಿಂಗಯ್ಯನವರು :- ಈ ವಿಚಾರದಲ್ಲಿ ಮೈಸೂರಿಗೂ ಮತ್ತು ಮದ್ರಾಸಿಗೂ ಒಂದು ಕರಾರಾಗಿದೆ. 1300 ಕ್ಯೂಸೆಕ್ಸ್ ನೀರಿದ್ದರೆ ಶಿವನಸಮುದ್ರದಲ್ಲಿ ಕೆಲಸ ನಡೆಯುತ್ತದೆ. ಆದರಿಂದ ನಮಗೆ ಹದಿನೇಳು ಸಾವಿರ ಕಿಲೋ ವಾಟ್ಸ್ ನಷ್ಟು ಪವರ್ ಬರುತ್ತದೆ. ಕೃಷ್ಣರಾಜ ಸಾಗರದಲ್ಲಿ 71 ಅಡಿಗಳಿಗಿಂತ ಜಾಸ್ತಿಯಾಗಿ ನೀಡಿದ್ದರೆ ಶಿವನಸಮುದ್ರಕ್ಕೆ ಸಾಕಷ್ಟು ನೀರೊದಗುತ್ತದೆ. ಇಲ್ಲದಿದ್ದರೆ ಇಲ್ಲ.

ಶ್ರೀ ಜೆ. ದೇವಯ್ಯನವರು :- ಈಗ ಎಷ್ಟಿದೆ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಸುಮಾರು 71 ಅಡಿಗಳಿರಬಹುದು.

ಶ್ರೀ ಜೆ. ದೇವಯ್ಯನವರು :- ಅದಕ್ಕಿಂತ ಕಡಿಮೆಯಾದರೆ ಪವರ್‌ಗೆ ಮುಂದೇನು ಮಾಡುತ್ತೀರಿ?

ಶ್ರೀ ಟಿ. ಸಿದ್ದಲಿಂಗಯ್ಯನವರು :- ಬೇರೆ ಎಕ್ಸ್‌ಪ್ಯಾನ್‌ಶನ್ ಯೋಜನೆ ಇದೆ. ಹೊನ್ನೆಮರಡು ಜೋಗ್ ಫಾಲ್ಸ್ ಬಳಿ ಮೂರನೆಯ ಸ್ಟೇಜಿನಲ್ಲಿದೆ. ಅದನ್ನು ಮಾಡುವುದಕ್ಕೆ 30-35ಕೋಟಿ ರೂಪಾಯಿಗಳು ಬೇಕು. ಆದ್ದರಿಂದ ಅದನ್ನು ತೆಗೆದುಕೊಳ್ಳುವುದಕ್ಕೆ ಒಂದು ಪ್ಲಾನ್ ಮಾಡಿ ಆಗಿದೆ.

*****

ಶ್ರೀ ಜೆ. ದೇವಯ್ಯನವರು :– ನಾಗಮಂಗಲ ತಾಲ್ಲೂಕಿನಲ್ಲಿ ಬೆಳ್ಳೂರು ಮುನಿಸಿಪಾಲಿಟಿಗೆ ಅಂದಾಜಾಗಿದೆಯೇ? (c) ಪ್ರಶ್ನೆಯ ಉತ್ತರದಲ್ಲಿ ಆ ಹೆಸರಿದೆ.

ಶ್ರೀ ಟಿ. ಸಿದ್ದಲಿಂಗಯ್ಯನವರು :– ಇನ್ನೂ ಅಂದಾಜು ಆಗಿಲ್ಲ.

ಶ್ರೀ ಟಿ. ಗೋಪಾಲಕೃಷ್ಣ ಶೆಟ್ಟಿ :– ಹಣ ಲಭ್ಯವಿದ್ದರೂ ಯೋಜನೆಗಳಿಗೆ ಬೇಕಾದ ಸಲಕರಣೆಗಳು ದೊರಕುವುದಿಲ್ಲವೆಂಬುದು ಸರಿಯಲ್ಲವೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಹೌದು, ಅನೇಕವೇಳೆ ಹಣವಿದ್ದರೂ ಬೇಕಾದ ಸಲಕರಣೆಗಳಿರುವುದಿಲ್ಲ. ಅದೊಂದು ಕಷ್ಟವಿದೆ.

ಶ್ರೀ ಪಿ. ಗೋಪಾಲಕೃಷ್ಣ ಶೆಟ್ಟಿಯವರು :– ಈ ನ್ಯೂನತೆಯನ್ನು ಸರಿಪಡಿಸಿಕೊಳ್ಳುವುದಕ್ಕೆ ಉಪಕರಣಗಳೇನು ಬೇಕೋ ಅವನ್ನು ತಯಾರು ಮಾಡಿಕೊಳ್ಳುವುದಕ್ಕೆ ಸರ್ಕಾರದವರು ಏನಾದರೂ ಪ್ರಯತ್ನ ಮಾಡಿದ್ದಾರೆಯೇ?

ಶ್ರೀ ಟಿ. ಸಿದ್ದಲಿಂಗಯ್ಯನವರು :– ಈಗ ಸ್ವಲ್ಪ ಮಟ್ಟಿಗೆ ಉಪಕರಣಗಳು ಸಿಕ್ಕುತ್ತಿವೆ. ಇನ್ನು ಹೆಚ್ಚು ಮಾಡಿಕೊಳ್ಳುವುದಕ್ಕಾಗಿ ಸರ್ಕಾರದಲ್ಲಿ ಎಲೆಕ್ಟ್ರಿಕ್ ಫ್ಯಾಕ್ಟರಿ ಮತ್ತು ಪೊರ್ಸಿಲೈನ್ ಫ್ಯಾಕ್ಟರಿಗಳನ್ನು ವಿಸ್ತರಿಸಲು ವಿಸ್ತರಣಾ ಯೋಜನೆ ಮಾಡಬೇಕೆಂಬ ಆಲೋಚನೆ ಇದೆ.

ಶ್ರೀ ಟಿ. ಗೋಪಾಲಕೃಷ್ಣ ಶೆಟ್ಟಿಯವರು :– ಆ ಯೋಜನೆಯ ಪ್ರಕಾರ ಎಷ್ಟು ವರ್ಷಗಳಲ್ಲಿ ಸ್ವಪರಿಪೂರ್ಣತೆಯನ್ನು ಪಡೆಯಬಹುದು.

ಶ್ರೀ ಟಿ. ಸಿದ್ದಲಿಂಗಯ್ಯನವರು :– ಎಷ್ಟು ಬೇಗ ಹಣ ಒದಗುತ್ತದೆಯೋ ಅಷ್ಟು ಬೇಗ, ಸಾಕಷ್ಟು ಹಣವಿದ್ದರೆ ಸುಮಾರು ಎರಡು ವರ್ಷಗಳಲ್ಲಿ ಮಾಡಬಹುದು.

ಶ್ರೀ ಟಿ.ಎಸ್. ರಾಜಗೋಪಾಲ ಅಯ್ಯಂಗಾರ್ (ಪದವೀಧರ ಕ್ಷೇತ್ರ):– ಈಗಾಗಲೇ ಅವಶ್ಯವಿರುವ ಹಣದಿಂದ ತಕ್ಷಣದಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರ ಉದ್ದೇಶಿಸಿದೆ?

ಶ್ರೀ ಟಿ. ಸಿದ್ದಲಿಂಗಯ್ಯ :– ನಾನಾಗಲೇ ಹೇಳಿದಂತೆ ಅಪೂರ್ಣವಾಗಿರುವ ಕಾಮಗಾರಿಗಳನ್ನು ಪೂರೈಸಲು ಅಂದರೆ ಈಗಾಗಲೇ ಪ್ರಾರಂಭಗೊಂಡು ಪೂರ್ಣವಾಗದೇ ಉಳಿದಿರುವವು. ಇದಕ್ಕೆ ಸುಮಾರು ಒಂದುಕಾಲುಕೋಟಿ ಬೇಕಾಗುತ್ತದೆ. ಆದ್ದರಿಂದ ಯಾವುದೇ ಹೊಸ ಯೋಜನೆಗಳನ್ನು ಕೈಗೊಳ್ಳಲು ಹೆಚ್ಚಿನ ಅವಕಾಶಗಳಿಲ್ಲ.

ಶ್ರೀ ಡಿ. ವೆಂಕಟರಾಮಯ್ಯ (ಸ್ಥಳೀಯ ಪ್ರಾಧಿಕಾರಿ ಕ್ಷೇತ್ರ):– ಈಗಿರುವ ಅಂದಾಜುಗಳು ಮಂಜೂರಾಗುವವರೆಗೆ ಹೊಸ ಅಂದಾಜುಗಳನ್ನು ನೀಡುವುದಿಲ್ಲವೆಂದು ತಿಳಿಯೋಣವೇ?

ಶ್ರೀ ಟಿ. ಸಿದ್ದಲಿಂಗಯ್ಯ :– ಅಂದಾಜುಗಳನ್ನು ಮಾಡುತ್ತಲೇ ಹೋಗುತ್ತೇವೆ. ಆದರೆ ಅವುಗಳ ಪೂರೈಕೆಯೇ ಕಷ್ಟದ ಪ್ರಶ್ನೆ.

ಶ್ರೀ ಡಿ. ವೆಂಕಟರಾಮಯ್ಯ :– ಪೂರೈಸದೇ ಇರುವಾಗ ಹೊಸ ಅಂದಾಜುಗಳನ್ನೇಕೆ ಮಾಡುತ್ತೀರಿ?

ಶ್ರೀ ಟಿ. ಸಿದ್ದಲಿಂಗಯ್ಯ :- ನಾವು ಆಶಾವಾದಿಗಳು.

ಶ್ರೀ ಡಿ. ವೆಂಕಟರಾಮಯ್ಯ :- ಯಾವೊಂದು ಭರವಸೆಯು ಈಡೇರದಿರುವಾಗ ಉದ್ವಿಘ್ನರಾಗಬೇಕೇಕೆ?"

*****

ಸದನದಲ್ಲಿ ಆತ್ಮೀಯತೆ:-

ಸದನದಲ್ಲಿ ಉಪ ಸಭಾಧ್ಯಕ್ಷರಿಗೆ ಅಭಿನಂದನೆ ಸೂಚಿಸುವ ಒಂದು ಸಂದರ್ಭದಲ್ಲಿ ಸಿದ್ದಲಿಂಗಯ್ಯನವರು ಉಪಾಧ್ಯಕ್ಷರನ್ನು ಕುರಿತು 'ನನ್ನ ಪ್ರಿಯ ಮಿತ್ರರು' ಸಂಬೋಧಿಸಿದರು. ಜನಾಬ್ ಮಹಮದ್ ಇಮಾಮ್ ರವರು, 'ಉಪಾಧ್ಯಕ್ಷರಾಗಿ ಆಯ್ಕೆಯಾದವರು ಯಾರೊಬ್ಬರಿಗೂ ಪ್ರಿಯರಾಗಿರುವಂತಿಲ್ಲ' ವೆಂದು ಲಘು ಹಾಸ್ಯದ ಆಕ್ಷೇಪವೆತ್ತಿದರು. ಅದಕ್ಕೆ ಸಿದ್ದಲಿಂಗಯ್ಯನವರ ಚುರುಕು ಉತ್ತರ:

"ಅದು (ಪ್ರಿಯರು ಎನ್ನುವುದು) ಒಂದು ಆತ್ಮೀಯತೆಯ ಸಂಬೋದನೆಯೂ ಆಗಿದೆ. ನಾವು ಆತ್ಮೀಯತೆಯನ್ನು ಸದನದಿಂದ ಹೊರಹಾಕದಿರೋಣ. ಅದರಲ್ಲಿ ಆಕ್ಷೇಪಾರ್ಹವಾದುದೇನೂ ಇಲ್ಲ. ನಾನು ನನ್ನ ಮಿತ್ರರಾದ ಆರ್. ಚೆನ್ನಿಗರಾಮಯ್ಯನವರ ಹೆಸರನ್ನು ಹೇಳಿದೆ. ಅವರ ಹೆಸರು ಮತ್ತು ಅವರೂ ಸಹ ನಮಗೆಲ್ಲರಿಗೂ ಪ್ರಿಯವೆಂದೇ ನಾನು ಭಾವಿಸುತ್ತೇನೆ......"

*****

## ರಾಜ್ಯಸಭೆ ಸದಸ್ಯರಾಗಿ ಸಿದ್ದಲಿಂಗಯ್ಯ

ಸಿದ್ದಲಿಂಗಯ್ಯನವರು ಮೇ 1967ರಲ್ಲಿ ರಾಜ್ಯ ಸಭೆಗೆ ಚುನಾಯಿತರಾದರು. ಈ ಸ್ಥಾನ ಸಿ.ಎಂ. ಪೂಣಚ್ಚ ರವರು ಇಂದಿರಾಗಾಂಧಿಯವರ ಮಂತ್ರಿಮಂಡಲ ಸೇರಿದ ಕಾರಣ ತೆರವಾಗಿತ್ತು. ಉತ್ತರಾರ್ಧದ ಅವಧಿಗೆ ಶ್ರೀ ಕಾಮರಾಜ ನಾಡಾರ್ ರವರ ಪ್ರೇರಣೆ ಮೇರೆಗೆ ಸಿದ್ದಲಿಂಗಯ್ಯನವರು ಈ ಸ್ಥಾನಕ್ಕೆ ಸ್ಪರ್ಧಿಸಿ ಆರಿಸಿ ಬಂದಿದ್ದರು.

ಈ ಸ್ಪರ್ಧೆ ಏರ್ಪಟ್ಟ ಬಗೆಯೂ ವಿಶಿಷ್ಟವಾಗಿದೆ. ಆ ಸ್ಥಾನಕ್ಕೆ ಕಾಂಗ್ರೆಸ್‌ನಿಂದ ಉತ್ತರ ಭಾಗದವರಾದ ಶ್ರೀ ದುಬೆಯವರನ್ನು ಸ್ಪರ್ಧೆಗೆ ಇಳಿಸಲಾಗಿತ್ತು. ಸಿದ್ದಲಿಂಗಯ್ಯನವರು ಆ ಸ್ಥಾನಕ್ಕೆ ಹುರಿಯಾಳಾಗಿ ನಿಲ್ಲಿಸುವ ಸೂಚನೆಗಳು ಬಂದಾಗ ಅಂದಿನ ಮುಖ್ಯಮಂತ್ರಿಗಳು ಈ ರಾಜ್ಯ ಸಭಾ ಸ್ಥಾನಕ್ಕೆ ಸಿದ್ದಲಿಂಗಯ್ಯನವರು ಆರಿಸಿಬರುವ ಬಗ್ಗೆ ಶಂಕೆ ವ್ಯಕ್ತಪಡಿಸಿದರಾದರೂ ಕಾಂಗ್ರೆಸ್ ಕಾರ್ಯಕರ್ತರ ಅಭಿಪ್ರಾಯದ ಮೇಲೆ ದುಬೆ ರವರ ಉಮೇದುವಾರಿಕೆಯನ್ನು ಹಿಂತೆಗೆದುಕೊಂಡು ಸಿದ್ದಲಿಂಗಯ್ಯನವರನ್ನು ಆ ಸ್ಥಾನಕ್ಕೆ ಸ್ಪರ್ಧಿಸುವ ವ್ಯವಸ್ಥೆ ಮಾಡಿದುದನ್ನು ಸಿದ್ದಲಿಂಗಯ್ಯನವರ ನಿಕಟವರ್ತಿಗಳಾದ ದೊಡ್ಡಬಳ್ಳಾಪುರದ ಎಂ.ಎಸ್. ಶರಭಣ್ಣನವರು ಸ್ಮರಿಸಿಕೊಳ್ಳುತ್ತಾರೆ ಮಾತ್ರವಲ್ಲ ಆ ಚುನಾವಣೆಯಲ್ಲಿ ಕಾಂಗ್ರೆಸ್ಸಿನ ಎಲ್ಲಾ ಓಟುಗಳ ಜೊತೆಗೆ ನಾಲ್ಕಾರು ವಿರೋಧಪಕ್ಷದ ಓಟುಗಳೂ ಸಿದ್ದಲಿಂಗಯ್ಯನವರ ಪರವಾಗಿ ಬಿದ್ದು ಸಿದ್ದಲಿಂಗಯ್ಯನವರು ಆರಿಸಿ ಬಂದುದು ಸಿದ್ದಲಿಂಗಯ್ಯನವರ ಜನಪ್ರಿಯತೆಯ ನಿದರ್ಶನವಾಗಿತ್ತೆಂದೂ ಮೆಚ್ಚುಗೆಯ ನುಡಿಗಳನ್ನಾಡುತ್ತಾರೆ.

ಪಕ್ಷ ರಾಜಕಾರಣ ಕಂಡರಿಯದ ರೀತಿಯಲ್ಲಿ ಭಾರತ ರಾಷ್ಟ್ರಾಧ್ಯಕ್ಷರ ಚುನಾವಣೆ ನಡೆದದ್ದು ಇದೇ ಅವಧಿಯಲ್ಲೇ. ಕಾಂಗ್ರೆಸ್ ಪಕ್ಷದ ಅಧಿಕೃತ ಉಮೇದುವಾರ ಶ್ರೀ ಎನ್. ಸಂಜೀವ ರೆಡ್ಡಿಯವರು ಪ್ರಧಾನ ಮಂತ್ರಿ ಇಂದಿರಾಗಾಂಧಿಯವರು ಬೆಂಬಲಿಸಿದ ಶ್ರೀ ವಿ.ವಿ. ಗಿರಿಯವರಿಗೆ ಸೋತದ್ದು ರಾಜಕೀಯ ವಲಯಗಳನ್ನು ತಲ್ಲಣಗೊಳಿಸಿತ್ತು.

ಇದರ ಬೆಳವಣಿಗೆಯಾಗಿ ಕರ್ನಾಟಕ ರಾಜ್ಯದಲ್ಲಿ ಶ್ರೀ ಎಸ್. ನಿಜಲಿಂಗಪ್ಪನವರ ನೇತೃತ್ವದಲ್ಲಿ ಕಾಂಗ್ರೆಸ್ ಪಕ್ಷ ಸಭೆ ನಡೆಸಿ ಶ್ರೀಮತಿ ಇಂದಿರಾಗಾಂಧಿಯವರನ್ನು ಪಕ್ಷದಿಂದ ಹೊರಹಾಕುವ ಪರ್ಯಾಲೋಚನೆಯಲ್ಲಿದ್ದಾಗ ಸಿದ್ದಲಿಂಗಯ್ಯನವರು ಅಂದಿನ ಪರಿಸ್ಥಿತಿಯಲ್ಲಿ ಅಂತಹ ಕ್ರಮ ಕಾಂಗ್ರೆಸ್‌ಗೆ ಶ್ರೇಯಸ್ಕಾರಿಯಾಗಲಾರದೆಂದು ನಿಜಲಿಂಗಪ್ಪನವರಿಗೆ ಅಂದಿನ ರಾಜಕೀಯ ವಿದ್ಯಮಾನಗಳನ್ನು ವಿವರಿಸಿ ಸೂಚಿಸಿದ್ದರು. ಸಿದ್ದಲಿಂಗಯ್ಯನವರ ಚಿಂತನೆಯನ್ನು ನಿಜಲಿಂಗಪ್ಪನವರು ಗ್ರಹಿಸಿ ಒಪ್ಪಿದರಾದರೂ 19-10-69ರಂದು ಬೆಂಗಳೂರಿನ ಲಾಲ್‌ಬಾಗ್‌ನಲ್ಲಿ ನಡೆದ ಕಾಂಗ್ರೆಸ್ ಸಮಾವೇಶ ಸದಸ್ಯರ ಬಹುಮತದ ಅಭಿಪ್ರಾಯದ ಮೇರೆಗೆ ಇಂದಿರಾಗಾಂಧಿಯನ್ನು ಹೊರಗೆ ಹಾಕುವ ನಿರ್ಣಯ ಕೈಗೊಂಡಿತು. ತತ್ಪರಿಣಾಮವಾಗಿ ಕಾಂಗ್ರೆಸ್ ಇಬ್ಭಾಗವಾಯಿತು. ಇದಾಗಿರದಿದ್ದರೆ ಕರ್ನಾಟಕದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಭವಿಷ್ಯ ಇಂದಿಗಿಂತಲೂ ಉತ್ತಮವಾಗಿರಬಹುದಾಗಿತ್ತೆಂದು ಸಿದ್ದಲಿಂಗಯ್ಯ ಅಭಿಪ್ರಾಯಪಟ್ಟಿದ್ದಾರೆ.

ಸಿದ್ದಲಿಂಗಯ್ಯನವರು ರಾಜ್ಯಸಭಾ ಸದಸ್ಯರಾಗಿರುವ ಅವಧಿಯಲ್ಲಿ ವಿಶೇಷವಾಗಿ ಸೂಕ್ಷ್ಮ ಸಂಗತಿಗಳನ್ನು ಸರ್ಕಾರದ ಚಿಂತನೆಗೆ ಒಳಪಡಿಸುವ ಕಾರ್ಯದಲ್ಲಿ ಆಸಕ್ತರಾಗಿದ್ದರು. ಇದಕ್ಕೆ

ಅವರು ಪ್ರಶ್ನೋತ್ತರಗಳ ಸಮಯದ ಸದುಪಯೋಗ ಮಾಡಿಕೊಳ್ಳುತ್ತಿದ್ದರು. ಪ್ರಶ್ನೆಗಳ ಮೂಲಕ ಇವರು ಎತ್ತುತ್ತಿದ್ದ ವಿಷಯಗಳು ವಿಶಿಷ್ಟವಾಗಿರುತ್ತಿದ್ದವು. ಇಂತಹ ವಿಷಯಗಳ ಬಗ್ಗೆ ಮಾಹಿತಿ ಸಾರ್ವಜನಿಕರಿಗೆ ಲಭ್ಯವಾಗಬೇಕೆನ್ನುವುದರ ಜೊತೆಗೆ ಸರ್ಕಾರ ತನ್ನ ಕಾರ್ಯಾಚರಣೆಯಲ್ಲಿ ಅಪ್ರಜ್ಞಾಪೂರ್ವಕವಾಗಿ ಆಗಿರಬಹುದಾದ ಲೋಪದೋಷಗಳನ್ನು ತಿದ್ದಿ ಸರಿಪಡಿಸಿಕೊಳ್ಳಲು ಸರ್ಕಾರಕ್ಕೆ ಅವಕಾಶ ಕಲ್ಪಿಸುವುದು ಇವರ ಪ್ರಶ್ನೆಗಳ ಮೂಲೋದ್ದೇಶವಾಗಿರುತ್ತಿತ್ತು. ಇಂತಹ ಒಂದೆರಡು ಪ್ರಸಂಗಗಳನ್ನು ಉದಾಹರಣಾರ್ಥ ಇಲ್ಲಿ ನೀಡಲಾಗಿದೆ.

ಯುಕ್ತ ಅನುಮತಿ ಇಲ್ಲದೆ ಹೊಸ ದೆಹಲಿ ಪುರಸಭೆ ನಗರದ ಅನೇಕ ಭಾಗಗಳಲ್ಲಿ ಸರ್ಕಾರಿ ಭೂಮಿಯನ್ನು ಒತ್ತುವರಿ ಮಾಡಿಕೊಂಡಿದ್ದು ಇದರ ಬಗ್ಗೆ ಸರ್ಕಾರದ ನಿರ್ಲಿಪ್ತ ಧೋರಣೆ ಸಾರ್ವಜನಿಕ ಕುತೂಹಲವನ್ನು ಕೆರಳಿಸಿತ್ತು. ಪುರಸಭೆ ನಿರಂಕುಶವಾಗಿ ವರ್ತಿಸುತ್ತದೆಯೇ? ಸರ್ಕಾರಕ್ಕೆ ಕಾನೂನು ವ್ಯವಸ್ಥೆಯನ್ನು ಸಾಧಿಸುವ ಮನಸ್ಸಿಲ್ಲವೇ? - ಮುಂತಾದ ಸಾರ್ವತ್ರಿಕ ಆತಂಕಕ್ಕೆ ರೂಪುಕೊಟ್ಟ ಸಿದ್ದಲಿಂಗಯ್ಯನವರು ಈ ಬಗೆಗಿನ ಎಲ್ಲ ವಿವರಗಳನ್ನು ಮತ್ತು ಸರ್ಕಾರ ಕೈಗೊಂಡ ಕ್ರಮಗಳನ್ನು ಒದಗಿಸಲು ಕೋರಿ ಪ್ರಶ್ನಾವಳಿಯನ್ನು ರೂಪಿಸಿದ್ದರು.

ಇದರಿಂದ ಸಾರ್ವತ್ರಿಕ ಆಡಳಿತ ವ್ಯವಸ್ಥೆ ಸಹಜವಾಗಿ ಎದುರಿಸುತ್ತಿದ್ದ ಕೆಲವು ಸಮಸ್ಯೆಗಳು ಬೆಳಕಿಗೆ ಬಂದವು. ಅವೆಂದರೆ : ಸ್ಥಳೀಯ ಪ್ರಾಧಿಕಾರಿಗಳಿಗೆ ನಿರ್ದಿಷ್ಟ ಉದ್ದೇಶಗಳಿಗಾಗಿ ಸರ್ಕಾರಿ ಭೂಮಿಯನ್ನು ಕೊಡಮಾಡುವುದು ಸರ್ಕಾರದ ಧೋರಣೆ. ಇದರಿಂದ ನಾಡಿನ ಅಭಿವೃದ್ಧಿ ಸಾಧ್ಯವಾಗುತ್ತಿತ್ತು. ಆದರೆ ಸರಹದ್ದುಗಳು ಮತ್ತು ಅಳೆಮಾನಗಳನ್ನು ಯಥಾವತ್ತಾಗಿ ಗುರುತಿಸುವಲ್ಲಿ ಗೊಂದಲಗಳಿದ್ದಕಾರಣ 'ಒತ್ತುವರಿ' ಭಾಗಗಳನ್ನು ವಿಂಗಡಿಸುವುದು ಕಷ್ಟದ ಕೆಲಸವಾಗಿತ್ತು. ಈ ಗೊಂದಲಗಳಿಗೆ ಕಾನೂನಿನ ನಿರ್ಣಾಯಕ ಪರಿಕ್ರಮಗಳು ಸಮಂಜಸವಾಗುತ್ತಿರಲಿಲ್ಲ. ಕಾರಣ, ಅದರಿಂದ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಳ್ಳುವ ಇಲ್ಲವೇ ಬಾಧಿತವಾಗುವ ಸಾಧ್ಯತೆಗಳಿದ್ದವು. ಇಂತಹ ನಿರ್ಣಾಯಕ ಪರಿಕ್ರಮಗಳನ್ನು ಕೈಗೊಳ್ಳುವುದಾದರೆ ಅದಕ್ಕಾಗಿ ಸಾಕಷ್ಟು ಪರಿಶ್ರಮ, ಸಮಯ ಹಿಡಿಯಬಹುದಾಗಿದ್ದು 'ಒತ್ತುವರಿ'ಗಳನ್ನು ನಿಯಂತ್ರಿಸಬೇಕಾದ ಉದ್ದೇಶಕ್ಕೆ ಹೋಲಿಸಿದರೆ ಇದು ವ್ಯರ್ಥಕಾರ್ಯವೆನಿಸುತ್ತದೆ.

ಈ ವಿವರಗಳು ಉತ್ತರದಲ್ಲಿ ಲಭ್ಯವಾಗಿದ್ದುದರಿಂದ ಸರ್ಕಾರದ ನಿಲುವನ್ನು ಸಮರ್ಥಿಸಿಕೊಳ್ಳುವುದರ ಜೊತೆಗೆ ಕುತೂಹಲ ಅಥವಾ ಶಂಕಾಪೂರಿತ ಸಾರ್ವತ್ರಿಕ ನಡವಳಿಕೆಯನ್ನು ಶಾಸಕಾಂಗ ಕ್ರಮದಿಂದ ನಿವಾರಿಸಿಕೊಂಡ ಲಾಭ ಉಂಟಾಯಿತು. ಇಂತಹ ಅನೇಕ ಮಹತ್ವದ ಸಂಗತಿಗಳ ವ್ಯಕ್ತ ಮತ್ತು ಅವ್ಯಕ್ತ ಮುಖಗಳನ್ನು ತೋರಗೊಡುವುದರಲ್ಲಿ ಸಿದ್ದಲಿಂಗಯ್ಯನವರು ಸಮರ್ಥರಾಗಿದ್ದಾರೆ.

ಇಂತಹದೇ ಇನ್ನೊಂದು ನಿದರ್ಶನ ನಾಗರೀಕ ಸೇವೆಗಳಲ್ಲಿ ಸ್ಥಳೀಯ ಅಭ್ಯರ್ಥಿಗಳಿಗೆ ಪದೋನ್ನತಿ ನೀಡುವಲ್ಲಿ ಸೇವಾ ಜೇಷ್ಠತೆಗಿಂತಲೂ ಹೆಚ್ಚಾಗಿ ಅರ್ಹತೆಯನ್ನು ಆಧಾರವಾಗಿಟ್ಟುಕೊಳ್ಳಬೇಕೆಂಬುದು ಪ್ರಧಾನ ಮಂತ್ರಿ ಇಂದಿರಾಗಾಂಧಿಯವರ ನಿಲುವು ಎಂಬ ಬಗ್ಗೆ ಸರ್ಕಾರಿ ವಲಯಗಳಲ್ಲಿ ಊಹಾಪೋಹಗಳೇಳತೊಡಗಿದ್ದವು. ಉನ್ನತ ಹುದ್ದೆಗಳಲ್ಲಿ ಹುರುಪಿನಿಂದ ಕೆಲಸ ಮಾಡುವ ಸೂಕ್ಷ್ಮಮತಿಗಳು ಇರಬೇಕಾದುದು ಸಾರ್ವಜನಿಕ

ಹಿತದೃಷ್ಟಿಯಿಂದ ಸರಿಯಾದ ನೀತಿಯಾದರೂ ಇಂತಹ ಕ್ರಮ ಸೇವಾ ಹಿರಿತನವುಳ್ಳ ಪ್ರಾಮಾಣಿಕರನ್ನು ಬದಿಗೊತ್ತಿ 'ಅರ್ಹತೆ' ಎಂಬ ಗಣನೆಯ ಮೇಲೆ ಸರ್ಕಾರ ತನಗೆ ಬೇಕಾದವರನ್ನು ಉನ್ನತ ಹುದ್ದೆಗಳಿಗೆ ನೇಮಿಸಲಿದೆ ಎಂಬ ಆತಂಕ ಸ್ವಾಭಾವಿಕವಾಗಿ ಉದ್ಭವಿಸಿತು. ಇದರ ಪ್ರಖರತೆಯನ್ನರಿತ ಸಿದ್ದಲಿಂಗಯ್ಯನವರು ಈ ಬಗ್ಗೆ ಸರ್ಕಾರದ ನೀತಿ ಧೋರಣೆಗಳನ್ನು ಮತ್ತು ಇಂತಹ ನೀತಿಯನ್ನು ಕಾರ್ಯಗತಗೊಳಿಸುವತ್ತ ಸರ್ಕಾರ ಕೈಗೊಂಡಿರುವ ಕ್ರಮಗಳನ್ನು ವಿವರಿಸುವಂತೆ ಸರ್ಕಾರವನ್ನು ಕೇಳಿ ಪ್ರಶ್ನೆ ಮಂಡಿಸಿದರು. ಇದಕ್ಕೆ ಉತ್ತರವಾಗಿ ಸರ್ಕಾರ ನಾಗರೀಕ ಸೇವೆಗಳಲ್ಲಿ ಸ್ಥೂಲವಾಗಿ ವಿಂಗಡಿಸಿರುವ ನಾಲ್ಕು ಪ್ರಭೇದಗಳನ್ನು - ಅಂದರೆ ಜೇಷ್ಠತೆಯನ್ನೆ ಒಂದು ಪದರವನ್ನಾಗಿಟ್ಟುಕೊಂಡು ಪದೋನ್ನತಿಯನ್ನು ನೀಡಲಾಗುವ ಹುದ್ದೆಗಳ ಗುಂಪು. ಪರಿಣತಿ ಪ್ರಧಾನವಾಗಿ ಅರ್ಹತೆಯೇ ಪ್ರಮುಖ ಆಧಾರವಾಗಿರಬೇಕಾದ ಆಯ್ಕೆ ಹುದ್ದೆಗಳ ನಿರ್ದಿಷ್ಟ ಗುಂಪು. ಕೆಲವು ವೈಜ್ಞಾನಿಕ ಮತ್ತು ತಾಂತ್ರಿಕ ಹುದ್ದೆಗಳಲ್ಲಿ ಹೆಚ್ಚಿನ ಪರಿಣತಿ ತೋರಿದ ನೌಕರರಿಗೆ ಅಂತಹ ಪರಿಣತಿಯಾಧಾರದ ಮೇಲೆ ಪದೋನ್ನತಿ ಅಥವಾ ಮುಂಗಡವಾಗಿ ವೇತನ ಬಡ್ತಿ ನೀಡಲಿರುವ ವಿಶೇಷ ಯೋಜನೆಯ ಹುದ್ದೆಗಳು ಮತ್ತು ಸ್ಥಳೀಯ ಅಭ್ಯರ್ಥಿಗಳಾಗಿ ಕೆಳ ವರ್ಗಗಳಿಗೆ ಆಯ್ಕೆಯಾದ ನೌಕರರಿಗೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಕಟ್ಟಿ ತೇರ್ಗಡೆ ಹೊಂದಿದಾಗ ಆ ಆಧಾರದ ಮೇಲೆ ಪದೋನ್ನತಿ ನೀಡಬಹುದಾದ ಹುದ್ದೆಗಳ ಗುಂಪು. ಈ ರೀತಿ ಇರುವ ಪ್ರಭೇಧಗಳನ್ನು ವಿಂಗಡಿಸಿ ಜೇಷ್ಠತೆಯೇ ಆಧಾರವಾಗುವ ಹುದ್ದೆಗಳಲ್ಲೂ ಅನರ್ಹರಿಗೆ ಮುಂಬಡ್ತಿಯನ್ನು ತಿರಸ್ಕರಿಸಬಹುದಾದ ಸಂದರ್ಭಗಳ ಸಂಪೂರ್ಣ ಮಾಹಿತಿಯನ್ನು ಸರ್ಕಾರಕ್ಕೆ ಒದಗಿಸಿತ್ತು.

ಇದರಿಂದ ಅರ್ಹತೆಯನ್ನೇ ಆಧರಿಸಿ ಪದೋನ್ನತಿ ನೀಡುವ ಸರ್ಕಾರ ನೀತಿ ಹೊಸತೇನು ಅಲ್ಲವೆಂಬ ಮತ್ತು ಅನರ್ಹತೆ ಎದ್ದುಕಾಣುವ ಪ್ರಸಂಗಗಳಲ್ಲಿ ಸೇವಾ ಹಿರಿತನವನ್ನು ನಿರ್ಲಕ್ಷಿಸಿ ಮುಂದಿನವರಿಗೆ ಬಡ್ತಿ ನೀಡುವ ನಿರ್ದಿಷ್ಟ ನೀತಿ ಇದೆ ಎಂಬ ಸಂಗತಿಗಳು ಪ್ರಕಟಗೊಂಡ ಪರಿಣಾಮವಾಗಿ ಸರ್ಕಾರದ ನೀತಿಯ ಬಗ್ಗೆ ಸಾರ್ವಜನಿಕರಿಗಿದ್ದ ಸಂದೇಹ ನಿವಾರಣೆಯ ಜೊತೆಗೆ ಸರ್ಕಾರಕ್ಕೆ ಕಾರ್ಯಕ್ಷಮತೆಯನ್ನು ನೆನಪಿಸುವ ಎರಡೂ ಉದ್ದೇಶಗಳು ಏಕಕಾಲಕ್ಕೆ ಸಾಧಿತವಾದವು. 1968ರಲ್ಲಿ ಆಡಳಿತ ಸುಧಾರಣಾ ಸಮಿತಿ ಸರ್ಕಾರಕ್ಕೆ ಸಲ್ಲಿಸಿದ ಮಹತ್ವದ ವರದಿಯೊಂದನ್ನು ಅಂಗೀಕರಿಸುವಲ್ಲಿ ಉಂಟಾಗಿದ್ದ ವಿಳಂಬವನ್ನು ಇದೇ ರೀತಿ ಸರ್ಕಾರದ ತಿಳುವಳಿಕೆಗೆ ತಂದು ಮುಂದಿನ ಪ್ರಗತಿ ಶೀಘ್ರಗೊಳ್ಳಲು ಕಾರಣೀಭೂತರಾದ ಕೀರ್ತಿ ಸಿದ್ದಲಿಂಗಯ್ಯನವರಿಗೆ ಸಲ್ಲುತ್ತದೆ. ಪ್ರಜ್ಞಾವಂತ ಶಾಸಕರು ಶಾಸಕಾಂಗ ಚಟುವಟಿಕೆಗಳಲ್ಲಿ ಜಾಣ್ಮೆಯಿಂದ ವ್ಯವಹರಿಸುವುದರಿಂದ ಇಂತಹ ನೂರಾರು ಉಪಕೃತಿಗಳು ದಿನಂಪ್ರತಿ ಸಾಧಿತವಾಗಬಹುದಾಗಿವೆ. ಇಂತಹ ಪ್ರಜ್ಞಾವಂತ ಶಾಸಕರಲ್ಲಿ ಸಿದ್ದಲಿಂಗಯ್ಯ ಅಗ್ರಗಣ್ಯರಾಗಿದ್ದರು.

## ಸಿದ್ದಲಿಂಗಯ್ಯನವರ ನಿರ್ದಿಷ್ಟ ಸಾಧನೆಗಳು

ಸಿದ್ದಲಿಂಗಯ್ಯನವರು ಶಾಸಕೀಯ ಪಟುವಾಗಿ ಸದನಗಳಲ್ಲಿ ತಮ್ಮ ಪ್ರೌಢಿಮೆಯನ್ನೂ ಘನತೆಯನ್ನೂ ಮೆರೆದ ರೀತಿಯನ್ನು ಈವರೆಗೆ ನೋಡಿದೆವು. ಈಗ ಅವರು ಸಚಿವ ಸ್ಥಾನದಿಂದ ಸಾಧಿಸಿದ ನಿರ್ದಿಷ್ಟ ಕಾರ್ಯಗಳತ್ತ ಸ್ವಲ್ಪ ಗಮನ ಹರಿಸೋಣ. ಶ್ರೀಯುತರು ಸಚಿವರಾಗಿದ್ದ ಕೇವಲ ಹತ್ತು-ಹತ್ತು ತಿಂಗಳುಗಳ ಎರಡು ಅತ್ಯಲ್ಪ ಅವಧಿಗಳಲ್ಲಿ ಅವರು ಮಾಡಿದ ಸಾಧನೆಗಳು ಎದ್ದು ತೋರುವಂತಹವಲ್ಲದಿದ್ದರೂ ಗೌಣವೂ ಅಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಅವನ್ನು ತಮ್ಮ ವಿಚಾರವಂತಿಕೆಯಿಂದಷ್ಟೇ ಅಲ್ಲದೆ ಆಚರಣೆಯಲ್ಲೂ ಸಾರ್ವಜನಿಕ ಸ್ಥಾನಗಳನ್ನಲಂಕರಿಸುವವರಿಗೆಲ್ಲ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ.

ಸಿದ್ದಲಿಂಗಯ್ಯನವರು ಯಾವತ್ತೂ ತಮ್ಮ ಸಾಧನೆಗಳನ್ನು ಎಣಿಕೆ ಮಾಡಿದವರಲ್ಲ. ಅವರ ಕಾರ್ಯ ಸಾಧನೆಯ ಬಗ್ಗೆ ಅವರೇ ಎಲ್ಲೂ ಏನನ್ನೂ ಹೇಳಿಕೊಂಡಿಲ್ಲ. ಇವರ ಹಿರಿಮೆಯನ್ನು ಗುರ್ತಿಸಿ ದಾಖಲಿಸುವ ಪ್ರಯತ್ನ ಮಾಡಿದವರಲ್ಲಿ ಮಾನ್ಯ ಕೆಂಗಲ್ ಹನುಮಂತಯ್ಯನವರೇ ಮೊದಲಿಗರೂ ಕೊನೆಯವರೂ ಆದಂತಿದೆ. ಇವರ ನೇತೃತ್ವದಲ್ಲಿ 1978ರಲ್ಲಿ ಏರ್ಪಟ್ಟ "ಸಿದ್ದಲಿಂಗಯ್ಯ ಸನ್ಮಾನ ಸಮಿತಿ" ಸಿದ್ದಲಿಂಗಯ್ಯನವರ ತ್ಯಾಗದ ಪ್ರತೀಕವಾಗಿನಿಲ್ಲುವಂತೆ ಶಿವಪುರದಲ್ಲಿ ವೀರಸೌಧವನ್ನು ನಿರ್ಮಿಸಿದೆ. ಇದರೊಂದಿಗೆ ರಾಜಕೀಯದಲ್ಲಿ ಬೆರೆತು ನುರಿತ ಅನೇಕ ಸ್ವಾತಂತ್ರ್ಯ ಹೋರಾಟಗಾರರು, ದೇಶಾಭಿಮಾನಿಗಳು ಸಿದ್ದಲಿಂಗಯ್ಯನವರ ಬಗೆಗಿನ ತಮ್ಮ ಪ್ರಾಮಾಣಿಕ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಮಹಾವೇದಿಕೆಯೊಂದನ್ನು ನಿರ್ಮಿಸಿದ್ದು ಈ ಸಮಿತಿ ಸ್ಮರಣ ಸಂಚಿಕೆಯೊಂದನ್ನು ಹೊರತಂದಿದೆ. ಈ ಕೆಲಸಗಳಾಗದಿದ್ದರೆ ಬಹುಶಃ ಸಿದ್ದಲಿಂಗಯ್ಯನವರು ಇತಿಹಾಸದ ಪುಟಗಳಿಂದ ಹೊರಗೇ ಉಳಿದುಬಿಡುತ್ತಿದ್ದರೇನೊ ! ಈ ಸ್ಮರಣ ಸಂಚಿಕೆಯ ಪುಟಗಳಿಂದ ಆಯ್ದ ಕೆಲವು ಸಂಗತಿಗಳನ್ನು ಕ್ರೋಢೀಕರಿಸಿ ಇಲ್ಲಿ ಉಲ್ಲೇಖಿಸಲಾಗಿದೆ.

ಭದ್ರಾವತಿಯ ಮೈಸೂರು ಐರನ್ ಅಂಡ್ ಸ್ಟೀಲ್ ವರ್ಕ್ಸ್ ಒಂದು ಹೆಸರಾಂತ ಕಂಪನಿ. (ಇದು ಈಗ ವಿಶ್ವೇಶ್ವರಯ್ಯ ಐರನ್ ಅಂಡ್ ಸ್ಟೀಲ್ ಲಿಮಿಟೆಡ್ ಎಂದು ಪ್ರಖ್ಯಾತವಾಗಿದೆ) ಮದ್ರಾಸಿನ ಓರ್ವ ಜಂಕ್ ವ್ಯಾಪಾರಿಯೊಂದಿಗೆ ವ್ಯವಹರಿಸುವಲ್ಲಿ ಈ ಸಂಸ್ಥೆ ಒಂದು ತೊಡಕಿಗೆ ಸಿಲುಕಿಕೊಂಡಿತು. ಈ ವಹಿವಾಟು ಗೊಂದಲಮಯವಾಗಿ ಸುಮಾರು 25 ವರ್ಷಗಳ ಕಾಲ ಸಂಸ್ಥೆಯ ಆರೋಗ್ಯಕರ ವಾತಾವರಣ ಕಲುಷಿತಗೊಂಡಿತು. ಸಿದ್ದಲಿಂಗಯ್ಯನವರು ರಾಜ್ಯದ ಕೈಗಾರಿಕಾ ಮಂತ್ರಿಯಾಗಿ ನೇಮಕಗೊಂಡಾಗ ಅವರ ಕೌಶಲಕ್ಕೆ ಇದೊಂದು ಸವಾಲಾಗಿ ಪರಿಣಮಿಸಿತು. ಸಿದ್ದಲಿಂಗಯ್ಯನವರು ಎದೆಗುಂದಲಿಲ್ಲ. ಸಮಸ್ಯೆಯ ಆಮೂಲಾಗ್ರ ಅಧ್ಯಯನ ಮಾಡಿಕೊಂಡರು. ನಂತರ ಕಂಪನಿಯ ಮೇನೇಜಿಂಗ್ ಡೈರೆಕ್ಟರರನ್ನೂ ವಹಿವಾಟಿನ ಇನ್ನೊಬ್ಬ ಪಕ್ಷಕಾರನಾದ ಮದ್ರಾಸಿನ ವ್ಯಾಪಾರಿಯನ್ನೂ ತಮ್ಮ ಸಚಿವ ಕೋಣೆಗೆ ಬರಮಾಡಿಕೊಂಡರು. ಅವರುಗಳೊಂದಿಗೆ ನಾಲ್ಕೈದು ಗಂಟೆಗಳ ಕಾಲ ಸಮಾಲೋಚಿಸುವುದರಲ್ಲಿ ಸಮಸ್ಯೆಗೆ ಪರಿಹಾರ ಕಂಡುಹಿಡಿದರು. ಇದರಿಂದಾಗಿ ಕಂಪನಿ ಮತ್ತೆ ನೆಮ್ಮದಿಯ ಉಸಿರಾಡುವಂತಾದುದಕ್ಕೆ ಅದರ

ಮೇನೇಜಿಂಗ್ ಡೈರೆಕ್ಟರ್‌ರವರೇ ಅಲ್ಲದೇ ಮದ್ರಾಸಿನ ಆ ವ್ಯಾಪಾರಿಯೂ ಅವರಿಗೆ ಆಭಾರಿಗಳಾಗಿ ಕೃತಜ್ಞತೆ ಸಲ್ಲಿಸಿದುದನ್ನು ಸಿದ್ದಲಿಂಗಯ್ಯನವರು ಸಂತಸದಿಂದ ನೆನಪು ಮಾಡಿಕೊಳ್ಳುತ್ತಿದ್ದರು.

ಇದೆ ರೀತಿ ವರ್ಷಾನುಗಟ್ಟಲೆ ಪರಿಹಾರಕಾಣದೆ ನಿಂತಿದ್ದ ಕರುಣಾಜನಕ ವಿಷಯಗಳನ್ನೊಳಗೊಂಡ ಅನೇಕ ಕಡತಗಳನ್ನು ವಿಲೇ ಮಾಡಿದುದನ್ನು ತಿಳಿಸುತ್ತಾ, ಕಾರ್ಯನಿರತನಾಗಿದ್ದಾಗ ಜೇನುನೊಣಗಳು ಕಚ್ಚಿ ಮೃತಪಟ್ಟಿದ್ದ ಫಾರೆಸ್ಟ್ ಗಾರ್ಡ್ ಒಬ್ಬನ ವಿಧವೆಗೆ ಜೀವನಾಂಶವನ್ನು ಮಂಜೂರು ಮಾಡುವುದರಲ್ಲಿ 7 ವರ್ಷ ವಿಳಂಬವಾದ ಘಟನೆಯನ್ನು ಮರುಕ ತುಂಬಿ ಸ್ಮರಿಸಿದ್ದಾರೆ. ಪುರಸಭೆಯೊಂದರಲ್ಲಿ ಹೆಲ್ತ್ ಇನ್ಸ್‌ಪೆಕ್ಟರ್‌ಆಗಿ ಕೆಲಸ ಮಾಡಿ ನಿವೃತ್ತನಾದ ವ್ಯಕ್ತಿಯೊಬ್ಬನ ಜೀವನಾಂಶವನ್ನು ಆರೋಗ್ಯ ಇಲಾಖೆ ಖಾತೆಯಿಂದ ನೀಡುವುದೇ, ಸ್ಥಳೀಯ ಸರ್ಕಾರಗಳ ಖಾತೆಯಿಂದ ನೀಡುವುದೇ ಎಂಬ ಬಗ್ಗೆ ಜಿಜ್ಞಾಸೆಯುಂಟಾಗಿ ಹದಿನೈದು ವರ್ಷಗಳ ಪರ್ಯಂತರ ಜೀವನಾಂಶ ಪಾವತಿ ಮಾಡದೆ ಉಳಿದ ಇನ್ನೊಂದು ಪ್ರಕರಣ ಅವರ ಮನಸ್ಸನ್ನು ವ್ಯಾಕುಲಗೊಳಿಸಿತ್ತು. ತಮ್ಮ ಗಮನಕ್ಕೆ ಬಂದ ಕೂಡಲೇ ಸಿದ್ದಲಿಂಗಯ್ಯನವರು ಇವುಗಳನ್ನು ಮಾನವೀಯ ಪರಿಗಣನೆಯಿಂದ ಪರಿಹರಿಸಿಕೊಟ್ಟವರಾದರು.

ಬೆಂಗಳೂರಿನ ಪ್ರಖ್ಯಾತ ಕೈಗಾರಿಕಾ ಸಂಸ್ಥೆ 'ಮೈಕೋ' ಸಿದ್ದಲಿಂಗಯ್ಯನವರು ಕೈಗಾರಿಕಾ ಸಚಿವರಾಗಿದ್ದ ಕಾಲದಲ್ಲಿ ಪ್ರಾರಂಭವಾದದ್ದು. ಜರ್ಮನ್ ಸಹಯೋಗದ ಈ ಸಂಸ್ಥೆ ಆರಂಭಗೊಳ್ಳಲು ಅಂದಿನ ಸರ್ಕಾರ ಸಕಲ ಸೌಕರ್ಯಗಳನ್ನು ಯುಕ್ತ ಕಾಲದಲ್ಲಿ ನೆರವೇರಿಸಿ ಕೊಟ್ಟುದಕ್ಕೆ ಅದರ ಸಂಸ್ಥಾಪಕ ಜರ್ಮನಿಯ ಶ್ರೀ ಲಿಂಗ್ ರವರು ಆಶ್ಚರ್ಯಪಟ್ಟು ಬೆಲೆ ಬಾಳುವ ಉಡುಗೊರೆಯನ್ನು ಜರ್ಮನಿಯಿಂದ ತರಿಸಿ ಕೊಡಬಂದಾಗ ಸಿದ್ದಲಿಂಗಯ್ಯನವರು ಖಂಡತುಂಡವಾಗಿ ನಿರಾಕರಿಸಿದರು. ಶ್ರೀ ಲಿಂಗ್‌ರವರು ಸಿದ್ದಲಿಂಗಯ್ಯನವರ ಪ್ರಾಮಾಣಿಕತೆಯನ್ನೂ ಪರಿಶುದ್ಧತೆಯನ್ನೂ ಬಹಳವಾಗಿ ಮೆಚ್ಚಿ ಕೊಂಡಾಡಿದರಂತೆ.

ಬೆಂಗಳೂರಿನ ಖ್ಯಾತ ಮಹಿಳಾ ವಿದ್ಯಾ ಸಂಸ್ಥೆ ಮೌಂಟ್ ಕಾರ್ಮೆಲ್ ಕಾಲೇಜಿನ ಸ್ಥಾಪನೆಯಾದಾಗ ಸಿದ್ದಲಿಂಗಯ್ಯನವರು ಶಿಕ್ಷಣ ಮಂತ್ರಿಯಾಗಿದ್ದರು. ಸದರಿ ಸಂಸ್ಥೆಗಾಗಿ ಸರ್ಕಾರೀ ಜಾಗವನ್ನು ಮಾರಾಟ ಮಾಡಲಾಗಿತ್ತು. ಜಮೀನಿನ ಸ್ವಾಧೀನ ಸರ್ಕಾರದಿಂದ ಇಪ್ಪತ್ನಾಲ್ಕು ಗಂಟೆಗಳೊಳಗೆ ಸಂಸ್ಥೆಗೆ ದೊರಕುವಂತೆ ಮಾಡಿದ ಸಿದ್ದಲಿಂಗಯ್ಯನವರ ಮಾತು ಮತ್ತು ಕೃತಿಗಳಲ್ಲಿ ಎಂದೂ ಹೆಜ್ಜೆ ತಪ್ಪಿದ್ದಿಲ್ಲ.

ತಾವು ಹಾದುಹೋಗುವ ಕಡೆಗಳಲ್ಲಿ ಜನಸಾಮಾನ್ಯರು ಭವಣೆಗೀಡಾದ ಸನ್ನಿವೇಶಗಳಲ್ಲಿ ಸಿದ್ದಲಿಂಗಯ್ಯನವರು ತಮ್ಮ ಕಾರನ್ನು ನಿಲ್ಲಿಸಿ ತೊಂದರೆಗೊಳಗಾದವರಿಗೆ ಸಹಾಯ ಮಾಡಿದ ನಂತರವೇ ಮುಂದಕ್ಕೆ ತೆರಳುತ್ತಿದ್ದರು. ದಾರಿಯಲ್ಲಿ ಬಸ್ಸು ಕೆಟ್ಟು ನಿಂತು ಕಂಗಾಲಾದ ಮಹಿಳಾ ಪ್ರಯಾಣಿಕರನ್ನೂ, ಮಕ್ಕಳನ್ನೂ ತಮ್ಮ ಕಾರಿನಲ್ಲಿ ಕರೆತಂದು ಹತ್ತಿರದ ಬಸ್ ನಿಲ್ದಾಣಗಳಿಗೆ ತಲುಪಿಸಿದ ಘಟನೆಗಳೂ ಇವೆ. ಇದನ್ನು ವಿರೋಧೀ ಜನರು ಅಪಹಾಸ್ಯ ಮಾಡಿದ್ದೂ ಉಂಟು. ಅಸಹಾಯಕ ಸ್ಥಿತಿಯಲ್ಲಿ ಕಂಡ ರೋಗಿಗಳನ್ನು ತಾವು ಆರೋಗ್ಯ ಮಂತ್ರಿಯಾಗಿದ್ದಾಗ ತಮ್ಮ ಕಾರಿನಲ್ಲೇ ಹತ್ತಿರದ ಆಸ್ಪತ್ರೆಗೆ ಸೇರಿಸಿ ತಾವು ಯಾರೆಂದು ಹೇಳಿಕೊಳ್ಳದೆಯೇ ಡಾಕ್ಟರರನ್ನು ಆ ರೋಗಿಗೆ ತುರ್ತಾಗಿ ಚಿಕಿತ್ಸೆ ನೀಡುವಂತೆ ವಿನಂತಿಸಿಕೊಂಡು ಡಾಕ್ಟರರ ಸಿಟ್ಟಿನ ಪ್ರತಿಕ್ರಿಯೆಗೆ

ಗುರಿಯಾದ ಪ್ರಸಂಗವೂ ಜರುಗಿದ್ದುಂಟು. ಅಸಹಾಯಕರನ್ನು ದುರ್ಬಲರನ್ನೂ, ನಿರ್ಗತಿಕರನ್ನು ಕಂಡರೆ ಇವರ ಮೃದು ಮನಸ್ಸು ಬಹು ಬೇಗ ಕರಗಿಹೋಗುತ್ತಿತ್ತು. ತಾನೊಬ್ಬ ಮಂತ್ರಿ ಎಂಬುದನ್ನು ಮರೆತು ಅವರ ಕಷ್ಟದಲ್ಲಿ ಬೆರೆತು ನೆರವಾಗುತ್ತಿದ್ದದ್ದು ಇವರ ಸರಳತೆಗೂ, ಸಜ್ಜನಿಕೆಗೂ ನಿದರ್ಶನವಾಗಿದೆ.

ಸ್ವಾತಂತ್ರ್ಯ ಚಳುವಳಿಯಲ್ಲಿ ಅನುಪಮ ಶಿಸ್ತು ಸಂಯಮಗಳನ್ನು ತೋರಿ ನೆರವಾದ ಸೇವಾದಳದ ಕಾರ್ಯಕರ್ತರನ್ನು ಸಿದ್ದಲಿಂಗಯ್ಯನವರು ಶಿಕ್ಷಣ ಮಂತ್ರಿಗಳಾಗಿದ್ದ ಅವಧಿಯಲ್ಲಿ ಶಾಲೆಗಳಿಗೆ ದೈಹಿಕ ಶಿಕ್ಷಣ ಮಂತ್ರಿಗಳಾಗಿದ್ದ ಅವಧಿಯಲ್ಲಿ ಶಾಲೆಗಳಿಗೆ ದೈಹಿಕ ಶಿಕ್ಷಣ ಉಪಾಧ್ಯಾಯರುಗಳನ್ನಾಗಿ ನೇಮಿಸಿದರು. ಶಿಕ್ಷಣದಲ್ಲಿ ಶಿಸ್ತಿನ ಪಾತ್ರವನ್ನು ಸಿದ್ದಲಿಂಗಯ್ಯನವರು ಚೆನ್ನಾಗಿ ಮನಗಂಡಿದ್ದುದರ ದ್ಯೋತಕವಾಗಿದೆ ಅವರ ಈ ಯೋಜನೆ. ಕೈಗಾರಿಕಾ ಮಂತ್ರಿಯಾಗಿದ್ದ ಅವಧಿಯಲ್ಲಿ ಸೇವಾ ದಳದ ಅನೇಕ ಪಟುಗಳನ್ನು ಸರ್.ಎಂ. ವಿಶ್ವೇಶ್ವರಯ್ಯ ಗ್ರಾಮೀಣ ಕೈಗಾರಿಕಾ ಯೋಜನೆಯಲ್ಲೂ ತೊಡಗಿಸುವ ಮೂಲಕ ಗ್ರಾಮೀಣ ಸಂಪತ್ತು ವೃದ್ಧಿಸುವಂತೆ ಮಾಡಿದರು.

ಸಿದ್ದಲಿಂಗಯ್ಯನವರು ಕೈಗಾರಿಕಾ ಮಂತ್ರಿಯಾಗಿದ್ದಾಗ ಯಾವ ಪ್ರಕರಣ ಇವರ ಮಂತ್ರಿ ಪದವಿಗೆ ಎದುರಾಯಿತೋ ಆ ಪ್ರಕರಣದಿಂದ ರಾಜ್ಯಕ್ಕೆ ಅತಿ ಸುಲಭ ದರದಲ್ಲಿ ಲಭ್ಯವಾದ ಅತ್ಯುತ್ಕೃಷ್ಟ ಗುಣಮಟ್ಟದ ತಾಮ್ರದ ತಂತಿ ದಾಸ್ತಾನು ರಾಜ್ಯದ ವಿದ್ಯುಚ್ಛಕ್ತಿ ಇಲಾಖೆ ಸಕಾಲದಲ್ಲಿ ಗ್ರಾಮಾಂತರ ಹಾಗೂ ಕೈಗಾರಿಕಾ ವಲಯಗಳಲ್ಲಿ ವಿದ್ಯುದೀಕರಣ ಕಾರ್ಯ ಯೋಜನೆಗಳನ್ನು ಜಾರಿಗೊಳಿಸುವುದಕ್ಕೆ ಅತ್ಯುಪಯುಕ್ತವಾಗಿ ಒದಗಿ ಬಂದುದು ಸಿದ್ದಲಿಂಗಯ್ಯನವರಿಗೆ ಅತ್ಯಂತ ಹೆಚ್ಚಿನ ಸಂತೃಪ್ತಿಯನ್ನು ನೀಡಿದ ವಿಷಯವಾಗಿದೆ.

1955ರಲ್ಲಿ ಇವರು ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ನೀಡಿದ ತತ್‌ಕ್ಷಣದಲ್ಲಿ ಸಿದ್ದಲಿಂಗಯ್ಯನವರು ಅಂತರ ರಾಷ್ಟ್ರೀಯ ಸಮಾಜಕಾರ್ಯ ಸಮ್ಮೇಳನದ ರಾಷ್ಟ್ರೀಯ ಸಮಾವೇಶದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಲು ಒಪ್ಪಿಕೊಂಡರು. ಇದರಿಂದ ಅವರಿಗೆ 1954ರಲ್ಲಿ ಟೊರಾಂಟೊದಲ್ಲಿ ನಡೆದ ಅಂತರ್ ರಾಷ್ಟ್ರೀಯ ಸಮಾಜಕಾರ್ಯ ಸಮಾವೇಶದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸುವ ಅವಕಾಶ ದೊರೆಯಿತು. ಸಮಾಜ ಸೇವೆಗೆ ಕಟಿಬದ್ಧರಾಗಿದ್ದ ಸಿದ್ದಲಿಂಗಯ್ಯನವರು ಈ ಅವಕಾಶದ ಪೂರ್ಣ ಲಾಭ ಪಡೆದು ವಿದೇಶಗಳಲ್ಲಿ ತಮ್ಮ ಘನತೆಯನ್ನು ಮೆರೆದರು. ಇವರ ಹಿನ್ನೆಲೆಯಲ್ಲೇ ವಿದೇಶ ಪ್ರವಾಸ ಮುಗಿಸಿ ಬಂದ ಸಿದ್ದಲಿಂಗಯ್ಯನವರು ತಮ್ಮ ಕ್ಷೇತ್ರದಲ್ಲಿ ಅನೇಕ ಸಮಾಜ ಸುಧಾರಕ ಕಾರ್ಯಗಳನ್ನು ಕೈಗೊಂಡರು. ಅವುಗಳಲ್ಲಿ ಗುಂಡುಮಗೆರೆ ಜಲಾಶಯದ ಕೆಳಭಾಗದ ಉಸ್ತುವಾರಿಯನ್ನು ತಾವೇ ಸ್ವತಃ ವಹಿಸಿಕೊಂಡು ಪ್ರವರ್ತಿಸಿದುದು ಕೃಷಿಕ ಸಮಾಜಕ್ಕೆ ಇವರು ನೀಡಿದ ಅತ್ಯುತ್ಕೃಷ್ಟ ಕೊಡುಗೆಯಾಗಿದೆ. ಎಲ್ಲಕ್ಕಿಂತಲೂ ಮಿಗಿಲಾಗಿ ಶಾಸಕರಾಗಿ, ಸಚಿವರಾಗಿ ಅಹಂಕಾರವನ್ನು, ಭೋಗಾಕಾಂಕ್ಷೆಗಳನ್ನು, ಸ್ವಾರ್ಥ ಪ್ರವೃತ್ತಿಯನ್ನು ಮೆಟ್ಟಿನಿಂತು ಬದುಕಿನ ನೀತಿಪದ್ಧತಿಯನ್ನೂ ರಾಜಕೀಯ ಪ್ರಾಮಾಣಿಕತೆಯನ್ನೂ ಸಾರಿದ ಆದರ್ಶಪುರುಷ ಶ್ರೀ ಸಿದ್ದಲಿಂಗಯ್ಯ.

ದೇಶಗಳಲ್ಲಿದ್ದಂತೆ, ಅವಶ್ಯಕತೆಗಳು ಯಾವಾಗಲೂ ಸಂಪನ್ಮೂಲಗಳನ್ನೂ ಮೀರಿ ನಿಂತ ಪರಿಸ್ಥಿತಿ ನಮ್ಮ ದೇಶದಲ್ಲೂ ಏರ್ಪಟ್ಟಿರುವುದು ಸತ್ಯ ಸಂಗತಿ. ಇದು ಭ್ರಷ್ಟಾಚಾರದ ಇರುವಿಕೆಯನ್ನು ವಿವರಿಸಬಹುದು. ಆದರೆ ಭ್ರಷ್ಟಾಚಾರ ನ್ಯಾಯಯುತವಾದುದೆಂದು ಅದು ಎಳ್ಳಷ್ಟು ಸಮರ್ಥಿಸಲಾರದು. ಇಂಥ ಪರಿಸ್ಥಿತಿಯಲ್ಲಿ, ನಡವಳಿಕೆಯ ಮಟ್ಟವನ್ನು ಭ್ರಷ್ಟಾಚಾರ, ಸ್ವಜನಪಕ್ಷಪಾತ ಮತ್ತು ಬಡಬಡಿಕೆಯಿಂದ ಮುಕ್ತವಾಗಿರುವುದೇ ಅಲ್ಲದೇ ಇಂತಹ ಅವಗುಣಗಳ ಶಂಕೆಯಿಂದಲೂ ಅತೀತವಾಗಿರುವಂತೆ ಉನ್ನತಗೊಳಿಸುವುದು ಪ್ರಜಾಪ್ರಭುತ್ವವಾದಿ ನಾಯಕತ್ವದ ಕರ್ತವ್ಯವಾಗಬೇಕು. ಭ್ರಷ್ಟಾಚಾರಕ್ಕಿಂತಲೂ ಮಿಗಿಲಾಗಿ, ಸುತ್ತಲೂ ಸ್ವಜನಪಕ್ಷಪಾತದ ಆರೋಪ - ಪ್ರತ್ಯಾರೋಪಗಳ ನಡುವೆಯೂ ನಾಯಕರೂ, ಮಂತ್ರಿಗಳೂ ದಿನೇ ದಿನೇ ಹೆಚ್ಚು ಹೆಚ್ಚು ಶ್ರೀಮಂತರಾಗುತ್ತಾ ಮೆರೆಯುವುದು ಪಕ್ಷ ಸರ್ಕಾರದ ಅವಗುಣಗಳಲ್ಲಿ ಒಂದು. ಈ ರೀತಿಯ ಕೊಲಸಿನಲ್ಲಿ ಬಿದ್ದು ಹೊರಳಾಡುತ್ತಿರುವುದು ಕೆಲವು ರಾಜ್ಯಗಳಲ್ಲಿ ಯಾವ ಮಟ್ಟಕ್ಕೆ ಹೋಗಿದೆ ಎಂಬುದೆ ಅವರಲ್ಲಿ ಮಹಾ ಚೋರನಾರು. ಆರೋಪಗಳನ್ನು ಮಾಡುವವನಾರು. ಯಾರ ವಿರುದ್ಧ ಆರೋಪಗಳನ್ನು ಮಾಡಲಾಗಿದೆ. ಎನ್ನುವುದನ್ನು ತಿಳಿಯುವುದೇ ಅಲ್ಲಿ ಕಷ್ಟವಾಗಿರುತ್ತದೆ. ಪ್ರಜಾ ಪ್ರಭುತ್ವ ಈ ನಾಡಿನಲ್ಲಿ ಕೆಲಸ ಮಾಡುತ್ತಿರುವ ಇಂತಹ ಉಸಿರು ಕಟ್ಟಿಸುವ ವಾತಾವರಣದಲ್ಲಿ ಶ್ರೀ ಟಿ. ಸಿದ್ದಲಿಂಗಯ್ಯನವರು ತಮ್ಮ ಕೈಗಾರಿಕಾ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದ, ಮತ್ತು ಮೈಸೂರಿನ ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯನವರು ಅದನ್ನು ಅಂಗೀಕರಿಸಿದ ಕ್ರಮ ಇಡೀ ವಿಶ್ವವೇ ಮೆಚ್ಚುವಂತಹ ಒಂದು ಜ್ವಲಂತ ಉದಾಹರಣೆಯಾಗಿದೆ. ಸಿದ್ದಲಿಂಗಯ್ಯನವರು ತಮ್ಮ ಪಕ್ಷದ ಸಭೆಯೊಂದರಲ್ಲಿ ತನ್ನ ಸಹೋದರ ಸರ್ಕಾರಿ ಟೆಂಡರು ಸ್ವೀಕೃತವಾದ ಸಂಸ್ಥೆಯಲ್ಲಿ ಒಬ್ಬ ಪಾಲುದಾರನೆಂದು ಹೇಳಿದರೂ ವಾಸ್ತವವಾಗಿ ಅವರ ಸಹೋದರ ಇಂತಹ ಯಾವುದೇ ಸಂಸ್ಥೆಯ ಪಾಲುದಾರನಾಗಿರಲಿಲ್ಲವೆಂಬುದು ಕೊನೆಯಲ್ಲಿ ದೃಢಪಟ್ಟಿತು. ಆದರೆ ಅವರಾಗಲೇ ವ್ಯವಸ್ಥಿತ ಅಪಪ್ರಚಾರಕ್ಕೆ ಬಲಿಪಶುವಾಗಿ ಹೋಗಿದ್ದುದರಿಂದ ರಾಜೀನಾಮೆ ಕೊಟ್ಟಿದ್ದಲ್ಲದೆ "ಮುಂದುವರೆದ ವಿನಾಶಕಾರೀ ವಾಗ್ಯುದ್ಧಗಳು ಕಾಂಗ್ರೆಸ್‌ನ ಘನತೆ - ಗೌರವಗಳನ್ನು ಕುಂದಿಸುವುದೇ ಅಲ್ಲದೆ ರಾಷ್ಟ್ರದ ಹಿತಾಸಕ್ತಿಗಳನ್ನು ಊನಗೊಳಿಸುತ್ತದೆ" ಎಂಬ ಕಾರಣಕ್ಕೆ ಮುಖ್ಯಮಂತ್ರಿಯವರು ಅದನ್ನು ಅಂಗೀಕರಿಸುವಂತೆ ಒತ್ತಾಯಮಾಡಿದರು.

"ಈ ರಾಜೀನಾಮೆಯನ್ನು ವಿಷಾದಪೂರ್ವಕವಾಗಿ ಅಂಗೀಕರಿಸುವಲ್ಲಿ ಮುಖ್ಯಮಂತ್ರಿಗಳು ಸಿದ್ದಲಿಂಗಯ್ಯನವರು ತನ್ನ ರಾಜ್ಯಕ್ಕೆ ಸಲ್ಲಿಸಿದ ಸೇವೆಯನ್ನು ಗೌರವಿಸುತ್ತಾ "ನವ ಮೈಸೂರಿನ ನಿರ್ಮಾತೃಗಳಲ್ಲೊಬ್ಬ" ಎಂಬ ಮೆಚ್ಚುಗೆಯ ಮಾತನ್ನಾಡಿದ್ದಾರೆ. ಈ ಮೆಚ್ಚುಗೆಗೆ ಸಿದ್ದಲಿಂಗಯ್ಯನವರು ನಿಜಕ್ಕೂ ಅರ್ಹರಾಗಿದ್ದಾರೆ. ಸಿದ್ದಲಿಂಗಯ್ಯನವರು ತಮ್ಮ ರಾಜೀನಾಮೆ ಪತ್ರದಲ್ಲಿ ಸೇವೆ ಸಲ್ಲಿಸಲು ಸಂಪುಟ ಸ್ಥಾನವೊಂದೇ ಅವಕಾಶವೆಂದು ತಾವು ಭಾವಿಸುವುದಿಲ್ಲವೆಂದು ಪ್ರಕಟಿಸಿದ್ದಾರೆ. "ನಾನು (ಸಂಪುಟದ) ಒಳಗಿರುವುದಕ್ಕಿಂತಲೂ ಹೊರಗಿರುವುದರಿಂದ ಕಾಂಗ್ರೆಸ್ಸಿಗೂ, ನಾಡಿಗೂ ಇನ್ನೂ ಉತ್ತಮವಾಗಿ ಸೇವೆ ಸಲ್ಲಿಸಬಲ್ಲೆನೆಂದು ನನಗನಿಸುತ್ತದೆ" ಎಂದು ಅವರು ಹೇಳಿದ್ದಾರೆ. ಇದು ನಮ್ಮಲ್ಲಿನ ಬಹುತೇಕ ಉದಯೋನ್ಮುಖ ರಾಜಕಾರಣಿಗಳೂ ಮತ್ತು ಕೆಲವು ಹಿರಿಯ ನಾಯಕರೂ ಸಹ ಕಲಿತುಕೊಳ್ಳಬೇಕಾದ ಪಾಠ, ಇದನ್ನು ಅವರು ಚೆನ್ನಾಗಿ ಮನಸ್ಸಿಗೆ ತಂದುಕೊಳ್ಳುವುದು ವಿಹಿತ. ಪ್ರಜಾಪ್ರಭುತ್ವದಲ್ಲಿ ಅಧಿಕಾರ ಜನಸಾಮಾನ್ಯರ ಹಿತಾಸಕ್ತಿಗಳನ್ನು

ಕಾಯಲು ಉತ್ತಮ ಸಾಧನ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಸೇವಾ ಮನೋಭಾವವುಳ್ಳ ಸಾರ್ವಜನಿಕ ವ್ಯಕ್ತಿಗಳಿಗೆ ಅವಕಾಶಗಳು ಅಧಿಕಾರವಿಲ್ಲವಾದಾಗ ಕಡಿಮೆಯಾಗುತ್ತವೆ ಎನ್ನುವಂತಿಲ್ಲ. ಸದನಗಳಲ್ಲಿ, ಪಕ್ಷದ ವ್ಯವಸ್ಥೆಯಲ್ಲಿ ಮತ್ತು ನಾಡಿನಲ್ಲಿ ಪ್ರಾಮಾಣಿಕವಾದ, ಸೃಜನಾತ್ಮಕ ಕೆಲಸಗಳನ್ನು ಮಾಡಬೇಕೆನ್ನುವವರಿಗೆ ಇಂತಹ ಅವಕಾಶಗಳು ವಿಪುಲವಾಗಿವೆ. ಅಧಿಕಾರ ವಿಹೀನರಾಗುವುದನ್ನೂ, ಚುನಾವಣೆಗಳಲ್ಲಿ ಸೋಲುವುದನ್ನೂ ದುಃಖ ಕರಕವೆಂದು ಪರಿಗಣಿಸುವ, ತಮ್ಮೊಳಗೇ ಕೊರಗಿ ಕೃಶವಾಗುವ ಇಲ್ಲವೇ ಸಾರ್ವತ್ರಿಕವಾಗಿ ಎಲ್ಲರ ವಿರುದ್ಧ ವಿಷಕಾರುವ, ಕಹಿಯಾಗಿ ಮಾತನಾಡುವ ಮತ್ತು ಪರಿಸ್ಥಿತಿ ಏನೇ ಇದ್ದರೂ ಅಧಿಕಾರಕ್ಕೆ ಅಂಟಿಕೊಳ್ಳುವ ವ್ಯಕ್ತಿಗಳಾರೂ ಖ್ಯಾತಿಯನ್ನು ಗಳಿಸಲಾರರು. ಇತರರಿಗೆ ಮೇಲ್ಪಂಕ್ತಿಯಾಗಲಾರರು. ಕಾಂಗ್ರೆಸ್ಸಿನ ಒಳಗಾಗಲಿ ಹೊರಗಾಗಲಿ ಶ್ರೀ ಸಿದ್ದಲಿಂಗಯ್ಯನವರಂತಹ ವ್ಯಕ್ತಿಗಳು ನಮ್ಮಲ್ಲಿ ಹೆಚ್ಚು ಜನರಿದ್ದಷ್ಟೂ ಭವಿಷ್ಯತ್ತಿನಲ್ಲಿ ಪ್ರಜಾಪ್ರಭುತ್ವ ಈ ನಾಡಿನಲ್ಲಿ ಯಶಸ್ವಿಯಾಗಿ ರೂಪುಗೊಳ್ಳುವುದೆಂಬ ಆಶಾವಾದವನ್ನು ನಾವು ಹೊಂದಿರಬಹುದಾಗಿದೆ."

*****

ಉಪ ರಾಷ್ಟ್ರಪತಿ ಡಾ!! ಎಸ್. ರಾಧಾಕೃಷ್ಣನ್‌ರವರು ರಾಜ್ಯದ ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯನವರಿಗೆ ದಿನಾಂಕ 21-2-1953ರಂದು ಬರೆದ ಪತ್ರ ಭಾಗದ ಅನುವಾದ (ಗ್ರಂಥಕರ್ತರಿಂದ) :

"ತಮ್ಮ ಇದೇ 18ನೇ ತಾರೀಖಿನ ಪತ್ರ ಮತ್ತು ಲಗತ್ತುಗಳು ತಲುಪಿವೆ. ಅದಕ್ಕಾಗಿ ವಂದನೆಗಳು. ಸಿದ್ದಲಿಂಗಯ್ಯನವರ ರಾಜಿನಾಮೆಯಲ್ಲಿ ಕೊನೆಗೊಂಡ ಘಟನೆಗಳು ನನಗೆ ನಿಜವಾಗಿಯೂ ನೋವು ನಿರುತ್ಸಾಹವನ್ನುಂಟುಮಾಡಿದೆ. ಅವರಿಗೆ ನಾಡ ಸೇವೆ ಮಾಡುವ ಇನ್ನಿತರ ಅವಕಾಶಗಳು ದೊರೆಯುವುದೆಂದು ಭಾವಿಸುತ್ತೇನೆ. ನಿಸ್ಸಂದೇಹವಾಗಿಯೂ ಅವರೊಬ್ಬ ಪ್ರಾಮಾಣಿಕ ಮತ್ತು ಸಮರ್ಥ ಸಮಾಜ ಕಾರ್ಯಕರ್ತರಾಗಿದ್ದಾರೆ.

ಆದರಗಳೊಂದಿಗೆ,
ಎಸ್. ರಾಧಾಕೃಷ್ಣನ್."

*****

**ಬಿಹಾರದ ರಾಜ್ಯಪಾಲರಾಗಿದ್ದ ಸ್ವಾತಂತ್ರ್ಯ ಹೋರಾಟಗಾರ ಆರ್.ಆರ್. ದಿವಾಕರವರ ಒಂದು ಪತ್ರದ ಅನುವಾದ (ಗ್ರಂಥಕರ್ತರಿಂದ) :**

ರಾಜಭವನ ಪಾಟ್ನಾ
ಫೆಬ್ರವರಿ 18, 1953.

ಪ್ರಿಯ ಸಿದ್ದಲಿಂಗಯ್ಯನವರೇ,

ನೀವು ರಾಜಿನಾಮೆ ನೀಡಿದುದನ್ನು ಮತ್ತು ಅದು ಅಂಗೀಕಾರವಾದುದನ್ನು ದಿನಪತ್ರಿಕೆಗಳಲ್ಲಿ ಓದಿ ನನಗೆ ನೋವಾಯಿತು.

ಫೆಬ್ರವರಿ ಮೊದಲವಾರದಲ್ಲಿ ಎ.ಜಿ. ರಾಮಚಂದ್ರರಾಯರು ದೆಹಲಿಯಲ್ಲಿ ನನ್ನನ್ನು ಭೇಟಿಮಾಡಿದ್ದರು. ನೀವು ಮೈಸೂರು ಸಚಿವ ಸಂಪುಟದಿಂದ ರಾಜೀನಾಮೆ ನೀಡಿ ಹೊರಬರುವಂತಹ ಪ್ರಬಲವಾದ ಕಾರಣವೇನೂ ಇರಲಿಲ್ಲವೆಂಬ ಮಾತನ್ನು ಅವರು ಹೇಳಿದರು. ಪಕ್ಷದ ಸಭೆಯಲ್ಲಿ ಮೂಡಿಬಂದ ಒಂದು ಅನುದ್ದೇಶಿತ ಮತ್ತು ತಾಳಿಕೊಳ್ಳಲಾಗದ ಹೇಳಿಕೆ ನಿಮ್ಮನ್ನು ಈ ನಿರ್ಧಾರಕ್ಕೆ ತಳ್ಳಿದಂತಿದೆ.

ಏನೇ ಆದರೂ ಸಂಗತಿಗಳು ನಿಮಗೆ 'ಕೇಡುಬಯಸುವ' ಕೆಲವರು ಆರೋಪಿಸುವುದಕ್ಕಿಂತ ವಿಭಿನ್ನವಾಗಿದ್ದ ಪಕ್ಷಕ್ಕೆ ಅದನ್ನು ಸರಿಪಡಿಸಿಕೊಳ್ಳಬಹುದಿತ್ತು. ನಿಮ್ಮಂತಹ ವ್ಯಕ್ತಿ ಇಷ್ಟು ಸುಲಭವಾಗಿ ವಿರೋಧಿಗಳು ಹೆಣೆದ ಬಲೆಗೆ ಬೀಳಬಾರದಿತ್ತು.

ಈಗ ನಡೆದ ಸಂಗತಿ ಒಬ್ಬ ಸಾಮಾನ್ಯ ಪ್ರಜೆಯ ದೃಷ್ಟಿಯಲ್ಲಿ ದೋಷಾರೋಪಕ್ಕೆ ಪುಟಕೊಟ್ಟಂತಾಯಿತು. ಸತ್ಯವೇನೆಂದು ತೋರಿಸಿಕೊಟ್ಟು ಆಮೇಲೆ ರಾಜೀನಾಮೆ ನೀಡಿದ್ದರೆ ಅದರ ಪರಿಣಾಮ ಬೇರೆಯೇ ಆಗುತ್ತಿತ್ತು.

ಇದೆಲ್ಲವೂ 'ಆಗಿ ಹೋದುದಕ್ಕೆ ಅತ್ತಂತೆ' ಎಂಬುದು ನನಗೆ ಗೊತ್ತು. ಅದರೆ ಸಹವಂದಿಗರಾಗಿ ಒಂದೇ ಚಳುವಳಿಯಲ್ಲಿ ನಾಡಿನ ಹಿತಕ್ಕಾಗಿ ಜೊತೆಗೂಡಿ ಶ್ರಮಿಸಿದವರಾಗಿ ನನ್ನ ಭಾವನೆಗಳನ್ನು ಅನಿಸಿಕೆಗಳನ್ನು ನಿಮಗೆ ತಿಳಿಯಪಡಿಸಬೇಕೆನಿಸಿತು. ನಿಮ್ಮ ಮುಂದಿನ ಕಾರ್ಯಕ್ರಮವೇನೆಂದು ನನಗೆ ತಿಳಿಯದು. ನೀವು ಉತ್ತರ ದೇಶಕ್ಕೆ ಬಂದಾಗ ಇಲ್ಲಿಗೆ ಬರಲು ಮರೆಯುವುದಿಲ್ಲವಷ್ಟೆ.

ನಿಮ್ಮ ವಿಶ್ವಾಸಿ,
ಆರ್.ಆರ್. ದಿವಾಕರ."

ಮದರಾಸಿನ ಮುಖ್ಯಮಂತ್ರಿ ಸಿ. ರಾಜಗೋಪಾಲಾಚಾರಿಯವರು ರಾಜ್ಯದ ಮುಖ್ಯಮಂತ್ರಿ ಕೆ. ಹನುಮಂತಯ್ಯನವರಿಗೆ ತಾರೀಖು 20-2-1953 ರಂದು ಬರೆದ ಪತ್ರ ಭಾಗದ ಅನುವಾದ (ಗ್ರಂಥಕರ್ತರಿಂದ):

"ಸಜ್ಜನರಿಗೆ ಸಾರ್ವಜನಿಕ ಸೇವೆಯ ಹಾದಿ ಹೆಚ್ಚು ಹೆಚ್ಚು ದುರ್ಗಮವಾಗುತ್ತಿದೆ. 'ನಿರಂಕುಶ ಪ್ರಭುತ್ವದ' ಕಾಲದಲ್ಲಿ ಅಪಾಯಗಳು, ತೊಂದರೆಗಳು ಒಂದು ವಿಧವಾಗಿದ್ದವು. 'ಪ್ರಜಾ ಸರ್ಕಾರಗಳ' ಕಾಲದಲ್ಲಿ ಬೇರೊಂದು ತರಹದ ಅಪಾಯಗಳು ತಲೆದೋರಿವೆ.

ಸಿದ್ದಲಿಂಗಯ್ಯನವರು ಅನುಭವಿಸಬೇಕಾಗಿ ಬಂದ ಕಿರುಕುಳಗಳಿಂದ ನನಗೆ ತುಂಬಾ ಖೇದವಾಗಿದೆ. ಅವರಿಗೆ ನನ್ನ ಶುಭ ಕಾಮನೆಗಳನ್ನು ತಿಳಿಸಿರಿ.

ಸಿ. ರಾಜಗೋಪಾಲಚಾರಿ"

## ಉಪಸಂಹಾರ

ಖ್ಯಾತ ಆಂಗ್ಲಕವಿ ರುಡ್ಯಾರ್ಡ್ ಕಿಪ್ಲಿಂಗ್‌ರವರ 'ಬಿ ಎ ಮ್ಯಾನ್' ಎಂಬ ಶೀರ್ಷಿಕೆಯ ಕವನ ತನ್ನ ವಿದ್ಯಾರ್ಥಿದೆಸೆಯಿಂದಲೂ ತನಗೆ ಅತಿ ಪ್ರಿಯವೆನಿಸಿತ್ತು ಎಂದು ಸಿದ್ದಲಿಂಗಯ್ಯನವರು ಹೇಳಿದ್ದಾರೆ ಪರಿಸರ ಮಾನವನನ್ನು ರೂಪಿಸುತ್ತದೆ, ನಿಜ. ಆದರೆ ಪರಿಸರ ಸಾರ್ವತ್ರಿಕವಾಗಿದ್ದರೂ ಎಲ್ಲರ ವ್ಯಕ್ತಿತ್ವ ಒಂದೇ ತೆರನಾಗಿ ರೂಪುಗೊಳ್ಳುವುದಿಲ್ಲ. ಅನುಭವಗಳು ಮಾನವತೆಯನ್ನು ಪರಿಪಕ್ವಗೊಳಿಸುತ್ತದೆಯಾದರೂ ಪರಿಪಕ್ವಗೊಳ್ಳಲು ಎಲ್ಲರೂ ಒಂದೇ ಬಗೆಯ ಕೈಂಕರ್ಯವನ್ನು ಅವಲಂಬಿಸುವುದಿಲ್ಲ. ಪರಿಸರದಿಂದ ಪ್ರಭಾವಿತನಾಗುವಲ್ಲಿ ಅನುಭವಗಳನ್ನು ಪ್ರಜ್ಞಾಪೂರ್ವಕವಾಗಿ ಆಯ್ದು ಕೊಳ್ಳುವಲ್ಲಿ ಪ್ರತಿಯೊಬ್ಬ ಮಾನವನೂ ತನಗೇ ವಿಶಿಷ್ಟವಾದ ಒಂದು ಅಂತಃಸ್ಫೂರ್ತಿಯಿಂದ ಪ್ರೇರೇಪಿತನಾಗುತ್ತಾನೆ. ಈ ಅಂತಸ್ಫೂರ್ತಿಯೇ 'ಸಂಸ್ಕಾರ' ವೆಂದು ಹೇಳಲ್ಪಡುವುದು. ಸಂಸ್ಕಾರದಿಂದ ಸ್ವಭಾವ ರೂಪಿತವಾಗುತ್ತದೆ.

ನಮ್ಮ ನಮ್ಮ ಸ್ವಭಾವಗಳು ನಮಗೇ ತಿಳಿಯಬರುವುದಿಲ್ಲ. ಆದರೆ ನಿಸರ್ಗದಲ್ಲಿ ವ್ಯಕ್ತವಾಗುವ ಕೆಲವು ಸಂಗತಿಗಳು, ಭಾವನೆಗಳು ನಮಗೆ ಹೆಚ್ಚು ಪ್ರಿಯವೆನಿಸುತ್ತವೆ. ಇಂಥ ಪ್ರಿಯವಾದ ಭಾವನೆಗಳಲ್ಲಿ ನಮ್ಮ ಸ್ವಭಾವ ತನ್ನನ್ನು ತಾನು ಗುರ್ತಿಸಿಕೊಳ್ಳುವುದೆನ್ನುವುದು ಮನಃಶಾಸ್ತ್ರಕ್ಕೆ ತಿಳಿದ ಸತ್ಯ. ಹಾಗಾಗಿ ಈ ಕವನ ಸಿದ್ದಲಿಂಗಯ್ಯನವರ ಬದುಕಿನ ಆಳವನ್ನು ಬಿಂಬಿಸಿರಬಹುದೇ? ನೋಡೋಣ:

" ಮಾನವನಾಗಿರು "

ಪರಿಸರಿಗಳು ತಮ್ಮ ಕಿಡಿಗೇಡಿತನದಿಂದಲೇ ತಮಗೆ ಕೇಡು ತಂದುಕೊಂಡು
ಅದಕ್ಕೆ ನೀನು ಕಾರಣನೆಂದು ದೂಷಿಸುವಾಗಲೂ ವಿಚಲಿತನಾಗದಿದ್ದರೆ
ಎಲ್ಲರೂ ನಿನ್ನನ್ನು ಸಂದೇಹಿಸಿದಾಗಲೂ ಆತ್ಮವಿಶ್ವಾಸವನ್ನು ಬಿಡದೆ,
ಸಂಶಯ ಮಾನವ - ಪ್ರವೃತ್ತಿಯೆಂದು ತಿಳಿದು ತಾಳಿಕೊಳ್ಳಬಲ್ಲೆಯಾದರೆ.

ಸದಾ ಸಾವಧಾನಿಯಾಗಿದ್ದು ಬೇಸರಿಸದೆ ಕಾಯಬಲ್ಲೆಯಾದರೆ
ನಿನ್ನ ಬಗ್ಗೆ ಪರರು ಹುಸಿಮಾತುಗಳನ್ನಾಡಿದರೂ ನೀನು ಸುಳ್ಳಾಡದವನಾದರೆ,
ಸ್ವತಃ ದ್ವೇಷಿತನಾಗಿಯೂ ಪರರನ್ನು ನೀನು ದ್ವೇಷಿಸುವುದಿಲ್ಲವಾದರೆ
ಸಜ್ಜನಾಗ್ರಣಿಯಂತೆ ತೋರಿಸಿಕೊಳ್ಳದೆ; ಅತಿ ಜಾಣನಂತೆ ಮಾತನಾಡದೆ, ಇರಬಲ್ಲೆಯಾದರೆ

ಕನಸು ಕಾಣಬಲ್ಲವನಾಗಿ ಕನಸುಗಳ ದಾಸನಾಗದಿದ್ದರೆ
ಯೋಚಿಸಲು ಬಲ್ಲವನಾಗಿ ಯೋಚಿಸುವುದೇ ನಿನ್ನ ಗುರಿಯಾಗದಿದ್ದರೆ,
ಸೋಲನ್ನೂ ಗೆಲುವನ್ನೂ ಸಾಪೇಕ್ಷ ಸಿದ್ಧಿಗಳೆಂದು ತಿಳಿದು
ಎರಡನ್ನೂ ಸಮಾನ ಚಿತ್ತದಿಂದ ಸ್ವೀಕರಿಸಬಲ್ಲೆಯಾದರೆ

ನೀನಾಡಿದ ಸತ್ಯದ ಮಾತುಗಳನ್ನು, ಮೂರ್ಖರು ಬಲಿಯಾಗುವಂತೆ,
ಕುಹಕಿಗಳು ತಿರುಚಿ ಆಡುವುದನ್ನು ಕೇಳಿ, ತಾಳಿಕೊಳ್ಳುವೆಯಾದರೆ
ಬದುಕನ್ನೇ ಧಾರೆ ಎರೆದು ಮಾಡಿದ ಸಾಧನೆಗಳು ಮುರಿದುಬಿದ್ದಾಗ
ಮತ್ತೆ ಕುಳಿತು ಸವೆದ ಸಲಕರಣೆಗಳಿಂದಲೇ ಪುನಃ ಕಟ್ಟಬಲ್ಲೆಯಾದರೆ

ನಿನ್ನ ಅರ್ಜನೆಗಳೆಲ್ಲವನ್ನು ಒಂದೇ ಹಿಡಿ ಮಾಡಿ ಕಳವಳವಿಲ್ಲದೆ
ಒಂದೇ ಏಸೆತಕ್ಕೆ ದೂರ ಬಿಸುಡಿಬಿಡಬಲ್ಲೆಯಾದರೆ
ಅವು ಕಳೆದುಹೋದರೂ ತಳಮಳಗೊಳ್ಳದೆ ಮತ್ತೊಮ್ಮೆ
ಅವುಗಳನ್ನು ಗಳಿಸಿಕೊಳ್ಳುವತ್ತ ಪ್ರಯತ್ನಶೀಲನಾಗುವೆಯಾದರೆ

ನಿನ್ನ ಹೃದಯ, ಸ್ನಾಯು, ದಮನಿಗಳನ್ನು ಅವು ನಶಿಸಿ ಹೋದಾಗಲೂ
ಉಪಯುಕ್ತವಾಗಿ ಒದಗಿಬರುವಂತೆ ಅವುಗಳನ್ನು ರೂಢಿಸಿಕೊಂಡು
'ಬಿಡಬೇಡ !' ವೆಂದು ಪಟ್ಟುಹಿಡಿದ ಸಂಕಲ್ಪವೊಂದನ್ನುಳಿದು
ನೀನೇ ಸರ್ವ ಶೂನ್ಯನಾದಾಗಲೂ ಸಂಕಲ್ಪವನ್ನು ಬಿಡದೆ ಪ್ರಯತ್ನಶೀಲನಾದರೆ

ಜನಕೋಟಿಯಲ್ಲಿ ಬೆರೆತೂ ನಿನ್ನ ಸೌಶೀಲ್ಯವನ್ನುಳಿಸಿಕೊಂಡೆಯಾದರೆ
ಅರಸುಗಳನೊಳನಾಡಿಯೂ ಜನಸಾಮಾನ್ಯರಿಂದ ದೂರಾಗದವನಾದರೆ
ಮಿತ್ರರಿರಲಿ, ಶತ್ರುಗಳಾದರೂ ನಿನಗೆ ನೋವುಂಟುಮಾಡದಂತಾದರೆ
ನಿನ್ನಲ್ಲಿ ಎಲ್ಲರಿಗೂ ಮನ್ನಣೆ ಇದ್ದು ಯಾರೊಬ್ಬರೂ ಅತಿ ಮಾನ್ಯರೆನ್ನುವಂತಿಲ್ಲದಿದ್ದರೆ

ಪ್ರತಿಯೊಂದು ಕ್ಷಮಾಶೂನ್ಯ ನಿಮಿಷವನ್ನೂ ಅರವತ್ತು ಕ್ಷಣಗಳಷ್ಟು
ಮುನ್ನಡೆದ ಗತಿಯಿಂದ ತುಂಬಬಲ್ಲೆಯಾದರೆ
ಈ ವಿಶ್ವ ಮತ್ತು ಇದರಲ್ಲಿರುವ ಸಕಲವೂ ನಿನ್ನದೇ ಆಗುತ್ತದೆ.
ಹೆಚ್ಚೇನು ! ನೀನು ಮಾನವನೇ ಆಗುವೆ, ಸುತನೇ !

ರುಡ್ಯಾರ್ಡ್ ಕೆಪ್ಲಿಂಗ್
(ಗ್ರಂಥಕರ್ತನ ಅನುವಾದ)

ಸಿದ್ದಲಿಂಗಯ್ಯನವರ ಬದುಕು ಈ ಕವನದ ಸಕಲ ಭಾವಗಳನ್ನೂ ಪ್ರತಿಬಿಂಬಿಸಿ ಸಾಗಿರುವುದು ಅಚ್ಚರಿಯ ಮಾತಲ್ಲ !

" ಸತ್ಯಂ ಶಿವಂ ಸುಂದರಂ"

## ಗ್ರಂಥ ಋಣ


1. ಶುದ್ಧಸೇವೆಯ ಸಿದ್ದಲಿಂಗಯ್ಯ (ಸಂ : ಎನ್.ಎಸ್. ಹರ್ಡೀಕರ್)
   (ಸಿದ್ದಲಿಂಗಯ್ಯ ಸನ್ಮಾನ ಸಮಿತಿ) (1975)

2. Karnataka Through the Ages
   (Government of Karnataka) (1968)

3. ಕರ್ನಾಟಕ ಚರಿತ್ರೆ (ಸಂಪುಟ - 7)
   (ಕನ್ನಡ ವಿಶ್ವವಿದ್ಯಾಲಯ)

4. ಕರ್ನಾಟಕ ಏಕೀಕರಣ ಇತಿಹಾಸ - ಹೆಚ್.ಎಸ್. ಗೋಪಾಲರಾವ್

5. Anniebeasant Birth Centenery Book
   (The Beasant Centenery Celebration) (1947)

6. ನಗರ್ತ ಜನಾಂಗದ ಅಧ್ಯಯನ - ಶ್ರೀಮತಿ ಇಂದಿರಾ ಶಿವಣ್ಣ

7. ಬಿ.ಎ.ಎಸ್.ವಿ. ಶತಮಾನೋತ್ಸವ ಸಂಚಿಕೆ
   (ಶತಮಾನೋತ್ಸವ ಸಮಿತಿ) (1984)

## ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ

### (1998-1999)

ಶ್ರೀಯುತರುಗಳಾದ :

| | | |
|---|---|---|
| 1. | ಬಿ. ಬಿ. ಶಿವಪ್ಪ<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಶ್ರೀರಂಗದೇವರಾಯಲು<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ವಸಂತ ಕಮಲಾಕರ ಅಸ್ನೋಟಿಕರ<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. | ಶಶಿಲ್. ಜಿ. ನಮೋಶಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 5. | ಡಾ|| ಮಹಾದೇವ ಬಣಕಾರ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 6. | ಕೆ. ಸಿ. ಪುಟ್ಟಸಿದ್ಧಶೆಟ್ಟಿ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |

### (1999-2000)

ಶ್ರೀಯುತರುಗಳಾದ :

| | | |
|---|---|---|
| 1. | ಬಿ. ಬಿ. ಶಿವಪ್ಪ<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಕಾಕಾಸಾಹೇಬ ಪಾಂ. ಪಾಟೀಲ<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ಸಿರಾಜ್ ಶೇಖ್<br>ವಿಧಾನಸಭಾ ಸದಸ್ಯರು | ಸದಸ್ಯರು |
| 4. | ಪಿ. ಎಂ. ರಂಗನಾಥ್<br>ವಿಧಾನಸಭಾ ಸದಸ್ಯರು | ಸದಸ್ಯರು |
| 5. | ಎನ್. ಸಂಪಂಗಿ<br>ವಿಧಾನಸಭಾ ಸದಸ್ಯರು | ಸದಸ್ಯರು |
| 6. | ಡಾ|| ವಿ.ಎಸ್. ಆಚಾರ್ಯ<br>ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 7. | ಡಾ|| ಎಚ್. ಎಲ್. ನಾಗೇಗೌಡ<br>ವಿಧಾನ ಪರಿಷತ್ ಸದಸ್ಯರು | |
| 8. | ಕೆ. ಸಿ. ಪುಟ್ಟಸಿದ್ಧಶೆಟ್ಟಿ<br>ವಿಧಾನ ಪರಿಷತ್ ಸದಸ್ಯರು | |



ಮುದ್ರಕರು : ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು, ಕಾಸೂ-ಪಿ-2165 ಪಿ.10/ಪಿ.4